ಜೆ. ಜ್ಞಾನಾನಂದ

# ಶಿಲ್ಪ ವಿದ್ಯಾ ರಹಸ್ಯೋಪನಿಷತ್ತು



ಸಂಸ್ಕೃತಿ ಸಾಹಿತ್ಯ ಪ್ರಸಾರ ಸಮಿತಿ, ಕೆಜಿಎಫ್ 563 115

ಜಿ. ಜ್ಞಾನಾನಂದ

# ಶಿಲ್ಪವಿದ್ಯಾ ರಹಸ್ಯೋಪನಿಷತ್ತು



ತಿರುಮಲ ತಿರುಪತಿ ದೇವಸ್ಥಾನಗಳ
ಧಾರ್ಮಿಕ ಕೃತಿಗಳ ಪ್ರಕಟಣೆಗೆ ಧನಸಹಾಯದ
ಯೋಜನೆಯ ಅನ್ವಯ ಉದಾರ ಧನಸಹಾಯದಿಂದ
ಪ್ರಕಟವಾಗಿದೆ.

ಸಂಸ್ಕೃತಿ ಸಾಹಿತ್ಯ ಪ್ರಸಾರ ಸಮಿತಿ
ಜ್ಞಾನಭಂಡಾರ, ಭಾರತ್ ನಗರ, ಕೆ.ಜಿ.ಎಫ್.-563 115.

# ಮುನ್ನುಡಿ

ಶಿಲ್ಪವಿದ್ಯಾ ರಹಸ್ಯೋಪನಿಷತ್ತಿನ ಮುದ್ರಿತ ಪ್ರತಿಯು ಮುನ್ನುಡಿಗಾಗಿ ನನಗೆ ತಲುಪಿದಾಗ ತುಂಬಾ ಸಂತೋಷವಾಯಿತು. ಈ ಉಪನಿಷತ್ತನ್ನು ಅನೇಕ ವಿದ್ಯಾರ್ಥಿಗಳಿಗೆ ನಾನೇ ಉಪದೇಶಿಸಿದ್ದೇನೆ. ಇದನ್ನೇ 'ಮಹಾ ಶಿಲ್ಪೋಪನಿಷತ್ತು' ಎಂದೂ ಕರೆಯುತ್ತಾರೆ. ನಾನು ಈ ಉಪನಿಷತ್ತಿನ ಬಗ್ಗೆ ಕೇಳಿದ್ದು ನನ್ನ ಎಳೆಯ ವಯಸ್ಸಿನಲ್ಲಿಯೇ. ಸಾಧಾರಣವಾಗಿ ಪರಂಪರೆಯಿಂದ ಶಿಲ್ಪಾಧ್ಯಯನವನ್ನು ನಡೆಸುವ ಎಲ್ಲರೂ ಈ ಉಪನಿಷತ್ತಿನ ಸ್ವಲ್ಪ ಭಾಗವನ್ನಾದರೂ ಕಂಠಪಾಠ ಮಾಡಿರುತ್ತಾರೆ. ಅನೇಕ ಬಾರಿ ಈ ಉಪನಿಷತ್ತಿನ ವಾಕ್ಯಗಳನ್ನು ಶಿಲ್ಪದ ಮಹತ್ವವನ್ನು ಸಾರಲೆಂದು ಉಲ್ಲೇಖಿಸುತ್ತಾರೆ.

ಪ್ರಸ್ತುತ ಸಂಸ್ಕರಣದಲ್ಲಿ ಕೌಮಾರಭಾಷ್ಯವನ್ನು ಸೇರ್ಪಡೆ ಮಾಡಿದ್ದಾರೆ. ಈರೀತಿ ಭಾಷ್ಯದೊಂದಿಗೆ ಉಪನಿಷತ್ತನ್ನು ಪ್ರಕಟಪಡಿಸಿದ್ದವರು ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳು. ಅವರು ಭಾಷ್ಯದ ಕನ್ನಡ ಅನುವಾದವನ್ನು ಮಾತ್ರವೇ ಕೊಟ್ಟಿದ್ದರೆ, ಪ್ರಸ್ತುತ ಸಂಸ್ಕರಣದಲ್ಲಿ ಸಂಪಾದಕರು ಸುಲಭವಾಗಿ ಗ್ರಾಹ್ಯವಾಗುವ ರೀತಿಯಲ್ಲಿ ಸಂಸ್ಕೃತ ಭಾಷ್ಯವನ್ನು ಅನುವಾದಿಸುವುದರೊಂದಿಗೆ ತಮ್ಮ ವೈದುಷ್ಯ ಮತ್ತು ವಿಪುಲ ಅಧ್ಯಯನದ ಫಲವಾಗಿ ಬಹು ವಿವರಗಳನ್ನು ಸೂಕ್ತ ಸಂದರ್ಭಗಳಲ್ಲಿ ಹೇಳುತ್ತಾ ಹೋಗಿದ್ದಾರೆ. ನನಗೆ ಬಹುವಾದ ಸಂತಸವನ್ನುಂಟುಮಾಡಿದ ಭಾಗವೆಂದರೆ ಉಪನಿಷತ್ತಿನ ೧೪ನೆಯ ಮಂತ್ರಕ್ಕೆ ಅವರು ನೀಡಿರುವ ೩೫ ಪುಟಗಳ ವಿವರಣೆ. ಈ ವಿವರಣೆಯಲ್ಲಿ ಅವರು ೫೯ ಆಕರಗಳನ್ನು ಉಲ್ಲೇಖಿಸಿದ್ದಾರೆ! ಈ ರೀತಿಯ ಅನೇಕ ವಿವರಗಳು ಉಪನಿಷತ್ತಿನ ಬೇರೆ ಬೇರೆಯ ಭಾಗಗಳಲ್ಲೂ ಕಾಣಬರುತ್ತದೆ. ಇವು ಭಾಷ್ಯದಲ್ಲಿ ಬಹುಸೂಚ್ಯವಾಗಿಇರುವ ಸಂಗತಿಗಳು ಮತ್ತು ಅನಿವಾರ್ಯವಾಗಿ ಈ ಉಪನಿಷತ್ತಿನ ಅಭ್ಯಾಸಿಯು ತಿಳಿಯಬೇಕಾಗಿರುವ ವಿವರಗಳು ಇಂತು ಅಚ್ಚುಕಟ್ಟಾದ ರೀತಿಯಲ್ಲಿ ಶಿಲ್ಪವಿದ್ಯಾ ರಹಸ್ಯೋಪನಿಷತ್ತು ಕನ್ನಡದಲ್ಲಿ ಪ್ರಕಟವಾಗುತ್ತಿರುವುದು ಶಿಲ್ಪಿಗಳ ಪಾಲಿಗೆ ಒಂದು ವರದಾನವಾಗಿದೆ. ಇದಕ್ಕೂ ಮಿಗಿಲಾಗಿ ಈ ಪ್ರಕಟಣೆ

ಯಿಂದ ವೇದಶಾಸ್ತ್ರ ಪ್ರಿಯರು ಬಹುವಾಗಿ ಹರ್ಷಿಸುತ್ತಾರೆ. ಶಿಲ್ಪಿಗಳು ಮತ್ತು ಆಗಮಿಕರು ಬಹುವಾದ ಸಂತೋಷದಿಂದ ಈ ಕೃತಿಯನ್ನು ಸ್ವಾಗತಿಸುತ್ತಾರೆ ಎಂದು ನಾನು ಭಾವಿಸಿದ್ದೇನೆ. ಭಾರತದ ಯಾವುದೇ ಭಾಷೆಯಲ್ಲಿ ದೊರೆಯದ ಈ ಕೃತಿಯು ಕನ್ನಡದಲ್ಲಿ ದೊರೆಯುವಂತೆ ಮಾಡಿರುವ ಹೆಗ್ಗಳಿಕೆ ಈ ಕೃತಿಯ ಪ್ರಕಾಶಕರಿಗೆ ಸಲ್ಲುತ್ತದೆ.

ಶ್ರೀ ಜ್ಞಾನಾನಂದ ಅವರು ವೇದ, ಆಗಮ ಶಾಸ್ತ್ರಗಳನ್ನು ಆಳವಾಗಿ ಅಭ್ಯಾಸ ಮಾಡಿ ಈಗಾಗಲೇ ಹಲವಾರು ಕೃತಿಗಳನ್ನು ಪ್ರಕಟಿಸಿದ್ದಾರೆ. ಅವರ 'ವಾಸ್ತುಪುರುಷ; ನೆಲೆ-ಹಿನ್ನೆಲೆ' ಕೃತಿಯು ಪಂಡಿತರ ಮೆಚ್ಚುಗೆಯನ್ನು ಗಳಿಸಿರುವಂತೆಯೇ ಶ್ರೀಸಾಮಾನ್ಯರ ಮನ್ನಣೆಯನ್ನೂ ಪಡೆದಿದೆ. ಶಾಸ್ತ್ರ ಸಂಶೋಧನಾ ಕೃತಿಯಾಗಿದ್ದರೂ ತೀರ ಕಡಿಮೆ ಅವಧಿಯಲ್ಲಿ ಮರುಮುದ್ರಣಗೊಂಡಿರುವುದು ಒಂದು ವಿಶೇಷ. ಅವರಿಂದ ಇದೇ ರೀತಿಯಾಗಿ ಶಿಲ್ಪಾಗಮಕ್ಕೆ ಸಂಬಂಧಿಸಿದ ಇತರ ಕೃತಿಗಳು ಶೀಘ್ರವಾಗಿ ಪ್ರಕಟವಾಗಲಿ ಎಂದು ಹಾರೈಸುತ್ತೇನೆ.

ಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಶ್ರೀ ಜ್ಞಾನಾನಂದ ಅವರು ತಮ್ಮ ಸಂಪಾದಕರ ನುಡಿಯಲ್ಲಿ ವಿಶ್ಲೇಷಿಸಿ ವಿವರಿಸಿದ್ದಾರೆ. ಆದ್ದರಿಂದ ಅವುಗಳಲ್ಲಿ ಯಾವುದರ ಪ್ರಸ್ತಾಪವೂ ಪುನರುಕ್ತಿ ದೋಷದ ಭಯದಿಂದ ನಾನು ಮಾಡುತ್ತಿಲ್ಲ. ಶ್ರೀ ಜ್ಞಾನಾನಂದರು ಈ ಕೆಲಸವನ್ನು ಸಮರ್ಥವಾಗಿ ನಿರ್ವಹಿಸಿರುವುದಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ. ಕೃತಿಯ ಪ್ರಕಟಣೆಯನ್ನು ವಹಿಸುತ್ತಿರುವ ಸಂಕೃತಿ ಸಾಹಿತ್ಯ ಪ್ರಸಾರ ಸಮಿತಿಯವರಿಗೂ, ಅದರ ಸದಸ್ಯವರ್ಗದವರಿಗೂ ನನ್ನ ಅಭಿನಂದನೆಗಳು.

1-7-574/15 ಡಾ|| ಪದಪಾಠೀ ನಾಗೇಶ್ವರರಾವ್
ಜೆಮಿನಿ ಕಾಲೋನಿ ಪ್ರಿನ್ಸಿಪಾಲರು, ಶಿಲ್ಪಕಳಾಶಾಲ
ಹೈದರಾಬಾದು ಹೈದರಾಬಾದು

# ಸಂಪಾದಕರ ಮಾತು

ವೈದಿಕ ಮತ್ತು ಆಗಮಿಕ ಸಾಹಿತ್ಯ ಲೋಕಕ್ಕೆ ಪ್ರಸ್ತುತ ಪ್ರಕಟಣೆಯದಾದ 'ಶಿಲ್ಪವಿದ್ಯಾ ರಹಸ್ಯೋಪನಿಷತ್ತು' ವಿಶೇಷವಾದ ಕೊಡುಗೆಯಾಗಿದೆ. ಸಾಧಾರಣವಾಗಿ ಶಿಲ್ಪವಿದ್ಯಾ ಶಾಲೆಗಳಲ್ಲಿ ಮೊದಲಿಗೆ ವಾಸ್ತು ಸೂತ್ರೋಪನಿಷತ್ತಿನ ಸೂತ್ರಗಳನ್ನು ತಮ್ಮ ಶಿಷ್ಯರಿಗೆ ಕಂಠಪಾಠವನ್ನಾಗಿ ಹೇಳಿಕೊಟ್ಟು ತರುವಾಯ ಶಿಲ್ಪ ವಿದ್ಯೆಯ ಮಹತ್ವವನ್ನು ಮನದಟ್ಟು ಮಾಡಲು ಶಿಲ್ಪ ವಿದ್ಯಾರಹಸ್ಯೋಪನಿಷತ್ತನ್ನು ಬೋಧಿಸುವುದು ರೂಢಿಯಲ್ಲಿತ್ತು. ಆಧುನಿಕ ವಿದ್ಯೆ ಮತ್ತು ವಿದ್ಯಾ ಪದ್ಧತಿಗಳಿಂದ ಸಾಂಪ್ರದಾಯಿಕ ಬೋಧನೆಯು ನಶಿಸಿದಂತೆ ಈ ಕೃತಿಗಳು ಮರೆ ಸೇರುತ್ತಿವೆ.

ಈ ಉಪನಿಷತ್ತನ್ನು ಮೊದಲಿಗೆ ಪ್ರಕಟಿಸಿದವರು ವಡ್ಡೆಪಾಟಿ ನಿರಂಜನ ಶಾಸ್ತ್ರೀ ಅವರು. ಅವರು ತಮ್ಮ 'ವಿಶ್ವಕರ್ಮ ಬ್ರಾಹ್ಮಣ ವಂಶಾಗಮಮು' (೧೯೩೪) ಕೃತಿಯಲ್ಲಿ ಶಿಲ್ಪ ಕಾಂಡದ ಕೊನೆಯಲ್ಲಿ 'ಮಹಾಶಿಲ್ಪೋಪನಿಷತ್ತು' ಎಂಬ ಹೆಸರಿನಲ್ಲಿ ಈ ಉಪನಿಷತ್ತನ್ನು ಕೊಟ್ಟಿದ್ದಾರೆ. ಅಲ್ಲಿ ಈ ಉಪನಿಷತ್ತಿಗೆ ಯಾವುದೇ ಭಾಷ್ಯವನ್ನು ಕೊಟ್ಟಿಲ್ಲ. ಇದಕ್ಕೂ ಮೊದಲು ಪ್ರಕಟವಾಗಿರುವ ನಾರಾಯಣಶಾಸ್ತ್ರಿ ಕ್ಷೀರಸಾಗರ ಅವರು 'ವಿಶ್ವಬ್ರಹ್ಮ ಕುಲೋತ್ಸಹ'ದಲ್ಲಿ ಶಿಲ್ಪೋಪನಿಷತ್ತನ್ನು ಆಕರ ಗ್ರಂಥವಾಗಿ ಪಟ್ಟಿಮಾಡಿ ಈ ಉಪನಿಷತ್ತಿನ ಹಲವು ಮಂತ್ರಗಳನ್ನು ತಮ್ಮ ಗ್ರಂಥದಲ್ಲಿ ಅವರು ಉದ್ಧರಿಸಿರುವುದುಂಟು. ಆದರೆ ಉಪನಿಷತ್ತನ್ನು ಕೌಮಾರ ಭಾಷ್ಯದೊಂದಿಗೆ ಕರ್ನಾಟಕ ಭಾಷಾನುವಾದದೊಂದಿಗೆ ೧೯೪೮ರಲ್ಲಿ ಪ್ರಕಟಿಸಿದ ಕೀರ್ತಿ ಶ್ರೀಮಜ್ಜಗದ್ಗುರು ನಾಗಲಿಂಗ ಪರಿವ್ರಾಜಕಾಚಾರ್ಯ ಪೀಠಾಧೀಶ್ವರ ಶಿಲ್ಪ ಸಿದ್ಧಾಂತಿ ಶಿವಯೋಗಿ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರಿಗೆ ಸಲ್ಲುತ್ತದೆ.

ಇಲ್ಲಿಯ ಭಾಷ್ಯವು ಸಂಪ್ರದಾಯಿಕವೂ ಪ್ರಾಚೀನವೂ ಆದ ಶೈಲಿಯಲ್ಲಿ ಲಿಂಗಷಟ್ಕದಿಂದ ಅರ್ಥವನ್ನು ವಿವರಿಸಲು ಸ್ವಪದವರ್ಣನೆಯಿಂದ ಕೂಡಿದ್ದು

ಉಪನಿಷದ್ವ್ಯಾಖ್ಯಾನುಸಾರ ಪದಗಳಿಗೆ ತರ್ಕಬದ್ಧವಾದ ಶಾಸ್ತ್ರ ಸಮ್ಮತವಾದ ಅರ್ಥ-ತಾತ್ಪರ್ಯ ನಿರ್ಣಯಗಳನ್ನು ಮಾಡಿದೆ.

ಉಪನಿಷತ್ತಿನ ಎರಡನೆಯ ವಾಕ್ಯವು 'ಸಕಲ ನಿಗಮಾಗಮ ಸಾರ ಪಾರಗಂ' ಎಂದು ಪ್ರಾರಂಭವಾಗುವುದರಿಂದ ಈ ಉಪನಿಷತ್ತು ಖಚಿತವಾಗಿ ನಿಗಮ-ಆಗಮಗಳ ನಂತರದ ಕಾಲದಲ್ಲಿ ಅಸ್ತಿತ್ವಕ್ಕೆ ಬಂತು ಎಂಬುದನ್ನು ತಿಳಿಸುತ್ತದೆ. ಇಲ್ಲಿ ನಿಮಗ ಎಂದರೆ ಋಗಾದಿ ವೇದಗಳೆಂದು ಆಗಮವೆಂದರೆ ಕಾಮಿಕಾದಿ ಆಗಮಗಳೆಂದು ಭಾಷ್ಯಕಾರರು ವಿವರಿಸಿದ್ದಾರೆ. ಆದ್ದರಿಂದ ಈ ಉಪನಿಷತ್ತು ವೇದ ಮತ್ತು ಆಗಮಗಳಲ್ಲಿಯ ಸಂಗತಿಗಳನ್ನು ತನ್ನಲ್ಲಿ ಸಮಾ ಒಳಗೊಳಿಸಿಕೊಂಡಿದೆ ಎಂದೂ ಅರ್ಥವಾಗುತ್ತದೆ.

ಇದರ ಪ್ರಾರಂಭದಲ್ಲಿ 'ಭಗವಾನ್, ಮೇ ಮಹಾಶಿಲ್ಪ ತತ್ತ್ವರಹಸ್ಯಂ ಬ್ರೂಹೀತಿ' ಎಂದು ಬೇಡಿಕೆ ಇದೆ. ಗುರುವನ್ನು **ಭಗವಾನ್**ಎಂದು, ಶಿಲ್ಪವನ್ನು **ಮಹಾಶಿಲ್ಪ**ವೆಂದು ಸಂಬೋಧಿಸಲಾಗಿದೆ. ಭಗವಂತನಾದವನಿಗೆ ಜ್ಞಾನ-ಅಜ್ಞಾನ, ವಿದ್ಯೆ-ಅವಿದ್ಯೆಗಳು ತಿಳಿದಿರುತ್ತವೆ. ಆದ್ದರಿಂದಲೇ ಶಾಸ್ತ್ರಗತ ವಿಷಯ ಗಳನ್ನು ಚೆನ್ನಾಗಿ ವಿಮರ್ಶೆಮಾಡಿ ಅದರ ಸ್ಥೂಲ ಮತ್ತು ಸೂಕ್ಷ್ಮ ಅರ್ಥ ಗಳನ್ನು ವಿಮರ್ಶಿಸಿ ಅದರ ಸಂಪ್ರದಾಯಿಕ ಗೋಪ್ಯಗಳನ್ನೂ ತಿಳಿಯ ಹೇಳುವ ಶಕ್ತಿಯನ್ನು ಆತನು ಮಾತ್ರವೇ ಪಡೆದಿರುತ್ತಾನೆ. ಇದರಿಂದಲೇ 'ಮಹಾ ಶಿಲ್ಪ ವಿದ್ಯಾರಹಸ್ಯ' ಎಂದು ಈ ವಿಷಯವನ್ನು ಕರೆಯಲಾಗಿದೆ.

ಈ ಉಪನಿಷತ್ತು 'ಯಾಜುಷಾಥರ್ವಣ' ಎಂದು ಹೇಳಲಾಗಿದೆ. ಎಂದರೆ ಇದು ಯಜುರ್ವೇದ ಮತ್ತು ಅಥರ್ವವೇದಗಳಿಗೆ ಸೇರಿರುವ ಉಪ ನಿಷತ್ತು. ಸಾಧಾರಣವಾಗಿ ಹೀಗೆ ಎರಡು ಶಾಖೆಗಳಿಗೆ ಒಂದೇ ಉಪನಿಷತ್ತು ಸೇರಿರುವುದು ಬಹು ಅಪರೂಪದ ಸಂಗತಿ. ಬಹು ಪಾಲಿನ ಜನರು ಇದು ಅಸಂಬದ್ಧವೆಂದೂ ಹೇಳಬಹುದು. ಈ ಅಂಶವನ್ನು ಭಾಷ್ಯಾಕಾರರು ವಿವರಿ ಸುತ್ತಾರೆ—ಯಾಜುಷ ತತ್ತ್ವ ರಹಸ್ಯೋಪನಿಷದಿತಿಕೃತ್ವಾ. ಈ ಉಪನಿಷ ತ್ತಿನಲ್ಲಿ ಪ್ರತಿಪಾದಿತವಾಗಿರುವ ವಿಷಯವು ಯಜುರ್ವೇದದಲ್ಲಿ ಹೇಳಿರುವ ತತ್ತ್ವವಾಗಿದ್ದು ಅದು ರಹಸ್ಯವಾದುದಾಗಿರುತ್ತದೆ. ಆದ್ದರಿಂದ ಇಲ್ಲಿ ಪ್ರತಿ ಪಾದಿತವಾಗಿರುವ ವಿಷಯ ಳು ಯಜುರ್ವೇದದ ತತ್ತ್ವರಹಸ್ಯಗಳೇ ಆದರೂ ಅವುಗಳ ಕ್ರಿಯೆಗಳು ಥರ್ವಣಕ್ರಿಯಾ ಸಂಬಂಧ ಹೊಂದಿರುವುದರಿಂದ ಯಜು

ವೇದ ಎಂಬ ಹೆಸರಿನೊಂದಿಗೆ ಅಥರ್ವಣ ಎಂಬ ಪದವೂ ಸೇರುವುದು ಆವಶ್ಯಕವಾಗಿದೆ. ಈ ಕಾರಣದಿಂದಾಗಿ ಇದು 'ಯಜುಷಾಥರ್ವಣ' ಎಂಬುದಾಗಿಯೇ ಪ್ರಖ್ಯಾತವಾಗಿದೆ.

ಶಿಲ್ಪ ಶಬ್ದದ ಉತ್ಪತ್ತಿಯು ಮುಖಾಂತರ ನಿರ್ವಚನವನ್ನು ಹೇಳುತ್ತಾ ಶಿಲ್ಪವು ಸಮಾಧಿ ಸಿದ್ಧಿ ಸಾಧನವೆಂದು ಹೇಳಲಾಗಿದೆ. ಸಾಂಖ್ಯಾದಿ ಯೋಗ ಶಾಸ್ತ್ರಗಳಂತೆ ಇದೂ ಮಹತ್ತರವಾದ ಶಾಸ್ತ್ರವಾಗಿದ್ದು ಜಗತ್ತಿನ ಸೃಷ್ಟಿ-ಸ್ಥಿತಿ-ಪ್ರಳಯಗಳೇ ಆದಿಶಿಲ್ಪಗಳಾಗಿವೆ. ಸಕಲವನ್ನೂ ತನ್ನ ಆವರಣ ಪುಟಿಯಲ್ಲಿ ಅಡಗಿಸಿಕೊಂಡಿರುವುದರ ಕಾರಣ 'ಮಹಾಶಿಲ್ಪ' ಇದಾಗಿದೆ. ಜಗತ್ತಿನ ಸಕಲ ವ್ಯಾಪಾರವೂ ಶಿಲ್ಪವೇ ಆಗಿದ್ದು ಇದು ಎರಡು ರೀತಿಗಳಲ್ಲಿ ಸಮಾಧಿ ಸೌಖ್ಯವನ್ನು ಕರುಣಿಸುವಂತಹ ಶಕ್ತಿಯನ್ನು ಪಡೆದಿದೆ—ಮೊದಲಿನದು ಶಿಲ್ಪವನ್ನು ನಿರ್ವಹಿಸುವ ಶಿಲ್ಪಿಗೆ. ಏಕೆಂದರೆ ಚಿತ್ತೈಕಾಗ್ರತೆಯು ಇಲ್ಲದೆ ಶಿಲ್ಪವನ್ನು ಅವನು ನೆರವೇರಿಸುವುದು ಸಾಧ್ಯವಿಲ್ಲ. ಹೀಗಾಗಿ ಮೊದಲ ಸಮಾಧಿ ಸಿದ್ಧಿ ಶಿಲ್ಪಿಯೇ ಪಡೆಯುತ್ತಾನೆ. ಎರಡನೆಯದಾಗಿ ಶಿಲ್ಪವನ್ನು ವೀಕ್ಷಿಸುವ ಅಭಿಮಾನಿಯು ಶಿಲ್ಪ ಸೌಂದರ್ಯದಿಂದ ಮೋಹಿತನಾಗಿ ಅದರಲ್ಲಿ ಮಗ್ನನಾಗಿ ಸೌಂದರ್ಯಪಾನವನ್ನು ನಡೆಸುತ್ತಾ ಸಮಾಧಿ ಯೋಗವನ್ನು ಪ್ರವೇಶಿಸುತ್ತಾನೆ. ಹೀಗೆ ಶಿಲ್ಪಿಗೂ, ಶಿಲ್ಪದ ಅಭಿಮಾನಿಗೂ ಸಮಾನ ರೀತಿಯಲ್ಲಿ ಸಮಾಧಿಯನ್ನು ಕರುಣಿಸುವ ವಿಶಿಷ್ಟವಾದ ಶಿಲ್ಪವನ್ನು 'ಶಿಲ್ಪವೇದ' ಎಂದೇ ಸಂಬೋಧಿಸಲಾಗಿದೆ.

ಶಿಲ್ಪವು ವೇದವೇ? ಅಥವ ಕೇವಲ ಉಪಚಾರಕ್ಕೆ ಹಾಗೆಂದು ಕರೆಯಲಾಗಿದೆಯೋ ಎಂಬುದನ್ನು ಪರಿಶೀಲಿಸಿದಾಗ ಉಪವೇದಗಳಲ್ಲಿ ಸ್ಥಾಪತ್ಯವೇದವೆಂಬ ಭಾಗವು ಇರುವುದು ಗೋಚರಿಸುತ್ತದೆ. ಬ್ರಹ್ಮನು ತನ್ನ ಪೂರ್ವ, ಉತ್ತರ, ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳತ್ತ ಇದ್ದ ಮುಖಗಳಿಂದ ಋಗ್, ಯಜುಸ್, ಸಾಮ ಮತ್ತು ಅಥರ್ವ ವೇದಗಳೆಂಬ ನಾಲ್ಕು ವೇದಗಳನ್ನು, ಶಸ್ತ್ರ (ಹೌತ್ರ ಮಂತ್ರ) ಇಜ್ಯ (ಅಧ್ವರ್ಯುವಿನ ಮಂತ್ರ), ಸ್ತುತಿ ಸ್ತೋಮ (ಉದ್ಗಾತೃ ಮಂತ್ರ), ಪ್ರಾಯಶ್ಚಿತ್ತ (ಬ್ರಹ್ಮ ಮಂತ್ರ) ಎಂಬ ನಾಲ್ಕು ಯಜ್ಞಕರ್ಮ ವಿಶೇಷಗಳಿಗೆ, ಆಯುರ್ವೇದ (ವೈದ್ಯಶಾಸ್ತ್ರ) ಧನುರ್ವೇದ (ಯುದ್ಧಶಾಸ್ತ್ರ), ಗಾಂಧರ್ವವೇದ (ಸಂಗೀತಶಾಸ್ತ್ರ), ಸ್ಥಾಪತ್ಯವೇದ

(ವಿಶ್ವಕರ್ಮ ಸಾಧ್ಯ ಶಿಲ್ಪ ಶಾಸ್ತ್ರ) ಎಂಬ ಈ ನಾಲ್ಕು ಉಪವೇದಗಳನ್ನು ಕ್ರಮವಾಗಿ ಸೃಷ್ಟಿಸಿದನೂ [1]. ಇದರಿಂದ ಯಜ್ಞ ಕರ್ಮವು ಎಲ್ಲಿಂದ ಸೃಷ್ಟಿಗೊಂಡಿತೋ ಅಲ್ಲಿಂದಲೇ ಶಿಲ್ಪ ಕರ್ಮವು ಸೃಷ್ಟಿಗೊಂಡಿದೆ—ಅದೂ ಬ್ರಹ್ಮನ ಮುಖದಿಂದಲೇ. ಆದ್ದರಿಂದ ಯಜ್ಞ ಮತ್ತು ಶಿಲ್ಪಗಳಲ್ಲಿ ಬೇಧವಿಲ್ಲ. ಆದ್ದರಿಂದಲೇ ಶಿಲ್ಪವನ್ನು ಉಪವೇದವೆಂದು ಪರಿಗಣಿಸಲಾಗಿದೆ. ಇದರೊಂದಿಗೆ ಈ ಉಪವೇದಗಳು ಯಾವ ವೇದಗಳಿಗೆ ಉಪವೇದಗಳು ಎಂಬುದರ ನಿರ್ದೇಶನವು ಚರಣ ವ್ಯೂಹದಲ್ಲಿ ಇಂತು ದೊರೆಯುತ್ತದೆ: ಆಯುರ್ವೇದವೆಂಬ ವೈದ್ಯ ಶಾಸ್ತ್ರವು ಋಗ್ವೇದದ ಉಪವೇದ. ಧನುರ್ವೇದವೆಂಬ ಯುದ್ಧ ಶಾಸ್ತ್ರವು ಯಜುರ್ವೇದಕ್ಕೆ ಉಪವೇದ. ಗಾಂಧರ್ವವೇದವೆಂಬ ಸಂಗೀತ ಶಾಸ್ತ್ರವು ಸಾಮವೇದದ ಉಪವೇದ. ಸ್ಥಾಪತ್ಯವೇದವೆಂಬ ವಿಶ್ವಕರ್ಮರ ನಿರ್ಮಿತ ಶಿಲ್ಪ ಶಾಸ್ತ್ರವು ಅಥರ್ವವೇದದ ಉಪವೇದ. [2]

ಶಿಲ್ಪವನ್ನು ಉಪವೇದವೆಂದು ನಿರ್ದೇಶಿಸಿ ಕ್ರತುಕರ್ಮಕ್ಕೆ ಪರ್ಯಾಯವೆಂದು ಉಪದೇಶಿಸಲಾಗಿದೆ. ಅಪ ಇತ್ಯರಭ್ಯತೇ ಕ್ರತುಃ ಧೀಃ, ಶಿಲ್ಪಂ, ಇತಿ ಷಡ್ವಿಂಶತಿಕರ್ಮ ನಾಮಾನಿ ಎಂದು ನಿಘಂಟು ಕೋಶದ ದ್ವಿತೀಯಾಧ್ಯಾಯದಲ್ಲಿ ಹೇಳಲಾಗಿದೆ. ಅಪ ಎಂಬ ಶಬ್ದದಿಂದ ಪ್ರಾರಂಭಿಸಿ ಶಿಲ್ಪಂ ಎಂಬ ಶಬ್ದದ ವರೆವಿಗಿನ ಇಪ್ಪತ್ತಾರು ಶಬ್ದಗಳು ಕರ್ಮನಾಮಗಳಾಗಿರುವುದರಿಂದ ಶಿಲ್ಪ ಶಬ್ದಕ್ಕೆ ಕ್ರತು ಶಬ್ದವು ಪರ್ಯಾಯವೆಂದು ನಿಶ್ಚಿತವಾಗಿದೆ. ಆದ್ದರಿಂದ ಶಿಲ್ಪ ಕರ್ಮಕ್ಕೂ ಕ್ರತು ಕರ್ಮಕ್ಕೂ ಬೇಧವಿಲ್ಲ. ಪವಿತ್ರವಾದ ಶಿಲ್ಪ ಕರ್ಮವು ಶಿಲ್ಪಿ ಬ್ರಾಹ್ಮಣರಾದವರಿಂದಲೇ ಮಾಡಲ್ಪಡತಕ್ಕದ್ದು- ಏಕೆಂದರೆ

---

1. ಋಗ್ಯಜುಸ್ಸಾಮಾಥರ್ವಾಖ್ಯಾನ್ ವೇದಾನ್ ಪೂರ್ವಾದಿಭಿರ್ಮುಖೈಃ
ಶಸ್ತ್ರವಿಜ್ಯಾಂ ಸ್ತುತಿಸ್ತೋಮಂ ಪ್ರಾಯಶ್ಚಿತ್ತಂ ವ್ಯಧಾತ್ಕ್ರಮಾತ್ ॥ ೩೭
ಆಯುರ್ವೇದಂ ಧನುರ್ವೇದಂ ಗಾಂಧರ್ವಂ ವೇದಮಾತ್ಮಭೂಃ ।
ಸ್ಥಾಪತ್ಯಂ ಚಾ ಸೃಜದ್ವೇದಂ ಕ್ರಮಾತ್ಪೂರ್ವಾದಿಭಿರ್ಮುಖೈಃ ॥ ೩೮

2. ಆಯುರ್ವೇದಶ್ಚಿಕಿತ್ಸಾ ಶಾಸ್ತ್ರಂ ಋಗ್ವೇದಸ್ಯೋಪವೇದಃ । ಧನುರ್ವೇದೋ ಯುದ್ಧಶಾಸ್ತ್ರಂ ಯಜುರ್ವೇದಸ್ಯೋಪವೇದಃ । ಗಾಂಧರ್ವವೇದಃ ಸಂಗೀತ ಶಾಸ್ತ್ರಂ ಸಾಮವೇದಸ್ಯೋಪವೇದಃ । ಸ್ಥಾಪತ್ಯವೇದೋ ವಿಶ್ವಕರ್ಮಾದಿ ಶಿಲ್ಪಶಾಸ್ತ್ರಂ ಅಥರ್ವವೇದಸ್ಯೋಪವೇದಃ । —ಚರಣವ್ಯೂಹ, ಚತುರ್ಥ ಖಂಡ

ವೇದೋಕ್ತ ಮಂತ್ರಗಳಲ್ಲಿಯ ಧ್ಯಾನ ರೂಪಗಳನ್ನು ಸಾಕ್ಷಾತ್ಕರಿಸಿಕೊಂಡು ಪ್ರತ್ಯಕ್ಷ ವಿಗ್ರಹಗಳಾಗಿ ಸೃಷ್ಟಿಸುವ ವಿಜ್ಞಾನವೇ ಶಿಲ್ಪವೆಂದು ಹೇಳಲಾಗಿದೆ.

**ಚತ್ವಾರಿ ಶೃಂಗಾತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತಹಸ್ತಾಸೋ ಅಸ್ಯ** ಎಂಬುದು ಅಗ್ನಿಯ ಬಗ್ಗೆ ಇರುವ ವೇದಮಂತ್ರ. ಇದರ ಅನ್ವಯ ನಾಲ್ಕು ಕೊಂಬುಗಳು, ಮೂರು ಪಾದಗಳು, ಎರಡು ಶಿರಗಳು, ಏಳು ಹಸ್ತಗಳು ಇರುವ ಮೂರ್ತಿಯನ್ನು ಸೃಷ್ಟಿಸಿ ಲೋಕದ ಜನರಿಗೆ ಅಗ್ನಿದೇವನನ್ನು ಪ್ರತ್ಯಕ್ಷವಾಗಿ ತೋರುವುದೇ ಶಿಲ್ಪ. ಆದ್ದರಿಂದಲೇ ಇದು ವೇದಕ್ಕೆ ಉಪವೇದ ಎಂಬುದಾಗಿ ಪರಿಗಣಿಸಲ್ಪಟ್ಟಿರುವುದು. ಈ [illegible] ಪ್ರತ್ಯಕ್ಷೀಕರಣದ ಮಾರ್ಗವನ್ನು ವಿಜ್ಞಾನವೆಂದು ಹೇಳಲಾಗಿದೆ–**ಮೋಕ್ಷೇ ಧೀ ರ್ಜ್ಞಾನ ಮನ್ಯತ್ರ ವಿಜ್ಞಾನಂ ಶಿಲ್ಪ ಶಾಸ್ತ್ರಯೋಃ** ಇದರ ಬಗ್ಗೆ ಟೀಕೆಯನ್ನು ಬರೆಯುತ್ತಾ ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ವಿಷಯವು ವಿಜ್ಞಾನವೆಂದು ಪರಿಗಣಿಸಿದ್ದು ವಿವಿಧ ರೂಪ ಕಲ್ಪನೆಗಳನ್ನು ಸಾಕಾರ ಗೊಳಿಸುವುದೇ ವಿಜ್ಞಾನ ಎಂದು ವಿವರಿಸಿದ್ದಾನೆ. ಆದ್ದರಿಂದಲೇ ಭಾಗವತವು ದಶಮಸ್ಕಂದದಲ್ಲಿ ಈ ರೀತಿಯ ವಿವಿಧ ರೂಪ ಸೃಷ್ಟಿಯ ಬುದ್ಧಿಯನ್ನು, ಕೌಶಲ್ಯವನ್ನು ದೃಶ್ಯತೇ ಯತ್ರಹಿತ್ವಾಷ್ಟ್ರಂ ವಿಜ್ಞಾನಂ ಶಿಲ್ಪನೈಪುಣ್ಯಂ ಎಂದು ವಿವರಿಸಿದೆ. ತ್ವಷ್ಟೃ ಸಂಬಂಧವಾತವಾದ ಶಿಲ್ಪ ನೈಪುಣ್ಯವೇ ವಿಜ್ಞಾನವಾಗಿದೆ.

ಇದರಿಂದ ಶಿಲ್ಪವು ಎಷ್ಟು ಮಹತ್ತರವಾದುದೆಂಬುದು ಗೋಚರಿಸುತ್ತದೆ. ಸ್ವಯಂ ಕ್ರತು ಕರ್ಮಕ್ಕೆ ಪರ್ಯಾವಾಗಿರುವುದರಿಂದ, ಯಾವುದೇ ಕ್ರತುಕರ್ಮವು ಸಮಗ್ರವಾಗಿ ಪೂರ್ಣಗೊಳ್ಳಲು ಮಂತ್ರಾಂಗದಷ್ಟೇ ಪ್ರಧಾನವಾದ ಪಾತ್ರವು ಶಿಲ್ಪಾಂಗದ್ದಾಗಿದೆ. ಯಾಗಶಾಲೆ, ಯಜ್ಞಕುಂಡ, ಯಜ್ಞದಲ್ಲಿ ಬಳಸುವ ಪ್ರಣೀತ, ಚಮಸ ಮುಂತಾದ ವಿಶಿಷ್ಟ ಪಾತ್ರೆಗಳು, ಸೃಕ್–ಸೃವ, ಕಪಾಲ, ಸುನಾ ಮುಂತಾದ ಯಜ್ಞಾಂಗಕ್ಕೆ ವಿಶೇಷವಾದ ಆಯುಧಗಳು ಶಿಲ್ಪ ಬ್ರಾಹ್ಮಣನನಿಂದಲೇ ನಿರ್ಮಾಣವಾಗಬೇಕು. ಆದ್ದರಿಂದ ಯಜುರ್ವೇದದ ಆಚರಣೆಗೆ ಸ್ಥಾಪತ್ಯವೇದವು ಅನಿವಾರ್ಯವಾಗಿ ಬೇಕಾಗಿದೆ. ಆದ್ದರಿಂದಲೇ

ಶಿಲ್ಪವು ಯಜುರ್ವೇದವೂ ಹೌದು ಅಥರ್ವವೇದವೂ ಹೌದು. ಆದ್ದರಿಂದಲೇ ಈ ಉಪನಿಷತ್ತು 'ಯಾಜುಷಾಥರ್ವ' ಎಂದು ಹೇಳಲ್ಪಟ್ಟಿದೆ.

ಇನ್ನು ಇದು ಏಕೆ ಉಪನಿಷತ್ತಾಗಿದೆ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ.ಶಿಲ್ಪವಿದ್ಯಾರ್ಥಿ ಶಿಲ್ಪವನ್ನು ಗುರುಪದತಲದಲ್ಲಿ ಕುಳಿತು ಶಿಲ್ಪವಿದ್ಯಾರಹಸ್ಯಗಳನ್ನು ಹಲವು ವರ್ಷಗಳ ಕಾಲ ಅಭ್ಯಾಸ ಮಾಡಿದ ನಂತರ ಅವನಿಗೆ ದೀಕ್ಷಾ ಕಾಲದಲ್ಲಿ ಅವನು ಇಷ್ಟುಕಾಲ ಅಭ್ಯಾಸಮಾಡಿ ರೂಢಿಸಿಕೊಂಡಿರುವ ಶಿಲ್ಪದ ಮಹತ್ತ್ವವನ್ನು ಉಪದೇಶಿಸಲು ಬಳಸುವ ಈ ವಾಕ್ಯಗಳು ಉಪನಿಷತ್ತೇ. ಅವನು ನಿತ್ಯಾಗ್ನಿ ಹೋತ್ರಿಯಂತೆ ಜೀವನ ಪರ್ಯಂತವೂ ಶಿಲ್ಪ ಸಾಧನೆಯ ಮುಖಾಂತರ ಲೋಕ ಸಂಗ್ರಹ ಕಾರ್ಯವನ್ನು ನಡೆಸಿ ಜನಕೋಟಿಗೆಲ್ಲಾ ಮುಕ್ತಿಮಾರ್ಗವನ್ನು ಕಂಡುಕೊಳ್ಳುವುದರಲ್ಲಿ ನಿಸ್ವಾರ್ಥನಾಗಿ ನೆರವಾಗುತ್ತಾ, ತಾನೂ ಕರ್ಮಪಥದಲ್ಲಿ ಮುಂದೆ ಸಾಗಿ ಜೀವನ್ಮುಕ್ತನಾಗಬಹುದಾದ ಪ್ರಶಸ್ತಮಾರ್ಗವಿದು ಎಂದು ತಿಳಿಸುವ ಮಹತ್ತರವಾದ ರಹಸ್ಯೋಪದೇಶವನ್ನು ನಡೆಸುವ ಮಂತ್ರಗಳು ಇವು. ಶಿಲ್ಪದ ಮಹತ್ತು, ಗಾಂಭೀರ್ಯಗಳು ಆತ್ಮತತ್ತ್ವದ ವಿವೇಚನೆಯೇ ಆಗಿದ್ದು ಅದರ ಸಾಧನೆಯಲ್ಲಿಯೇ ಪರಮಾತ್ಮನ ಸಾಕ್ಷಾತ್ಕಾರದ ಸಿದ್ಧಿಯ ರಹಸ್ಯವೂ ಅಡಗಿರುವುದರಿಂದ ಇದರಲ್ಲಿ ಆತ್ಮತತ್ತ್ವದ ಜಿಜ್ಞಾಸೆಯೇ ಅಡಗಿದೆ. ಈ ಕಾರಣದಿಂದಾಗಿ ಇದು ಉಪನಿಷತ್ತಾಗಿದೆ.

ಈ ಉಪನಿಷತ್ತಿನಲ್ಲಿ ಪ್ರತಿಪಾದಿತನಾಗಿರುವ ಪರಮಾತ್ಮ ತತ್ತ್ವವು ನಿರಾಕಾರವಾಗಿದ್ದು ಸಾಕಾರವನ್ನು ಪಡೆದು ಲೋಕದಲ್ಲಿ ವ್ಯಾಪಿಸಿದೆ ಎಂಬುದನ್ನು ವೈದಿಕ ವಿಶ್ವಕರ್ಮ ಸೂಕ್ತದಿಂದಲೇ ವಿವರಿಸಲಾಗಿದೆ. ಆ ಸೂಕ್ತದಲ್ಲಿ ವಿಶ್ವಕರ್ಮನನ್ನು ನಿರಾಕಾರನೆಂಬುದನ್ನು, ಆತ ಹೇಗೆ ಸಾಕಾರನಾದ ಎಂಬುದನ್ನು ಭಾಷ್ಯಾಚಾರ್ಯರು ವಿವರವಾಗಿಯೇ ವಿವರಿಸಿದ್ದಾರೆ. ಆದರೆ ಇಲ್ಲಿಯ ಭಾಷ್ಯಾಚಾರ್ಯರು ವಿಶ್ವಕರ್ಮ ಎಂದು ಹೇಳುವ ಬದಲು 'ಸಾಂಬ' ಎಂದು ಹೇಳುತ್ತಾರೆ. ಇದು ಏಕೆ ? [redacted] ಎಂದರೆ [redacted] ಸಮೇತನಾದ ಮೂರ್ತಿ ಎಂದು ಅರ್ಥ, ಇಲ್ಲಿಯ ೧೪ನೆಯ ಮಂತ್ರವು ವೈದಿಕ ವಿಶ್ವಕರ್ಮ ಸೂಕ್ತದ

ಮೊದಲ ಮಂತ್ರವಾಗಿದೆ. ಈ ಸೂಕ್ತದಲ್ಲಿ ಜಗತ್ತಿನ ಸೃಷ್ಟಿ ಸ್ಥಿತಿಗಳ ವಿವರಣೆ ಇದೆ. ವಿಶ್ವಕರ್ಮ ಎಂದರೆ ಸರ್ವಸ್ಯ ಕರ್ತಾ ಎಂದು ನಿರುಕ್ತವು ವಿವರಿಸುತ್ತದೆ; ಸಕಲ ಸೃಷ್ಟಿಗಳನ್ನು ನಿರ್ವಹಿಸಿದವನು ಎಂದು. ಸಕಲ ಭುವನಗಳಲ್ಲೂ, ಸಕಲ ಭೂತ ಜಾತಿಗಳಲ್ಲಿಯೂ ತಾನೇ ಅಗ್ನಿರೂಪದಲ್ಲಿ ಪ್ರವೇಶಿಸಿ ಅವೆಲ್ಲವನ್ನೂ ತನ್ನಲ್ಲಿ ಅಡಗಿಸಿಕೊಂಡಿರುವುದರಿಂದ ಈತನಿಗೆ ಭೌವನ ಎಂಬ ಹೆಸರಿದೆ. ಸಕಲ ಲೋಕವ್ಯವಹಾರಗಳಿಗೂ ಈತನೇ ಕಾರಣವಾಗಿರುವುದರಿಂದ ಈತನು ವಾಚಸ್ಪತಿ. ಸೃಷ್ಟಿಗೆ ಮೂಲ ತತ್ವವಾದ ಅಗ್ನಿಯು ಜಗತ್‌ಸೃಷ್ಟಿಗೆ ಆಧಾರ ವಾಗಿರುವಂತೆಯೇ ಯಜ್ಞತತ್ತ್ವಕ್ಕೂ ಆಧಾರವಾಗಿದೆ. ಆದ್ದರಿಂದಲೇ ಸೃಷ್ಟಿ-ಯಜ್ಞ-ಶಿಲ್ಪಗಳು ಒಂದೇ ಕ್ರಿಯೆ ಬೇರೆಬೇರೆ ಮುಖಗಳು. ಪತಿ-ಪತ್ನಿಗಳಿಲ್ಲದೆ ಯಜ್ಞವಿಲ್ಲ. ಆದ್ದರಿಂದ ಅಗ್ನಿಯು ಆತನ ಪತ್ನಿಯೊಂದಿಗೆ ಕೂಡಿ ಈ ಯಜ್ಞಕ್ರಿಯೆಯಲ್ಲಿ ಭಾಗವಹಿಸುತ್ತಾನೆ. ಪತ್ನೀವಾನನಾದ ಅಗ್ನಿಯನ್ನು ಉದ್ದೇಶಿಸಿ ಯಜ್ಞಾಹುತಿಯನ್ನು ಅರ್ಪಿಸಬೇಕು. ಅಗ್ನಿಯೇ ಪುರುಷ-ಪತಿ, ವಾಕ್ಕೇ ಸ್ತ್ರೀ–ಪತ್ನಿ (ಅಗ್ನೇರ್ವಾಕ್ ಪತ್ನಿ-ಶತಪಥ ಬ್ರಾಹ್ಮಣದ ಕಾಣ್ವಪಾಠ) ಇವರ ಸಂಯೋಗದಿಂದಲೇ ಪ್ರಜೋತ್ಪತ್ತಿ ನಡೆಯುತ್ತದೆ. ಈ ಅಗ್ನಿಯು ವಿಶ್ವಕರ್ಮರೂಪನು. ಈತನನ್ನು ಕುರಿತು ಅರ್ಪಿಸಿದ ಎಲ್ಲಾ ಆಹುತಿಗಳು ಸಕಲ ದೇವತೆಗಳನ್ನು ಕುರಿತು ಅರ್ಪಿಸಿದಂತೆಯೇ–

ಪ್ರತ್ಯೇತ್ಯ ವೈಶ್ವಕರ್ಮಾಣಿ ಜುಹೋತಿ! ವಿಶ್ವಾನಿ ಕರ್ಮಾಣ್ಯ ಯಮಗ್ನಿಸ್ತಾನ್ಯ ಸ್ಯಾತ್ರ ಸರ್ವಾಣಿ ಕರ್ಮಾಣಿ ಕೃತಾನಿ ಭವಂತಿ ತಾನ್ಯೇತತ್ಪ್ರೀಣಾತಿ ತಾನಿ ಹವಿಷಾ ದೇವತಾಂ ಕರೋತಿ....ಸಾ ದೇವತಾ ನಸಾ ಯಸ್ಯೈ ನಗೃಹ್ಯತೇsಥೋ ವಿಶ್ವಕರ್ಮಾಯ ಮಗ್ನಿಸ್ತಮೇ ವೈ ತತ್ಪ್ರೀಣಾತಿ॥ (ಶತಪಥ ಬ್ರಾಹ್ಮಣ, ೯-೫-೨-೪೨)

ಇಲ್ಲಿ ಅಗ್ನಿಯೇ ವಿಶ್ವಕರ್ಮನೆಂಬುದು ಸ್ಪಷ್ಟವಾಗಿದೆ. ಈತನು ವಾಕ್ಕನ್ನು ಪತ್ನಿಯನ್ನಾಗಿ ಪಡೆದುಕೊಂಡೇ ಸೃಷ್ಟಿ ಕಾರ್ಯವನ್ನು ಪ್ರಾರಂಭಿಸಿದನಾದ್ದರಿಂದಲೇ ಈತನನ್ನು [illegible] + [illegible] + ಮೂರ್ತಿ ಎಂದು ಭಾಷ್ಯಕಾರರು ಹೇಳಿದ್ದಾರೆ. ಇದರಿಂದ ವೇದೋಕ್ತ ಅರ್ಥದ ಪ್ರತಿ ಪಾದನೆಯೂ ಇಲ್ಲಿ ಆಗಿದೆ

ಆಗಮಗಳ ಹಾಗೂ ಪೌರಾಣಿಕರ ಪ್ರಚಾರದ ನಂತರ ಕಾಲದಲ್ಲಿ 'ಸಾಂಬ ಮೂರ್ತಿ' ಎಂಬ ಹೆಸರು ಶೈವ ಪರವಾಗಿ ರೂಢಿಯಲ್ಲಿರುವುದರಿಂದ ಈ ಭಾಷ್ಯವು ಶಿವಪರವಾದುದು ಎಂಬ ಅನುಮಾನವು ಕೆಲವರಿಗೆ ಬರಬಹುದು. ಆದರೆ ಇದು ತೋರಿಕೆಯ ಅನುಮಾನ ಮಾತ್ರವೇ. ಭಾಷ್ಯದ ಇತರ ಭಾಗಗಳಲ್ಲಿ ಎಲ್ಲೂ 'ಶಿವ' ಪರವಾದ ಅಥವ ಇತರ ರೂಪಗಳ ವಿರೋಧವಾದ ಭಾವನೆಗಳು ಇಲ್ಲ. ಕೇವಲ ನಿರ್ಗುಣನೂ ನಿರಾಕಾರನೂ ಆದ ವಿಶ್ವಕರ್ಮನು ಸೃಷ್ಟಿಗೆ ಕಾರಣನೆಂದು ಹೇಳುವುದರಿಂದ ಉಪನಿಷತ್ತಿನ ಗ್ರಹಿಕೆಯಲ್ಲಿ ಅಡ್ಡಿಯುಂಟಾಗಬಹುದು ಎಂಬ ಭಾವನೆಯಿಂದಲೂ, ನಿರಾಕಾರನಾದ ವಿಶ್ವಕರ್ಮನು ತನ್ನಲ್ಲಿಯೇ ತಾನೇ ಸೃಷ್ಟಿಸಿಕೊಂಡ ಇಚ್ಛಾಶಕ್ತಿ (ವಾಕ್ಕಿನ ಮೂಲರೂಪ)ಯೊಂದಿಗೆ ಕೂಡಿ ಕೊಂಡು ಸಗುಣ ಸೃಷ್ಟಿಯನ್ನು ನಡೆಸಿದ ಎಂಬುದನ್ನು ಸ್ಪಷ್ಟಗೊಳಿಸಲು 'ಸಾಂಬ ಮೂರ್ತಿ' ಎಂದು ಬಳಸಿದ್ದಾರೆ ಎಂಬುದು ಗ್ರಹಿಸಬೇಕು.

ಈ ಭಾಷ್ಯಕಾರರು ಉಪನಿಷತ್ತಿನ 'ಸಕಲ ನಿಗಮಾಗಮಾಗಮ ಸಾರ ಪಾರಗಂ' ಎಂಬ ಪ್ರಾರಂಭದ ವಾಕ್ಯವನ್ನು ಪರಿಗಣಿಸಿ ಆಗಮ ಶಾಸ್ತ್ರಗಳಿಗೆ ಪ್ರಾಧಾನ್ಯತೆ ಕೊಟ್ಟಿದ್ದಾರೆ ಎಂದೂ ನಾವು ಭಾವಿಸಲು ಅವಕಾಶಗಳಿವೆ. ಶಿಲ್ಪವು ಆಗಮ ಶಾಸ್ತ್ರದ ಒಂದು ಭಾಗವೇ. ಆದ್ದರಿಂದಲೇ ಶಿಲ್ಪ ಶಾಸ್ತ್ರಗಳನ್ನು ಶಿಲ್ಪಾಗಮಗಳೆಂದೂ ಕರೆಯಲಾಗುತ್ತದೆ. ಈ ಆಗಮಗಳಿಂದಲೇ ಸಮಾಜದಲ್ಲಿ ಗುರುಪೀಠಗಳು, ದೇವಾಲಯಗಳು ಕಾಮ್ಯ ಸಾಧನೆಗಳಾದ ವ್ರತಗಳು, ಪೂಜೆಗಳು ತನ್ಮೂಲಕ ಭಕ್ತಿಯೋಗ ಮುಂತಾದುವು ವ್ಯಾಪಕವಾಗಿ ಹರಡಿಕೊಂಡಿವೆ. ಆಗಮಗಳು ಪಂಚಾಯತನ ಪೂಜೆಗಳನ್ನು, ಶ್ರೀ ಚಕ್ರಾದಿ ಸಾಧನಾ ಮಾರ್ಗದ ಉಪಾಸನೆಗಳನ್ನು, ವ್ರತಗಳನ್ನು ಬಳಕೆಗೆ ತರುವುದರಲ್ಲಿ ಮಹತ್ತರ ಪಾತ್ರವಹಿಸಿ ದೇವಾಲಯ ಸಂಸ್ಕೃತಿಗೆ ಪ್ರಧಾನ ನೆಲೆಯಾಗಿ ನಿಂತಿವೆ. ಇಂದಿನ ಸಮಾಜದಲ್ಲಿ ವ್ಯಾಪಕವಾಗಿ ಹರಡಿರುವುದು ಈ ಆಗಮ ಸಂಸ್ಕೃತಿಯೇ. ಇದರ ಹೃದಯದಲ್ಲಿ ವೇದ ಸಂಸ್ಕೃತಿಯು ಅತ್ರವಾಗಿದೆ ಎಂಬುದು ಸ್ಪಷ್ಟವೇ ಆಗಿದೆ. ಶುದ್ಧ ವೈದಿಕರಾದವರು [redacted] ಅಗ್ನಿಗೇ ಮಹತ್ವನೀಡಿ ಆಗಮಗಳ ಅನೇಕ ಕ್ರಿಯೆಗಳನ್ನು, ಆಚಾರಗಳನ್ನು ವಿರೋಧಿಸುವುದು ಆಗಮಗಳು ಅನಾವಶ್ಯಕವೆಂಬ ಭಾವನೆಯಿಂದ. [redacted] ಈಗ [redacted] ರೀತಿಯ

ಆಗಮ ಸಂಸ್ಕೃತಿ ಭಾರತದಲ್ಲಿ ಜನರ ಹೃದಯದಲ್ಲಿ ನೆಲೆಮಾಡಿದೆ ಎಂಬುದನ್ನು ಯಾರೂ ಅಲ್ಲಗಳೆಯುವುದು ಸಾಧ್ಯವಿಲ್ಲ. ಈ ಬೃಹತ್ತರವಾದ ಪ್ರಭಾವ ಹಾಗೂ ಶಿಲ್ಪವು ಆಗಮದ ಅವಿಭಾಜ್ಯ ಭಾಗವಾಗಿ ರೂಢಿಯಲ್ಲಿರುವುದನ್ನು ಭಾಷ್ಯಾಚಾರ್ಯರು ಗಮನಿಸಿ 'ಸಾಂಬ ಮೂರ್ತಿ' ಎಂದು ಹೇಳಿದ್ದಾರೆ. ಇಷ್ಟೇ ಹೊರತು ಇದು ಶೈವಪರ ಎಂದು ಹೇಳುವುದು ಅರ್ಥೈಸುವವರ ಅಲ್ಪಜ್ಞತೆಗೆ ಸಾಕ್ಷಿಯಾಗಿ ಮಾತ್ರವೇ ಉಳಿಯುತ್ತದೆ.

ಇನ್ನು ಕೌಮಾರ ಭಾಷ್ಯದ ಕರ್ತೃವು ಯಾರು ಎಂಬುದನ್ನು ಪರಿಶೀಲಿಸೋಣ. ಈ ಭಾಷ್ಯಕಾರನ ಬಗ್ಗೆ ಯಾವುದೇ ಮಾಹಿತಿಯು ಭಾಷ್ಯದಲ್ಲಿ ದೊರೆಯುವುದಿಲ್ಲ. ಭಾಷ್ಯದ ಶೈಲಿ ಪ್ರಾಚೀನವಾಗಿರುವುದು ಸ್ಪಷ್ಟವಾಗಿದೆ. ಭಾಷ್ಯದ ಮಾರ್ಗವೂ ಕೂಡ ಶಾಸ್ತ್ರ ಶುದ್ಧವಾದ ಮಾರ್ಗವೇ ಆಗಿದೆ. 'ಕೌಮಾರ' ಎಂಬುದರಿಂದ ಕುಮಾರ ನಾಮದೊಂದಿಗೆ ಈತನಿಗೆ ಸಂಬಂಧ ಇರಬೇಕು ಎಂದು ನಾವು ಊಹಿಸಬಹುದು. ನಮಗೆ ದೊರೆತಿರುವ ಅನೇಕ ಶಿಲ್ಪ ಶಾಸ್ತ್ರ ಗ್ರಂಥಗಳಿಗೆ ಅವುಗಳ ಕರ್ತೃಗಳ ಹೆಸರು ದೊರೆತಿಲ್ಲ. ಆದರೂ ಕೆಲವು ಹೆಸರುಗಳು ಅಲ್ಲಲ್ಲಿ ದೊರೆತಿವೆ. ಮತ್ಸ್ಯಪುರಾಣದಲ್ಲಿ ೧೮ ಶಿಲ್ಪ ಶಾಸ್ತ್ರ ಕರ್ತೃಗಳ ಹೆಸರುಗಳಲ್ಲಿ ಕುಮಾರ ಎಂಬ ಹೆಸರಿನ ಉಲ್ಲೇಖವಿದೆ.[3] ಉಪಲಬ್ಧವಾಗಿರುವ ಕೆಲವು ಶಿಲ್ಪ ಶಾಸ್ತ್ರ ಗ್ರಂಥಗಳ ಕರ್ತೃವು ಕುಮಾರ ಎಂಬ ಹೆಸರಿರುವ ಕೃತಿಗಳು ಇವು :

| | | |
|---|---|---|
| ಶಿಲ್ಪ ರತ್ನ | — | ಶ್ರೀಕುಮಾರ |
| ಕುಮಾರ ವಾಸ್ತು | — | ಕುಮಾರಸ್ವಾಮಿ |
| ಕುಮಾರ ಶಿಲ್ಪ | — | ಕುಮಾರಸ್ವಾಮಿ |
| ಶಿಲ್ಪ ತಂತ್ರ | — | ಕುಮಾರ ಭಟ್ಟ |

ಮೇಲ್ಕಾಣಿಸಿದ ಯಾವ ಕುಮಾರನ ಬಗ್ಗೆಯೂ ನಮಗೆ ಹೆಚ್ಚಿನ ವಿವರಗಳು ದೊರೆತಿಲ್ಲ. ಅವರೆಲ್ಲರೂ ಬೇರೆ ಬೇರೆಯೋ ಅಥವ ಒಬ್ಬರೇ ಎಂಬುದನ್ನು ನಾವು ನಿಖರವಾಗಿ ಹೇಳಲು ಯಾವುದೇ ಮಾಹಿತಿಯೂ ನಮ್ಮಲ್ಲಿಲ್ಲ. ಮತ್ಸ್ಯ ಪುರಾಣದಲ್ಲಿರುವ 'ಕುಮಾರ' ಎಂಬ ಹೆಸರಿನ ಶಿಲ್ಪವಿದ್ಯಾ,

3. ಬ್ರಹ್ಮಕುಮಾರೋ ನಂದೀಶಃ ಶೌನಕೋ ಗರ್ಗ ಏವಚ

—ಮತ್ಸ್ಯಪುರಾಣ ೨೫೦: – ೨೪

ಪ್ರವರ್ತಕನ ಹೆಸರು ನಂತರ ಕಾಲದಲ್ಲಿಯೂ ಪ್ರಚಲಿತವಾಗಿರುವುದು ಸಾಧ್ಯ ವಿದೆಯಾದ್ದರಿಂದ ಇದಮಿತ್ಥಂ ಎಂದು ನಾವು ಏನನ್ನೂ ತೀರ್ಮಾನಿಸು ವುದೂ ಸಾಧ್ಯವಿಲ್ಲ. ಭಾಷ್ಯವು ಮತ್ಸ್ಯಪುರಾಣದ ಕಾಲಕ್ಕೇ ಪ್ರಚಲಿತ ವಾಗಿತ್ತು ಎಂಬುದನ್ನು ಹೇಳಬಹುದು. ಶಿಲ್ಪ ಶಾಸ್ತ್ರದಲ್ಲಿ ಕುಮಾರ ಸಾಂಪ್ರದಾಯವೊಂದು ಪ್ರಾಚೀನವಾಗಿ ರೂಢಿಯಲ್ಲಿದೆ ಎಂಬುದನ್ನು ಖಚಿತವಾಗಿ ನಾವು ಹೇಳಬಹುದು. ಕುಮಾರ ಎಂಬ ಹೆಸರಿನಿಂದ ಈತನು ಶೈವ ಸಂಪ್ರದಾಯದವನೆಂದು ಅನುಮಾನಿಸುವುದು ಸಾಧ್ಯವಿದ್ದರೆ ಈತನು ದಕ್ಷಿಣ ಭಾರತದವನು ಎಂದು ಗುರ್ತಿಸಬಹುದೇನೋ. ಆದರೆ ಕೇವಲ ಊಹಾಗಾನ ಮಾತ್ರವೇ ಎಂಬುದನ್ನು ನಾವು ಮರೆಯ ಬಾರದು.

ಶಿಲ್ಪದ ಬಗ್ಗೆ ಅದರ ತತ್ತ್ವಾರ್ಥ, ಮಹತ್ತ್ವ, ವಿಭಾಗಗಳು, ಅದರ ಮಾರ್ಗ, ಗುರಿ ಇತ್ಯಾದಿಗಳ ಬಗ್ಗೆ ಅನೇಕ ಶಾಸ್ತ್ರೀಯ–ಸತ್ಯಗಳನ್ನು ಈ ಶಿಲ್ಪ ವಿದ್ಯಾ ರಹಸ್ಯೋಪನಿಷತ್ತಿನಲ್ಲಿ ಉದ್ಘಾಟನೆ ಮಾಡಲಾಗಿದೆ. ಈ ಉಪನಿಷತ್ತು ಪರಂಪರಾಗತ ಶಿಲ್ಪಿಗಳ ಜೀವನದ ದೃಷ್ಟಿಕೋಣ, ಅವರು ತಮ್ಮ ಶಿಲ್ಪದ ಬಗ್ಗೆ ಇರಿಸಿಕೊಂಡಿದ್ದ ಪರಿಚಯ ಮಾಡಿ ಕೊಡುತ್ತದೆ. ಸಾಧಾರಣವಾಗಿ ಜ್ಞಾನಮಾರ್ಗದಲ್ಲಿ ಜಿಜ್ಞಾಸೆ, ತರ್ಕ, ಚರ್ಚೆ ಉಪದೇಶ ಗಳಿಂದ ಆತ್ಮದ ತಿಳಿವನ್ನು ಗಳಿಸುವುದನ್ನು ಉಪನಿಷತ್ತುಗಳು ಹೇಳು ತ್ತವೆ. ಆದರೆ ಈ ಉಪನಿಷತ್ತು ಶಿಲ್ಪ ಕರ್ಮ ನಿರ್ವಹಣೆಯಿಂದಲೇ ಆತ್ಮದ ತಿಳಿವನ್ನು, ಮುಕ್ತಿಯನ್ನು ಪಡೆಯಬಹುದೆಂದು ಹೇಳಿರುವುದು ಮಾತ್ರವಲ್ಲ ಈ ಶಿಲ್ಪ ಕರ್ಮನಿರ್ವಹಣೆಯಿಂದ ನಿತ್ಯಾಗ್ನಿಹೋತ್ರಿಯ ಸಮನಾಗಿ ಶಿಲ್ಪಿಯು ನಿಲ್ಲುತ್ತಾನೆ ಎಂದೂ ಹೇಳಿವೆ. ಯಜ್ಞ-ಶಿಲ್ಪಗಳು ಒಂದೇ ಎಂದು ಹೇಳಿದೆ. ಎಂದರೆ ಶಿಲ್ಪ ನಿರ್ವಹಣೆಯು ಜನಸೇವೆಯಾಗಿರುವುದರಿಂದ ಇದೇ ಜ್ಞಾನಯೋಗಕ್ಕೆ ಕರೆದೊಯ್ಯುವ ಹಾದಿಯಾಗಿದೆ ಎಂದು ಸ್ಪಷ್ಟವಾಗಿ ಹೇಳ ಲಾಗಿದೆ. ಈ ದೃಷ್ಟಿಯಿಂದಲೂ ಇದು ಬಹು ಪ್ರಧಾನವಾದ ಅಂಶ. ಪ್ರಾಚೀನ ಸಂಪ್ರದಾಯದಲ್ಲೂ ಜ್ಞಾನಯೋಗವೆಂದು ಸೇವೆಯನ್ನು, ಉಪಯೋಗ ವನ್ನು, ಕರ್ಮವನ್ನು ದೂರೀಕರಿಸಿರಲಿಲ್ಲ. ಅಥವ ಬೆವರು ಸುರಿಸುವ ಕೆಲಸವು ಕೀಳು ಎಂದು ಭಾವಿಸಿರಲಿಲ್ಲ. ಅದು ಮಹಾಯಜ್ಞವೆಂದು ಗೌರವಿಸಲಾಗಿತ್ತು.

ಈ ಉಪನಿಷತ್ತು ದುಡಿಮೆಗೆ ಸಲ್ಲಿಸಿರುವ ಗೌರವವೆಂದರೂ ತಪ್ಪಿಲ್ಲ.

ಈ ರೀತಿಯ ಅಮೂಲ್ಯವಾದ ಕೃತಿಯನ್ನು ಮೊದಲಿಗೆ ಸಿದ್ಧ ಪಡಿಸಿ ಕನ್ನಡದಲ್ಲಿ ಪ್ರಕಟಿಸಿದವರು ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳವರು. ಅವರು ಪ್ರಕಟಿಸಿರುವ ಕೃತಿಯಿಂದ ಬಹುವಾದ ಉಪಕಾರವನ್ನು ಪಡೆದು ಕೊಂಡಿದ್ದೇನೆ. ವೈದಿಕ ಮತ್ತು ಶಿಲ್ಪ ಸಾಹಿತ್ಯದ ಪ್ರಚಾರಕ್ಕಾಗಿ ಶ್ರೀ ಸ್ವಾಮಿ ಗಳು ನಡೆಸಿರುವ ಸೇವೆಯು ಅನನ್ಯವಾದದ್ದು. ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳನ್ನು ನಾನು ಭಕ್ತಿಪೂರ್ವಕವಾಗಿ ಸ್ಮರಿಸುತ್ತಾ ಅವರಿಗೆ ಶ್ರದ್ಧಾ ಕುಸುಮಗಳನ್ನು ಅರ್ಪಿಸುತ್ತೇನೆ. ಕೆಲವು ಅಂಶಗಳನ್ನು ಹೆಚ್ಚು ವಿವರವಾಗಿ ಇನ್ನೂ ಹೆಚ್ಚು ಉಲ್ಲೇಖನಗಳನ್ನು ನೀಡಿ ವಿವರಿಸುವ ಸಾಧ್ಯತೆ ಇರುವಾಗ ಆ ಕೆಲಸವನ್ನು ಮಾಡಿದ್ದೇನೆ. ಇನ್ನೂ ಹಲವು ಅಂಶಗಳನ್ನು ಹೆಚ್ಚು ವಿವರ ವಾಗಿ ವಿವರಿಸುವುದು ಸಾಧ್ಯವಿದೆಯಾದರೂ ಪುಸ್ತಕದ ಗಾತ್ರವನ್ನು ಗಮನ ದಲ್ಲಿರಿಸಿಕೊಂಡು ಆ ಅಂಶಗಳನ್ನು ಸಧ್ಯದಲ್ಲಿ ಕೈ ಬಿಡಲಾಗಿದೆ.

"ಹೈದರಾಬಾದಿನಲ್ಲಿರುವ ಸರ್ಕಾರಿ ಶಿಲ್ಪಕಲಾ ಶಾಲೆಯ ಪ್ರಿನ್ಸ್‌ಪಾಲ ರಾಗಿರುವ, 'ನಮ್ಮ ಸಂಸ್ಕೃತಿಗೆ ಮಣಿದೀಪಗಳಂತಿರುವ ಶಿಲ್ಪ ಶಬ್ದಗಳು' ಎಂಬ ವಿಷಯದಲ್ಲಿ ದೀರ್ಘ ಪ್ರಬಂಧವನ್ನು ಬರೆದು ಪಿ.ಎಚ್.ಡಿ., ಪಡೆದು ಕೊಂಡಿರುವ ವಿದ್ವಾಂಸರಾಗಿರುವ [illegible] ಪಿ. ನಾಗೇಶ್ವರರಾವ್ ಅವರು ಬಹು ವಿಶ್ವಾಸದಿಂದ ಮುನ್ನುಡಿ ಬರೆದಿದ್ದಾರೆ.

ಈ ಕೃತಿಯ ಪ್ರಕಟಣೆಗೆ ಧಾರ್ಮಿಕ ಕೃತಿಗಳ ಪ್ರಕಟಣೆಯ ನೆರವಿನ ಯೋಜನೆಯ ಅಡಿಯಲ್ಲಿ ಹತ್ತು ಸಾವಿರ ರೂಪಾಯಿಗಳ ನೆರವನ್ನು ನೀಡಿ ರುವ ತಿರುಮಲ ತಿರುಪತಿ ದೇವಸ್ಥಾನದವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

ಕೃತಿಯ ಮುದ್ರಣ ನಡೆಸಿರುವ ಶ್ರೀ ತೋಯಜಾಕ್ಷಾಚಾರ್ಯ ಅವರಿಗೆ ಮತ್ತು ಸಾಹಿತ್ಯ ಸಲಹಾ ಮಂಡಳಿಯ ಮಿತ್ರರಿಗೆ ವಂದನೆಗಳು.

ಜ್ಞಾನಭಂಡಾರ
ಭಾರತ್ ನಗರ
ಕೆ.ಜಿ.ಎಫ್. 563115

ಜಿ. ಜ್ಞಾನಾನಂದ
ಸಂಪಾದಕ ಮತ್ತು ಪ್ರಧಾನ ಕಾರ್ಯದರ್ಶಿ
ಸಂಸ್ಕೃತಿ ಸಾಹಿತ್ಯ ಪ್ರಸಾರ ಸಮಿತಿ

॥ಶ್ರೀ॥

# ಅಥಶಿಲ್ಪವಿದ್ಯಾರಹಸ್ಯೋಪನಿಷತ್ಪ್ರಾರಂಭಃ

ಓಂ ಸಹ ನಾವವತು । ಸಹ ನೌ ಭುನಕ್ತು । [redacted] ವೀರ್ಯಂ ಕರವಾವಹೈ
ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ।
ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥

ಅಥ ಶಿಲ್ಪವಿದ್ಯಾರಹಸ್ಯೋಪನಿಷದಂ ವ್ಯಾಖ್ಯಾಸ್ಯಾಮಃ । ಸಕಲನಿಗಮಾಗಮಸಾರಪಾರಗಂ ಪರಿಪಕ್ವಭಾವಭರಮಾಚಾರ್ಯಂ ಪ್ರಣಮ್ಯ ಛಾತ್ರಃ ಪರಿಪೃಚ್ಛತಿ । ಭಗವನ್ ನೋ ಮಹಾಶಿಲ್ಪತತ್ತ್ವ-ರಹಸ್ಯಂ ಬ್ರೂಹೀತಿ । ತಗ್ಂ ಸಹೋವಾಚ । ಅಣೋರಣೀಯೋ ಮಹತೋ ಮಹೀಯೋಽತೋ ನ ವೇದಿತುಗ್ಂ ಶಿಲ್ಪರಹಸ್ಯಗ್ಂ ಶಕ್ನೋತಿ । ಭವ ತಸ್ಮಾತ್ತ್ವಾವಧಾನಃ । ವಾಙ್ಮನೋಗೋಚರಾ-ತೀತಾನನ್ತದಿವ್ಯತೇಜೋಮಯೋ ನಿತ್ಯೋ ನಿರ್ವಿಕಲ್ಪೋ ನಿರಂ-ಜನೋ ನಿರಾಖ್ಯಾತೋಽತಿಶುದ್ಧೋ ದೇವ ಏಕಃ ಪರಬ್ರಹ್ಮಾ ವಿರಾಜತೇ । [redacted] ಏವಾಖಿಲಾಜಾಂಡಕೋಟೀನಾಂ ಮೂಲಬೀಜಂ ಭವತಿ । ತಸ್ಮಾನ್ನ ದ್ವಿತೀಯೋಽಸ್ತಿ ಕಶ್ಚಿತ್ ಸ ನಿರಾಕಾರೋಽಪಿ ಸಾಕಾರತ್ವಂ ವಿಧತ್ತೇ । ನಿರಾಕಾರಸಾಕಾರಾವಸ್ಥ ನೈಸರ್ಗಿಕೌ ವರ್ತೇತೇ । ಜಗದುದಯಕಾರಣಂ ತನ್ಮನೋ ಜಾಯತೇ । ಮನಸ್ಸಂಕಲ್ಪಾತ್ಸರ್ವಂ ಜಗತ್ಸಂಕಲ್ಪಿತಂ ಭವತಿ । ತದೇನ್ನೈವಂ ಪ್ರಾರಭ್ಯತೇ ಜಗಚ್ಛಿಲ್ಪಂ । ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ ನಿಷಸಾದ ಪಿತಾ ನಃ । ಸ ಆಶಿಷಾ ದ್ರವಿಣ-ಮಿಚ್ಛಮಾನಃ ಪರಮಚ್ಛದೋ ವರ [redacted] ವಿವೇಶ । ವಿಶ್ವಾನಿ

ಸೃಷ್ಟ್ಯವನಪ್ರಳಯರೂಪಾಣಿ ಕರ್ಮಾಣಿ ಯಸ್ಯಾಸೌ ವಿಶ್ವಕರ್ಮಾ ಭವತಿ । ಯಸ್ಮಿನ್ನಿದಗ್ಂ ಸರ್ವಂ ಭುವನಂ ಜಜಾನ । ಯಸ್ಮಾದಿದಗ್ಂ ಸಮಸ್ತಗ್ಂ ಸಂಕಲ್ಪರೂಪಗ್ಂ ಶಿಲ್ಪಂ ಪ್ರಕಲ್ಪ್ಯತೇ ಸ ವಿಶ್ವಕರ್ಮಾ ಪರಮಾತ್ಮಾ ಭವತಿ । ಆದಿಶಿಲ್ಪಕೃತ್ತತಃ ಸ ಭವತಿ । ಮನಸಾ ಯತ್ಸೃಜ್ಯತೇ ವಿಶ್ವಕೃದಸ್ತತ್ಸರ್ವಗ್ಂ ಶಿಲ್ಪಮೇವ ಭವತಿ । ಯತ್ತದ್ವಿಧಾನಮನುಬ್ರೂಹೀತಿ ಛಾತ್ರೇಣ ಪೃಷ್ಟೋ ದೇಶಿಕಸ್ಸ ಪುನರುವಾಚೇತಿ । ಯದಾ ಸ ಪರಬ್ರಹ್ಮಣಸ್ಸಂಕಲ್ಪೋದಯೋ ಭವತಿ ತದೈವಾಹಂಕಾರಃ ಪ್ರಜಾಯತೇ ತಸ್ಮಾತ್ಪಂಚ ಭೂತಾನಿ । ಭೂತೇಭ್ಯ ಓಷಧಯಸ್ಸರ್ವೇ । ತೇಭ್ಯೋಽನ್ನಂ ತತಃ ಸ್ಥಾವರಜಂಗಮಃ ಪ್ರಪಂಚೋ ಭವತಿ । ಕಾರಣಂ ಭವತ್ಯತ್ರ ಚೋಪಾದಾನಮಾಕಾಶಾದೀನಿ । ಅಖಂಡೋಽಪಿ ದೀವ್ಯತೇಽಯಮೇವ ಹೃತ್ಕೋಶೇಷು ಪರಿಚ್ಛಿನ್ನ ಜೀವತ್ವೇನ ವ್ಯಾಪ್ನೋತಿ ಚಾಕಾಶವತ್ಸರ್ವಂ । ಅಲಂಚಕಾರ ನಕ್ಷತ್ರಾದಿಭಿರಾಕಾಶಂ । ಶೈಲಕಾನನದ್ರುಮಾದಿಭಿಶ್ಚ ವಸುಂಧರಾಂ । ನಾನಾರ್ಥಭಾಜಂ ವಾಚಗ್ಂ ಶಿಲ್ಪವಿಚಿತ್ರಸುಂದರಾಮಕರೋತ್ । ಏವಮೇವಾಲಂಕೃತವಾನ್ ಪದಾರ್ಥಾನಿ ವೈ ಸರ್ವಾಣಿ । ಸರ್ವಮೇತದ್ಭವತಿ ವಿಶ್ವಕೃದಃ ಶಿಲ್ಪ । ಯದಾತದಾಭವಜ್ಜಗದ್ವಿಜ್ಞಾನ ಶೂನ್ಯಗ್ಂ ಸೋಽಕಾಮಯತಾತ್ಮಾನಂ ಪಂಚಾಸ್ಯಂ । ತದೈವಾವಿರಾಸೀತ್ಪ್ರವೃತ್ತಿ । ತಸ್ಯೈವ ತೇ[illegible]ಽಂಶಾದಭವನ್ ಬ್ರಹ್ಮಣೋ ಮನುರ್ಮಯಸ್ತ್ವಷ್ಟಾಶಿಲ್ಪೀ ವಿಶ್ವಜ್ಞ ಇತಿ ಪಂಚ । ತಾನೇವಗ್ಂ ಹೋವಾಚ ವಿಶ್ವಕರ್ಮಾ । ಪ್ರವರ್ತಯತ ಲೋಕಂ ಪಂಚಕರ್ಮಭಿರಿತಿ । ಪ್ರವರ್ತತ ಇತ್ಯೇತೈಃ ಪಂಚಭಿರಿತಿ ಪ್ರಪಂಚೋ ಭವತಿ । ಯಜ್ಞ ಏವೇದಂ ಕರ್ಮ ಯಜ್ಞಃ ಕರ್ಮೈವ । ಶೃಣುತ ತದ್ಯಥಾ ಸೃಷ್ಟಿ ಸ್ಥಿತಿ ಲಯ ತಿರೋಧಾನಾನುಗ್ರಹ ರೂಪಾಣೀತಿ । ಏತದ್ಭವತ್ಯೇವಂ ವಿಶ್ವಕರ್ಮಣಃ ಕಾರ್ಯಾದೇವಮೇವ ಚ ಲೋಕಸ್ಯ । ದಾತಾರೋ ಭವನ್ತು ಜ್ಞಾನಸ್ಯ ವಿಜ್ಞಾನಸ್ಯ [illegible] ಶಿಲ್ಪಿನಃ । ಅಧಿಷ್ಠಾತಾಹಂ ಕರ್ಮಣಃ ಸಕಲಸ್ಯ ಯಜ್ಞರೂಪಃ । ವಿಲಸಿತ-

ಮೇವಂ ಮಯ್ಯೈವ ಜಗಚ್ಛಿಲ್ಪಸ್ಯ ಕೌಶಲಂ । ಗುಹ್ಯವಿದಾ-ಮಾಹಾತ್ಮ್ಯಂ । ರಹಸ್ಯಂ ಭವತಿ ಪ್ರಾಣಿನಾಮಜ್ಞೇಯಂ । ತದೇ-ತದ್ವಿವೃಣುತ ಲೋಕಸ್ಯ । ಪ್ರಕಲ್ಪಯತ ಯಜ್ಞಗ್‌ಂ ಶಿಲ್ಪೇನ । ಶಿಲ್ಪೇನೈವೇದಮುಪಬೃಂಹಿತಂ । ಯಜ್ಞೋ ಭವತಿ ಲೋಕಾನಾಂ ನಿಶ್ರೇಯಸೇ । ಸಿದ್ಧ್ಯೇರನ್ನಿವಿಧಾನ್ಯಪಿ ಕಾರ್ಯಾಣಿ । ಭವತಿ ಚ ತನ್ನಾನಾವಿಧಶಿಲ್ಪಬಹುಳಂ । ಶಿಲ್ಪಾದೃತೇ ಕಿಂಚಿ-ತ್ಸತ್ರಮಿತಿ ನೋಚ್ಯತೇ ನೋಚ್ಯತ ಇತಿ । ತತೋಽವಶ್ಯಂವಿಸೃಜತ ವಿಸೃಜತೋಪಕರಣಾನಿ ಜ್ಯೇಷ್ಠಾಃ । ಅಭ್ಯರ್ಚನೀಯೋಽಹಂ ಯಜ್ಞೇನೈವ ಲೋಕಸ್ಯ । ತಾನ್ಯೇವ ವೇದೀಕುಂಡರಥಪಾತ್ರಾ-ದೀನ್ಯಭೂಹಯತ । ಕಾರಯತಾಧ್ವರಾನ್ ಸರ್ವೈರಪಿ ಲೋಕೈ-ರನುಶ್ರುತಮಿತಿ । ಏಕೈಕಸ್ಯ ಕೈಕೋಽಧ್ಯಕ್ಷ ಇತಿ ವೇದಸ್ಯ । ತತ್ರಾಥರ್ವಣಶ್ಶಿಲ್ಪಭೂಯಿಷ್ಠ ಮತ್ಯನ್ತಂ । ಮನ್ತ್ರೇಷ್ವೇವ ಸ್ವರೂ-ಪಾಣಿ ಪ್ರಕರ್ತವ್ಯಾನಿ । ಧ್ಯಾನೇನೈವ ಪಶ್ಯನ್ತಿ ತದ್ರೂಪಂ । ರೂಪೇಣೈವ ಧ್ಯಾಯನ್ತೇ ತದ್ದೈವತಂ । ರೂಪಮೇವ ತಚ್ಛಿಲಂ । ತಾನ್ಯಯೋ ದಾರು ಶಿಲಾ ತಾಮ್ರ ಹಿರಣ್ಯವಿಕಾರಣಿ । ಮೃದಾದೀನ್ಯಥಮಾನಿ । ಯದ್ಯಸ್ಯೋಕ್ತಂ ತದ್ವಿಕಾರಂ ತಸ್ಯ । ಆಯತನವನ್ತಿ ವೈ ಸರ್ವಾಣ್ಯಪಿ ದೈವತಾನಿ । ಏವಮೇವಾಪ-ರಾಣ್ಯಪಿ ಶಿಲ್ಪವಿಲಸಿತಾನಿ ಕರ್ಮಾಣಿ । ಭವನ್ತ್ಯೇತಾನಿ ಚ ಮೋಕ್ಷಪ್ರದಾನಿ । ಸಂಪದ್ಯೇರನ್ ಸರ್ವಕಲ್ಯಾಣಾನಿ ಲೋಕಾಃ । ಸಂಚಿನುಯಾತ್ಪುಣ್ಯಮೇಭಿಃ ಶಿಲ್ಪೈರಿತಿ । ಬ್ರಾಹ್ಮಣಾನಾಮೇ-ತದ್ಭವತಿ ಶಿಲ್ಪಂ । ಯದ್ಯಬ್ರಾಹ್ಮಣೋ ಭವೇನ್ನ ಶಿಲ್ಪೀತಿ । ಅಬ್ರವೀದೇವಂ ಪುನರಾಚಾರ್ಯಃ ಸರ್ವಜ್ಞಃ । ಯದಾ ಯದಾ-ವಹೀಯತೇ ಲೋಕಾದಸ್ಮಾದ್ಧರ್ಮಗ್‌ಂ ಶಿಲ್ಪರೂಪಂ । ತದೈವಾವಿರ್ಭೂಯತೇ ಭಗವಾನ್ವಿಶ್ವಕರ್ಮಾತ್ಮನಸ್ತೇಜಸಃ ಪ್ರಕಲ್ಪ್ಯಕಾರಾನ್ । ತಸ್ಮಾದೇವ ಪ್ರಜಾಪತ್ಯೃಷಯಃ ಪ್ರಜಾ-ಯನ್ತೇ ಶಿಲ್ಪವಿಭವಃ । ತೇಭ್ಯ ಏವ ಪಾರಂಪರ್ಯಗ್‌ಂ ಸಮಾ-ಗತಂ ಭವತಿ ಶೈಲ್ಪಿಕಮಾಚಾರ್ಯತ್ವಂ ಚ । ದೇವಾನಾಮಪ್ಯಾ-

ಚಾರ್ಯಾಸ್ತ ಏವ ವಿಭ್ರಾಜನ್ತೇ ಮಹಾನ್ತಃ ನಿರುಕ್ತಾಸ್ತೇ
ಭವನ್ತ್ಯಾದಿಕರ್ತಾರೋ ಲೋಕಪ್ರವರ್ತಕಾಃ । ತದ್ದ್ವಿವಿಧಮೇವಗ್ಂ
ಶಿಲ್ಪ ದೈವಂ ಮಾನುಷಂ ಚೇತಿ । ನಾಭಾನೇದಿಷ್ಠಾದೀನ್ಯತ್ರ
ಪ್ರಥಮಾನಿ । ಅನ್ಯಾನಿ ಮಾನುಷಾಣೀತ್ಯುಚ್ಯನ್ತೇ । ದೇವಮೂರ್ತಿ
ದೇವಾಯತನೇಷ್ಟ್ಯಾದಿಕಂ ಭವತಿ ಸರ್ವಂ ದೈವಮಿತಿ ವಿಚಿತ್ರಗ್ಂ
ಶಿಲ್ಪಂ । ಮಾನುಷಂ ಚೈವಂ ಭವತಿ ಶಸ್ತ್ರಾಸ್ತ್ರ ಯನ್ತ್ರ ಹಲ-
ಪ್ರಾಸಾದ ವಾಪ್ಯಾಭರಣಾದೀನೀತಿ । ತಯೋರೇವಗ್ಂ ಶಿಲ್ಪಯೋ-
ರ್ಭವನ್ತಿ ವಾಗೀಶ್ವರೀ ಮೇರ್ವಾದೀನ್ಯುಪಕರಣಾನಿ । ಏಭ್ಯೋ
ದಶಭ್ಯ ಏವ ಕ್ರಿಯತೇ ಸರ್ವಂ ವೈ ವಿಚಿತ್ರಗ್ಂ ಶಿಲ್ಪಂ । ಅತಃ
ಶಿಲ್ಪಮೂಲಾನಿ ಸರ್ವಾಣಿ । ಪೂಜನೀಯಾನಿ ಸರ್ವೇಷಾಮತೋ
ಭವನ್ತಿ ವೈ ಶಿಲ್ಪಾನಿ । ಏಭಿಃ ಸುಖಂ ಜೀವೇಯುರ್ಲೋಕಾಃ ।
ಏಭಿರಾಪ್ನುಯಾನ್ನಿಶ್ರೇಯಸಂ । ಏಭಿರ್ಭವನ್ತಿ ಜಗನ್ತಿ
ಚಕ್ಷುಷ್ಮನ್ತಿ । ಏಭಿಃ ಪೂಜ್ಯನ್ತೇಽತ್ರ ವೇದಸಃ ಸ್ಥಪತಯಶ್ಚ ।
ಏಭಿಃ ಪೂರ್ಣಂ ಭವತ್ಯಾನಂದಂ ಚ । ಏಭಿರ್ಮುಮುಕ್ಷವಃ
ಪ್ರಾಪ್ನುವನ್ತಿ ಮೋಕ್ಷಂ । ಇತ್ಯೇವಂ ಭವತಿ ಶಿಲ್ಪಂ । ಶಿಲ್ಪಗ್ಂ
ಹಾಸ್ಮಿನ್ನಧಿಗಮ್ಯತೇ । ತಸ್ಮಾಜ್ಜಗತ್ಸರ್ಜನಂ ಭವತಿ ಶಿಲ್ಪಂ ।
ಯಜ್ಞೋ ಭವತು ವಿಜ್ಞಾನಂ ಚ ಶಿಲ್ಪಂ । ಲೌಕಿಕಂ ಭವತು
ವೈದಿಕಂ ಚಾಪಿ ಶಿಲ್ಪಂ । ಬ್ರಾಹ್ಮಣಾನಾಮೇವೇದಗ್ಂ ಶಿಲ್ಪಂ
ಭವತು । ತತ್ತ್ವಂ ಭವತಿ ಶಿಲ್ಪಂ । ರಹಸ್ಯಂ ಭವತಿ ಶಿಲ್ಪಂ ।
ಜಗತ್ಸರ್ಗಗ್ಂ ಶಿಲ್ಪಮೇವ ಭವತಿ । ತದೇವ ವಿಶ್ವವರ್ಧಕಂ
ಭವತೀತ್ಯುಪನಿಷತ್ ॥

ಓಂ ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ ।
ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ।
ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥

ಇತಿ ಯಾಜುಷಾಥರ್ವಣಶಿಲ್ಪ ವಿದ್ಯಾರಹಸ್ಯೋಪನಿಷತ್ಸಮಾಪ್ತಾ

ಶ್ರೀಃ

ಓಂ ಸಹ ನಾವವತು । ಸಹ ನೌ ಭುನಕ್ತು ।
ಸಹ ವೀರ್ಯಂ ಕರವಾವಹೈ
ತೇಜಸ್ವಿ ನಾವಧೀತಮಸ್ತು ಮಾವಿದ್ವಿಷಾವಹೈ ।
ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥

## ಅಥ ಶಿಲ್ಪ ವಿದ್ಯಾ ರಹಸ್ಯೋಪನಿಷದಂ ವ್ಯಾಖ್ಯಾ ಸ್ಯಾಮಃ ।೧

### ॥ಕೌಮಾರಂ ಭಾಷ್ಯಮ್॥

**ಯೋ ಜೀವಾನ್ಕರ್ಮವಶ್ಯಾನ್ ದೃಢತರ ತಮಸಾ ಮೋಹಿತಾನ್ ಪಾತು ಕಾಮೋ ವಿಜ್ಞಾನಂದಿತ್ಸುರೇಭ್ಯೋ ಭವತಿ ಜನಿ ತಾನೇಕ ಕರ್ಮಾನುರೂಪಮ್ ।**
**ಸಜ್ಞಾನಾನನ್ದ ರೋಪೋಽಪ್ಯಗಣಿತ ಮಹಿಮಾ ಸ್ವಾತ್ಮ ಮಾಯಾಂ ಸ್ವಶಕ್ತಿಂ ಸಂಗೃಹ್ಣನ್ ವೇದಶಿಲ್ಪಂ ಪ್ರಕಟಯತಿತರಾಂ ಸಾಮ್ಬ ಮೂರ್ತಿಸ್ಸ ನೋಽವ್ಯಾತ್ ॥**

ಇಚ್ಛಾಶಕ್ತಿ ಸಮಾಯುಕ್ತನಾಗಿರುವುದರಿಂದ ಸಾಂಬನೆಂದು ಹೆಸರಾಗಿರುವ ವಿಶ್ವಕರ್ಮ ಪರಮೇಶ್ವರನು ಸತ್ಯ ಜ್ಞಾನಾನಂದ ರೂಪನೂ ಅಪಾರ ಮಹಿಮೆಯುಳ್ಳವನೂ ಆಗಿದ್ದಾನೆ. ಅತಿ ಪ್ರಬಲವಾದ ಅಜ್ಞಾನದಿಂದ ಕೂಡಿರುವ ಜೀವಕೋಟಿಗಳು ತಮ್ಮ ತಮ್ಮ ಅಜ್ಞಾನಕ್ಕೆ ಅನುಸಾರವಾದ ಕರ್ಮಬಂಧಗಳಲ್ಲಿ ತೊಳಲುತ್ತಾ ನಾನಾ ಕಷ್ಟಗಳನ್ನು ಅನುಭವಿಸುತ್ತಿರುವುದನ್ನು ನೋಡಿ. ಜೀವಕೋಟಿಗಳನ್ನು ಕರ್ಮಪಾಶದಿಂದ ಮುಕ್ತರನ್ನಾಗಿ ಮಾಡಲು ಕರುಣಾಸಾಗರನಾದ ಆತನು ಬಯಸಿ ಅವುಗಳ ಜನ್ಮ ಕರ್ಮಗಳಿಗೆ ಅನುರೂಪ

ವಾಗಿರುವ ವಿಜ್ಞಾನದಿಂದಲೇ ಸುಖವಾಗಿಯೇ ಕರ್ಮಬಂಧವನ್ನು ದಾಟಲು ಸಾಧ್ಯವಾಗುವಂತೆ **ಸ್ವಶಕ್ತಿ ಪ್ರಕೃತ್ಯಾಭಿದೇಯ ಮಾಶ್ರಿತ್ಯ ಲೋಕಾನ್ ಸೃಷ್ಟ್ವಾ** ಎಂಬ ಉಪನಿಷತ್ ವಾಕ್ಯದಂತೆ ತನ್ನದೇ ಶಕ್ತಿಯಾದ ಮಾಯೆಯನ್ನೇ ತಾನು ಆಶ್ರಯಿಸಿಕೊಂಡು ವೈದಿಕ ಶಿಲ್ಪ ವಿಜ್ಞಾನವನ್ನು ಪ್ರಕಟಗೊಳಿಸಿ ಜೀವಕೋಟಿಗಳು ಮುಕ್ತರಾಗುವ ಮಾರ್ಗವನ್ನು ನಿರ್ಮಿಸಿಕೊಟ್ಟನು. ಹೀಗೆ ಸಕಲ ಮಹಿಮಾನ್ವಿತನಾಗಿರುವ ಸಕಲ ಲೋಕಗಳ ಸೃಷ್ಟಿಕರ್ತನಾಗಿರುವ ಮಾಯಾಶಕ್ತಿ ಸಮಾಯುಕ್ತನಾಗಿ ಸಾಂಬಮೂರ್ತಿ ಎಂದು ಹೆಸರಾಗಿರುವ ವಿಶ್ವಕರ್ಮ ಪರಮೇಶ್ವರನು ನಮ್ಮನ್ನು ರಕ್ಷಿಸಲಿ.

**ಅಥ ಶಿಲ್ಪಾನು ಶಾಸನಂ । ಕಿಮಾಖ್ಯಾನೋಽಯ ಮಥೇತಿ । ಅನಂತರ್ಯಾ-ಖ್ಯಾನ ಇತಿ ಬ್ರೂಮಃ । ಕಸ್ಮಾನಂತರಂ ? ಮಲಪರಿಪಾಕಾನಂತರಂ ತದಿದಂವಿವೃತಂ ಭವಿಷ್ಯತಿ। ಶಿಲ್ಪಮಿತಿ ಕಃ ಪದಾರ್ಥಃ ಪ್ರಪಂಚ ಸೃಷ್ಟಿ ಸೂತ್ರಮಿತಿ ಬ್ರೂಮಃ ।**

ಅಥಎಂಬ ಶಬ್ದಕ್ಕೆ ಮಂಗಳ, ಅನಂತರ, ಆರಂಭ, ಪ್ರಶ್ನೆ ಎಂಬ ನಾಲ್ಕು ವಿಧವಾದ ಅರ್ಥಗಳಿವೆ. ಅವುಗಳಲ್ಲಿ ಅಥ ಶಿಲ್ಪಾನು ಶಾಸನಂ ಎಂಬ ವಾಕ್ಯದಲ್ಲಿರುವ ಅಥಶಬ್ದದ 'ಅರ್ಥವು' ಅನಂತರ ಎಂದು ತಿಳಿಯಬೇಕು. ಯಾವುದರ ನಂತರವೆಂದು ಕೇಳಿದರೆ ಮನಸ್ಸಿನ ಕಲ್ಮಶವು ಪರಿಪಾಕಗೊಂಡ ನಂತರ ಎಂಬುದಾಗಿ ಅರಿಯಬೇಕು. ಚಿತ್ತದಲ್ಲಿಯ ದೋಷಗಳೆಲ್ಲವೂ ನಾಶವಾದ ನಂತರವೇ ಚಿತ್ತ ಶುದ್ಧಿಯುಂಟಾಗುತ್ತದೆ. ನಂತರವೇ ಜ್ಞಾನವೃದ್ಧಿಯಾಗುತ್ತದೆ. [redacted] ಜ್ಞಾನದಿಂದಲೇ ವಿಶ್ವವೆಲ್ಲಾ ಸ್ಪಷ್ಟವಾಗಿ ಗೊತ್ತಾಗುತ್ತದೆ. ಈ ರೀತಿಯಲ್ಲಿ ವಿಶ್ವವನ್ನೆಲ್ಲಾ ತಿಳಿಯುವುದೇ ಶಿಲ್ಪ ಜ್ಞಾನವಾಗಿರುತ್ತದೆ.

**ತತಶ್ಚೈದುಕ್ತಂ ಭವತಿ, ಸರ್ವೇಷಾಮಪಿ ಪದಾರ್ಥಾನಾಂ ಸ್ವರೂಪಂ,ತತ್ಪ್ರಮಾಣಂ, ತನ್ನಿರ್ಮಿತಿಕ್ರಮಶ್ಚ ಶಿಲ್ಪವೇದಾ ಭವನ್ತೀತಿ ಕಥಮಿದ ಮವಗಮ್ಯಸಾಂ? ತದುಚ್ಯತೇ। ಆದೌ ಭೋಃ ಪರೀಕ್ಷ್ಯತೇ, ತದನ್ವಿಯಂ ಪರಿಗೃಹ್ಯತೇ, ತತಶ್ಚ ಪ್ರಾಚ್ಯಾದಿದಿಶೋಽ ವಧ್ರಿಯನ್ತೇ,**

**ಮಾನ ಸಾಧನಸ್ಯ ಪದಿಶ್ಯನ್ತೇ, ಶಂಕುಸ್ಥಾಪ ನಾನು ಗುಣಂ ವಿಧೀಯತೇ, ವಾಸ್ತೂನಿ ವಿಭಜ್ಯನ್ತೇ, ಪದವಿನ್ಯಾಸಕ್ರಮ ಆದಿಶ್ಯತೇ ಗ್ರಾಮಪುರ ಪತ್ತನ ದುರ್ಗ ಖೇಟ ಖರ್ವಟ ಶಿಬಿರಾದಿ ನಿರ್ಮಿತಯೋಂಸು ಕ್ರಮ್ಯನ್ತೇ ದೇವಾಲಯ ಗೋಪುರ ಸ್ತೂಪಿ ಸ್ಥಿರ ಚರ ಬೇರಾದಯೋ ನಿರ್ಮಿಯನ್ತೇ, ಯಾಗ [illegible] ತದುಪಕರಣ ಸ್ರುಕ್ ಸ್ರುವ ಕುಂಡಾದಯಃ ಕ್ರಿಯನ್ತೇ । ಏವಂ ಗೃಹೋಪಕರಣ ರಥಯಾನಾದೀನಿ ಜಲ ಗಗನ ಸಂಚರಣ ಸಾಧನಾನಿ ವಿಮಾನಾದೀನಿ ಕಟಕ ಮುಕುಟ ಸ್ಕಂಧ ಮಾಲೋಪವೀತಾಙ್ಗುಲೀಯಕಾದೀನಿ ಅದಬ್ರಾಣ್ಯಾ ಯುಧಾನಿ ಶೈವವೈಷ್ಣವಾದಿ ಮತ ಲಾಂಛಾನಾನಿ ಚ ಸಾಧ್ಯನ್ತ ಇತಿ॥**

ಶಿಲ್ಪವೆಂಬುದೇನು ಎಂದರೆ ಅದೇ ಪ್ರಪಂಚದ ಸೃಷ್ಟಿ ಸೂತ್ರವಾಗಿದೆ. ಪ್ರತಿಯೊಂದು ವಸ್ತುವಿನ ಸ್ವರೂಪ, ಅದರ ಪ್ರಮಾಣ ಮತ್ತು ನಿರ್ಮಾಣ ಕ್ರಮಗಳು ಶಿಲ್ಪದಿಂದಲೇ ಬಂದಿವೆ. ಆದ್ದರಿಂದಲೇ ಶಿಲ್ಪ ವೇದವೆಂದು ಅದು ಕರೆಯಲ್ಪಡುತ್ತದೆ. ಹೇಗೆಂದರೆ ಮೊದಲಿಗೆ ಭೂ ಪರೀಕ್ಷೆ ತರುವಾಯ ಕ್ರಮವಾಗಿ ಭೂಪರಿಗ್ರಹ, ಪೂರ್ವ ಮುಂತಾದ ದಿಕ್ಕುಗಳನ್ನು ನಿರ್ಣಯ ಮಾಡುವಿಕೆ, ಮಾನ ಸಾಧನೆಗಳು (ಅಳತೆಯ ಪರಿಕರಗಳು) ಸಂಗ್ರಹಿಸುವಿಕೆ, ಕ್ರಮರೀತ್ಯ ಶಂಕುಸ್ಥಾಪನೆಯನ್ನು ನಡೆಸುವುದು, ವಾಸ್ತುವನ್ನು (ಎಂದರೆ ನಿರ್ಮಾಣಕ್ಕೆ ಯೋಗ್ಯವಾಗಿರುವ ಭೂಮಿ ಅಥವ ಇತರ ಪದಾರ್ಥವನ್ನು) ವಾಸ್ತು ಸೂತ್ರೋಪನಿಷತ್ತಿನ ಅನ್ವಯ ವಿಭಜಿಸುವಿಕೆ, ಪದವಿನ್ಯಾಸದ ನಿರ್ಮಾಣ, ಗ್ರಾಮ, ನಗರ, ಪುರ, ಪಟ್ಟಣ, ದುರ್ಗ, ಖೇಟ, ಖರ್ವಟ, ಶಿಬಿರ ಮುಂತಾದವುಗಳ ನಿರ್ಮಾಣ, ದೇವಾಲಯ, ಗೋಪುರ, ಸ್ತೂಪಿ, ಸ್ಥಿರ ಬೇರಗಳು, ಚರ ಬೇರಗಳು ಮುಂತಾದವುಗಳ ನಿರ್ಮಾಣ, ಯಾಗ ಶಾಲೆ, ಪ್ರಾಸಾದ, ಗೃಹೋಪಕರಣಗಳು, ಯಾನಗಳೆಂದು ಪರಿಗಣಿಸಲ್ಪಡುವ ರಥಗಳು ನೌಕೆಗಳು, ಗಗನದಲ್ಲಿ ಸಂಚರಿಸುವ ವಿಮಾನಾದಿಗಳು ಕಟಕ ಮುಕುಟ ಸ್ಕಂಧ ಮಾಲೆ, ಉಪವೀತ, ಅಂಗುಳೀಯಗಳು, ಆಯುಧಗಳು, ಶೈವ ವೈಷ್ಣವ ಮುಂತಾದ ಲಾಂಛನಗಳ ನಿರ್ಮಾಣ ಇವೆಲ್ಲವೂ ಶಿಲ್ಪ ನಿರ್ಮಾಣ ಆಗಿರುವುದರಿಂದ

ಇವುಗಳ ವಿಧಿ ನಿಯಮಗಳನ್ನು ತಿಳಿಯುವುದೇ ಶಿಲ್ಪ ವಿಜ್ಞಾನವೆನ್ನಲ್ಪಡು ವುದು. ಪ್ರತಿಯೊಂದು ವಸ್ತುವಿನ ಆಕೃತಿಯಿಂದ ಆ ವಸ್ತು ಜ್ಞಾನವು ಉಂಟಾಗುವಂತೆ ಬೋಧಿಸುವುದೂ, ಆಯಾ ನಿಯಮಗಳ, ಅವಶ್ಯಕಗಳ, ಅರ್ಹತೆಗಳ ( ುಸಾರ ಪ್ರಮಾಣ ಯುಕ್ತವಾಗಿ ನಿರ್ಮಿಸುವ ವಿಧಿಯನ್ನು ಬೋಧಿಸುವುದೂ ಸಹ ಶಿಲ್ಪ ವಿಜ್ಞಾನವೆಂದು ಹೇಳಲ್ಪಡುತ್ತದೆ.

ನನು ಅಥೇತಿ । ಶಿಲ್ಪೇತಿ ಚಾಪಗತಂ । ಕಿಮಿದಮನು ಶಾಸನ ಮಿತಿ । ಉಪನಿಷದ ಮನುಸೃತ್ಯ ಶಿಷ್ಯಾ[illegible] ಬೋಧಾಯ ವಿವರಣಂ ಶಾಸನ ಮಿತಿ ಬ್ರೂಮಃ ।

ಪ್ರಕೃತ ಸಂದರ್ಭದಲ್ಲಿ ಭಾಷ್ಯದ ಸ್ವರೂಪವನ್ನು ಸೂಕ್ಷ್ಮವಾಗಿ ತಿಳಿಸು ವುದು ಅವಶ್ಯಕವಾಗಿದೆ. ಸೂತ್ರದಲ್ಲಿರುವ ಪದಗಳನ್ನು ಬೇರೆ ಬೇರೆಯಾಗಿ ವಿಭಾಗಿಸಿ ಅವುಗಳ ಅರ್ಥವನ್ನು ವಿವರಿಸಿ ಅವುಗಳಿಗೆ ಸಂಬಂಧ ಪಟ್ಟ ವಿಷಯ ಗಳನ್ನು, ಸಾಧಕ–ಭಾವಕಗಳನ್ನು ಚೆನ್ನಾಗಿ ವಿಮರ್ಶೆ ಮಾಡಿ ದೋಷಾದಿ ಗಳನ್ನು ಸಂಶಯಗಳನ್ನು ಪ್ರಮಾಣಗಳನ್ನು ನೀಡಿ ಪರಿಹರಿಸುವಂತೆ ವಿವರಿ ಸುವ ಗ್ರಂಥವನ್ನು 'ಭಾಷ್ಯ' ಎನ್ನುತ್ತಾರೆ. ಈ ಭಾಷ್ಯದಲ್ಲಿ ಮೊದಲನೆಯ ದಾದ ಅಥ ಶಿಲ್ಪಾನು ಶಾಸನಂ ಎಂಬ ವಾಕ್ಯದಲ್ಲಿರುವ ಅಥ ಶಬ್ದವು ಆನಂತರ ರೂಪವನ್ನು ವಿವರವಾಗಿ ಬೋಧಿಸಿರುತ್ತದೆ. ಶಿಲ್ಪ ಶಬ್ದದ ನಂತರ ಅನು ಶಾಸನಂ ಎಂಬ ಪದದಿಂದ 'ಶಿಲ್ಪ ವಿದ್ಯಾರಹಸ್ಯೋಪನಿಷತ್ತಿ'ನ ಅರ್ಥವನ್ನು ಶಿಷ್ಯರೆಲ್ಲರಿಗೂ ಸ್ಪಷ್ಟವಾಗಿ ತಿಳಿಯುವಂತೆ ಬೋಧಿಸುವುದು ಎಂಬ ಅರ್ಥವು ಸ್ಫುರಿಸುತ್ತದೆ.

**ನನ್ನಿಯದ್ಭಿರಥ್ಯೈರ್ಗ್ರಥಿಜ್ಞಾ ಭಗವತ್ಯಾ ಉನಿಪನಿಷದೋಽ- ಭಿಸಂಧಿಃ ಕ ಇತಿ ಜಿಜ್ಞಾಸಾಯಾ ಮಾಹ । ಯೋ ಜೀವ ! ನನ್ನ ಸಂಬದ್ಧೋಽಯಂ ಯ ಏಷ ಪ್ರಕಟಯತೀತ ವರ್ತಮಾ ನೋಪವೇಶಃ । ನಾ ಸಂಬದ್ಧಃ ಸ ಸ ಆಚಾರ್ಯ ಅ ಸೃಷ್ಟೇರಾ**

**ಪ್ರಲಯ ಮುಪದಿಶತಿ ತತ್ತ್ವಚ್ಛಿಷ್ಯಾಯೇತಿ । ನನು ಸತ್ಯಮಾ ಚಾರ್ಯ ಉಪದಿಶತಿ ನ ಸಾಮ್ಬ ಇತಿ ಅಸಂಬದ್ಧ [redacted] ಮೇ ವೇದಂ ವಚನಮಿತಿ ಚೇತ್‌ನ । ಕಿಂ ಕಾರಣಂ ? [redacted] ಆಚಾರ್ಯಮೂರ್ತಿ ಮಧಿತಿಷ್ಠ ತೀತಿ । ನನು ನೈವ್ಯವಂ ಜಾನತೇ ಪ್ರತಿ ಪತ್ತಾರೋಽನ್ಯೇಷಾ ಯೇನೇಯಂ ಸಾಂಬಾಧಿಷ್ಠಿತಿರವಕಲ್ಪೇತ । ಅವಕಲ್ಪೇತ್ಯೆವೇತಿ ಬ್ರೂಮಃ ನೋ ಖಲು ಶಾಸ್ಯಜ್ಞಾನೇ ವೋದಾಸೀನ ಜ್ಞಾನೇ ವಾ ಸಾಮ್ಬಾಧಿಷ್ಠಿತಿರಾಯತತೇ ಯಾವತಾ ಶಾಸ್ತ್ರ ಸಂವೇದ್ಯೈವೈಷ ಸಾಂಬಾಧಿಷ್ಠಿತಿರಾಚಾರ್ಯ ಮೂರ್ತಿಷ್ಠಿತಿ ವದಾಮಃ**

ಇಂತಹ ಗಂಭೀರ ಅರ್ಥವನ್ನು ಒಳಗೊಂಡಿರುವ ಶಿಲ್ಪವಿದ್ಯಾರಹಸ್ಯೋಪನಿಷತ್ತಿನ ಅಭಿಪ್ರಾಯವನ್ನೇ ಪ್ರಾರಂಭದಲ್ಲಿ ಹೇಳಿರುವ 'ಯೋಜೀ-ವಾನ್....' ಎಂಬ ಶ್ಲೋಕವು ಸಂಕ್ಷೇಪವಾಗಿ ಬೋಧಿಸುತ್ತದೆ. ಅಲ್ಲಿರುವ ಪ್ರಕಟಯತಿ ಎಂದು ವರ್ತಮಾನ ಕಾಲದ ಕ್ರಿಯಾಪದವನ್ನು ಆಯಾ ಆಚಾರ್ಯನು ಆಯಾ ಶಿಷ್ಯನಿಗೆ ಆಯಾ ಅರ್ಥಗಳನ್ನು ಈಗಲೂ ಉಪದೇಶ ಮಾಡುತ್ತಿರುವನೆಂದು ತಿಳಿಸುವುದಕ್ಕಾಗಿಯೇ ಪ್ರಯೋಗಿಸಲಾಗಿದೆ. ಸೃಷ್ಟಿಯಿಂದ ಮೊದಲುಗೊಂಡು ಪ್ರಳಯ ಕಾಲದವರೆವಿಗೂ ಪರಂಪರೆಯಿಂದ ಬೋಧನೆ ಮಾಡುತ್ತಾ ಬರುತ್ತಿರುವ ಆಚಾರ್ಯ ಪುರುಷನು ಆಯಾಯ ಆಚಾರ್ಯರೂಪದಿಂದ ಇರುವ ಪರಮೇಶ್ವರನೇ ಆಗಿದ್ದಾನೆ. ಆಚಾರ್ಯನು ಉಪದೇಶ ಮಾಡುತ್ತಾನೆ ಎಂಬುದು ಸತ್ಯವಾಗಿರುವುದಷ್ಟೇ. ಆದರೆ ಪರಮೇಶ್ವರನು ಆಚಾರ್ಯರೂಪದಿಂದ ಉಪದೇಶ ಮಾಡುತ್ತಿದ್ದಾನೆ ಎಂಬುದನ್ನು ನಂಬಲು ಸಾಧ್ಯವಿಲ್ಲ ಎಂದುಹೇಳಿದಾಗ ಆಚಾರ್ಯನಲ್ಲಿ ಪರಮೇಶ್ವರನ ಅಂಶವನ್ನು ಕಲ್ಪಿಸಿಕೊಳ್ಳಬೇಕು. ಲೋಕದಲ್ಲಿ ಶಾಸನ ಮಾಡುವ ಜ್ಞಾನವಿರುವಾಗ, ಲೌಕಿಕವಾದ ವ್ಯವಹಾರ ಜ್ಞಾನವಿರುವಾಗ ಈಶ್ವರೀಯ ಜ್ಞಾನವು ಆಚಾರ್ಯ ಮೂರ್ತಿ ಗತವಾಗಿರುವುದಿಲ್ಲ. ಆದರೆ ಆಧ್ಯಾತ್ಮ ಜ್ಞಾನವನ್ನು ಶಿಷ್ಯನಿಗೆ ಉಪದೇಶ ಮಾಡುವ ಕಾಲದಲ್ಲಿ ಮಾತ್ರ ಈಶ್ವರನು ಆಚಾರ್ಯನ (ಗುರುವಿನ) ಅಂತರ್ಗತವಾಗಿರುತ್ತಾನೆ.

**ಕಿಂ ತಚ್ಛಾಸ್ತ್ರಂ? ತದಾಹ ಪರಿಪಕ್ವಮಲಾ ಯೇ ತಾನುತ್ಸಾದನ ಹೇತು ಶಕ್ತಿಯೋಗೇ । ಯೋಜಯತಿ ಪರೇ ತತ್ತ್ವೇ ಸದೀಕ್ಷಯಾ ಆಚಾರ್ಯಮೂರ್ತಿಸ್ಥ ಇತಿ ।**

> **ಪರಿಪಕ್ವಮಲಾ ಯೇ ತಾನುತ್ಸಾದನ ಹೇತು ಶಕ್ತಿ ಯೋಗೇನ। ಯೋಜಯತಿ ಪರೇ ತತ್ತ್ವೇಸ ದೀಕ್ಷಯಾ ಆಚಾರ್ಯ ಮೂರ್ತಿ ಸ್ಥ ॥**

—ಎಂಬ ವಚನವು ಈ ಅಭಿಪ್ರಾಯದಲ್ಲಿ ಪ್ರಮಾಣವಾಗಿದೆ. ಪ್ರಾಣಿಗಳ ಚಿತ್ತಗತವಾದ ಆಣವ, ಮಾಯಾ, ಕಾರ್ಮಿಕ ಎಂಬ ಮಲಗಳು ನಾಶವಾಗುವ ಕಾಲವನ್ನು ತಿಳಿದು ಅವುಗಳು ಸಂಪೂರ್ಣವಾಗಿ ನಾಶವಾಗುವಂತೆ ಅವರ ಚಿತ್ತದಲ್ಲಿ ಶಕ್ತಿ ಪಾತವನ್ನುಂಟು ಮಾಡುವ ಪರಮೇಶ್ವರನು ಆಚಾರ್ಯನೊಳಗಿನಿಂದ ದೀಕ್ಷೆಯನ್ನು ಕೊಟ್ಟು ಪ್ರಾಣಿಗಳು ಪರತತ್ತ್ವವನ್ನು ಅರಿಯುವಂತೆ ಅನುಗ್ರಹಿಸುತ್ತಾನೆ ಎಂಬುದೇ ಈ ವಾಕ್ಯದ ಅರ್ಥವಾಗಿರುತ್ತದೆ. ಇದರಿಂದ [redacted] **ಏಷ ಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇದಾತ್** ಎಂಬ ಯೋಗಸೂತ್ರದ ಅರ್ಥವು ವಿವರಿಸಲ್ಪಟ್ಟಿದೆ.

**ನನು ಮೋಹಿತರಕ್ಷಣಂ ಮೋಹಹಾಪನಾತ್ಸಾತ್ ನವಿಜ್ಞಾ[redacted] ದಾನಾತ್ ಸತ್ಯಂ ಕಿಂ ಪುನಃ ಕಾರಣಂ ಮೋಹಸ್ಯೇತಿ ವಿಮರ್ಷ್ಯಮ್ಯಂ ಭವತಿ । ನನು ಸ್ಪಷ್ಟಮುಕ್ತಂ [redacted] ಕಾರಣಮಿತಿ ಏವಂ ತರ್ಹಿ ತನೋ ವಿಲಸಿತೋ ಮೋಹಸ್ತಮೋನಾಶಾಚ್ಚಾಪ್ಯತೀತಿ ವಿಜ್ಞಾನೋಪದೇಶ ಉಪಪ್ಯತೇತರಾಂ। ಅಜ್ಞಾನಂ ನಾಮ ತಮ [redacted] ತದಪಬಾಧಾತ್ಮಕ ವಿಜ್ಞಾನಂ ತಾದೃಕ್ಷೇವಿಜ್ಞಾನೇ ಜಾಗರೂಕೇನ ತಮಸ್ತತ್ಕಾರ್ಯಂ ವಾವಸ್ಥಾತುಮರ್ಹತೀತಿ ಸುಷ್ಠೂಕ್ತಂ "ತಮೋ ಮೋಹಿತಾನ್ ಪಾತು ಕಾಮಃ ವಿಜ್ಞಾನಂ ದಿತ್ಸುರೇಭ್ಯಃ" ಇತಿ ।**

ಮೋಹಪಾಶಕ್ಕೆ ಸಿಕ್ಕಿರುವವರನ್ನು ರಕ್ಷಿಸಬೇಕಾದರೆ ಅವರ ಮೋಹವನ್ನು ನಾಶ ಮಾಡುವುದರಿಂದಲೇ ಆಗಬೇಕು. ಆದ್ದರಿಂದ ಮೋಹಯುಕ್ತರಾದವರಿಗೆ ವಿಜ್ಞಾನವನ್ನು ಉಪದೇಶಿಸುವುದರಿಂದ ಅವರ ರಕ್ಷಣೆಯಾಗುವುದಿಲ್ಲವೆಂಬ ಸಂಶಯವು ಮೂಡುತ್ತದೆ. ಆದರೆ ಮೋಹವುಂಟಾಗಲು ಕಾರಣವೇನೆಂಬುದು ವಿಮರ್ಶೆ ಮಾಡಿದರೆ ಅಜ್ಞಾನವೇ ಮೋಹಕ್ಕೆ ಕಾರಣವೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಅಜ್ಞಾನದಿಂದ ಉಂಟಾದ ಮೋಹವು ಅಜ್ಞಾನವು ನಾಶವಾಗುವುದರಿಂದ ನಾಶವಾಗುತ್ತದೆ. ಈ ಅಜ್ಞಾನದ ನಾಶಕ್ಕೆ ವಿಜ್ಞಾನೋಪದೇಶವು ಅವಶ್ಯಕವಾಗಿರುತ್ತದೆ. ಅಜ್ಞಾನವೆಂಬುದೇ ತಮಸ್ಸೆಂದು ವ್ಯವಹರಿಸಲ್ಪಡುತ್ತದೆ. ಅಜ್ಞಾನವನ್ನು ನಾಶ ಮಾಡುವ ಶಕ್ತಿಯು ವಿಜ್ಞಾನದಲ್ಲಿದೆ. ಅಜ್ಞಾನವನ್ನು ನಾಶಮಾಡುವ ಸಾಮರ್ಥ್ಯಉಳ್ಳ ವಿಜ್ಞಾನವು ಪ್ರಭಾವಯುಕ್ತವಾಗಿ ಇರುವಾಗ ಅಜ್ಞಾನ ಮತ್ತು ಅದರ ಉತ್ಪಾದನೆಯಾದ ಮೋಹವು ಸ್ಥಿರವಾಗಿರಲು ಸಾಧ್ಯವಾಗುವುದಿಲ್ಲ. ಆದ್ದರಿಂದಲೇ **ತಮೋ ಮೋಹಿತಾನ್ ಪಾತು ಕಾಮಃ ವಿಜ್ಞಾನಂದಿತ್ಸುರೇಭ್ಯಃ** ಎಂದು ಹೇಳಲ್ಪಟ್ಟಿದೆ.

**ಅತ್ರ ಚ ಪಾತುಕಾಮ [illegible] ರಕ್ಷಣೇಚ್ಛಾವಾದಃ ಅಪದೋಗಮಯತಿ। ತತಶ್ಚಾಪನಾನ್ ಸರ್ವಾನ್ ಪಾತುಕಾಮ [illegible] ಸ್ಥಿತಂ।**

'ಪಾತು ಕಾಮಃ' ಎಂಬ ಪದದಿಂದ ವಿಪತ್ತುಗಳಿಗೀಡಾದವರನ್ನು ರಕ್ಷಿಸಲು ಮನಸ್ಸುಳ್ಳವನೆಂದು ಅರ್ಥವಾಗುತ್ತದೆ. ಆದ್ದರಿಂದ ಪರಮೇಶ್ವರನು ಅಜ್ಞಾನದಿಂದ ಮೋಹವನ್ನು ಹೊಂದಿ ವಿಪತ್ತಿಗೆ ತುತ್ತಾಗಿರುವ ಪ್ರಾಣಿಗಳನ್ನು ರಕ್ಷಿಸುವ ಅಭಿಲಾಷೆಯುಳ್ಳವನಾಗಿರುವನು ಎಂದು ತಾತ್ಪರ್ಯವು.

**ನನು ತಮ ಏಕಂ ತಜ್ಜನ್ಯೋ ಮೋಹಶ್ಚೈಕಃ ಸ್ಯಾತ್। ತತಶ್ಚ ಮೋಹಿತ್ವೈರಪ್ಯೇಕವಿಧೈ ಭಾವ್ಯಂ। ನೈವಶ್ಚೇಕ ವಿಧಾನ್ ಪಶ್ಯಾಮಃ ತದಿಹಾನ್ಯ ದೇವ ಕಾರಣಂ ಸ್ಯಾತ್ ವಿಚಿತ್ರತರಾಪದಾಂ। ತಸ್ಮಾದ್ವಿಜ್ಞಾನದಾನವಾದೋ ನೋಪಪದ್ಯತ ಇತಿ ಚೇನ್ನ।**

ಅಜ್ಞಾನವೆಂಬುದು ಒಂದೇ. ಅಜ್ಞಾನದಿಂದ ಉಂಟಾದ ಮೋಹವೂ ಕೂಡ ಒಂದೇ ಆಗಿರುತ್ತದೆ. ಹೀಗಿರುವಾಗ ಮೋಹಗೊಂಡಿರುವವರೂ ಕೂಡ ಇದರಂತೆ ಒಂದೇ ವಿಧವಾಗಿರಬೇಕು. ಆದರೆ ವಸ್ತು ಸ್ಥಿತಿಯು ಹೀಗಿಲ್ಲದೆ ಬೇರೆಯ ತೆರನಾಗಿರುವುದು. ಇದಕ್ಕೆ ಕಾರಣವೂ ಬೇರೆಯದೇ. ಇದರಿಂದ ಪ್ರಾಣಿಗಳಿಗೆ ಅನೇಕ ವಿಪತ್ತುಗಳು ಉಂಟಾಗುತ್ತಿರುವವು. ಆದ ಕಾರಣ ವಿಜ್ಞಾನೋಪದೇಶವು ಈ ನಾನಾ ವಿಧವಾದ ವಿಪತ್ತುಗಳನ್ನು ಪರಿಹರಿಸಲು ಸಾಮರ್ಥ್ಯವುಳ್ಳದ್ದಾಗಿರುವುಲ್ಲ ಎಂದು ಕೆಲವರು ಹೇಳುತ್ತಾರೆ.

**ಅನಾದಿರ್ಹಿ ಸಂಸಾರಃ। ತತ್ತದ್ಭವತತಿ ಜನಿತ ಕರ್ಮಾಣಂ ಕೋಟೀರ್ಗಣಯಿತುಂನೇಂದ್ರೋಽಪೀಷ್ಟೇ। ಇಯಂ ತ್ಯೇಪಿ ಕರ್ಮಾಣಿ ಮೋಹವೈಚಿತ್ರ್ಯೇ ಏವಾಯತಂತೇ ತತಶ್ಚಾಯಂಕ್ರಮಃ- ವಿಚಿತ್ರ ಮೋಹೈರ್ವಿಚಿತ್ರ ಕರ್ಮಾಣಿ ವಿಚಿತ್ರ ಕರ್ಮಭಿರ್ವಿಚಿತ್ರಾಪದಃ ತತ್ತದಾ ಪನ್ನಿವರ್ತನಕ್ಷಮಾಣಿ ವಿಜ್ಞಾನಾನಿ ಚ ವಿಚಿತ್ರಾಣಿ ತಾನಿ ಚ ಜ್ಞಾನಾನಿ ಶಿಲ್ಪವೇದೇ ಆಯತಂತ ಇತಿ ತತ್ಪ್ರಕಟನ ಮಿತಿ। ತದಿದ ಮುಕ್ತಂ।**

ಈ ಪ್ರಶ್ನೆಗೆ ಕೆಲವರು ಇಂತು ಉತ್ತರವನ್ನು ಹೇಳುತ್ತಾರೆ; ಸಂಸಾರವು ಅನಾದಿಯಾದುದು. ಸಂಸಾರವೆಂದರೆ ಜೀವಕೋಟಿಗಳ ಜನನ–ಮರಣ ರೂಪವಾದ ಉತ್ಪತ್ತಿ ವಿನಾಶಗಳು ಎಂದು ಅರ್ಥ. ಜೀವಕೋಟಿಗಳು ತಮ್ಮ ಅನೇಕ ಜನ್ಮಗಳಲ್ಲಿ ಮಾಡಿರುವ ಕರ್ಮಗಳನ್ನು ಎಣಿಕೆ ಮಾಡುವುದಕ್ಕೆ ಇಂದ್ರನಿಗೂ ಶಕ್ತಿ ಇರುವುದಿಲ್ಲ. ಎಣಿಸಲು ಆಗದೆ ಇರುವ ಕೋಟಿ ಸಂಖ್ಯೆಕವಾದ ವಿಧವಿಧ ಕರ್ಮಗಳು ಅನೇಕ ವಿಧವಾದ ಮೋಹ ಪರಂಪರೆಯಿಂದ ಕರ್ಮಗಳನ್ನು ಮಾಡುತ್ತಿರುವ ಪ್ರಾಣಿಗಳಿಗೆ ಅನೇಕ ವಿಧವಾದ ವಿಪತ್ತುಗಳು ಉಂಟಾಗುತ್ತಿರುವುವು. ವಿಚಿತ್ರವೂ, ಬಹು ಬಗೆಯುವೂ ಆದ ಇಂತಹ ವಿಪತ್ತುಗಳನ್ನು ನಾಶ ಮಾಡುವ ಶಕ್ತಿಯುಳ್ಳ ಅನೇಕ ವಿಜ್ಞಾನಗಳಿರುವುವು. ಇವುಗಳ ಜ್ಞಾನವು ಶಿಲ್ಪ ವಿಜ್ಞಾನದಿಂದ ಉಂಟಾಗುತ್ತದೆ. ಆದ್ದರಿಂದ ಶಿಲ್ಪಜ್ಞಾನವು ಪ್ರಕಟಗೊಳ್ಳಬೇಕಾದದ್ದು ಅತ್ಯಾವಶ್ಯಕವೆಂದು ಭೋದಿಸಲ್ಪಡುತ್ತಿರುವುದು,

**"ತಮೋ ಮೋಹಿತಾನ್ ಕರ್ಮವಶ್ಯಾನ್ ಜೀವಾನ್ ಪಾತು ಕಾಮಃ ಭವತತಿ ಜನಿತಾನೇಕ ಕರ್ಮಾನುರೂಪಂ ವಿಜ್ಞಾನ ಮೋಭ್ಯೋದಿತುಃ ವೇದ ಶಿಲ್ಪಂ ಪಕಟಯತೀತಿ" ಕರ್ಮವಶ್ಯಾನಿತಿ। ಭವತತಿ ಜನಿತಾನೇಕ ಕರ್ಮವಶ್ಯಾನಿತಿ ಗ್ರಹೀತವ್ಯಂ ನಿವರ್ತಕ ವಿಜ್ಞಾನಾನು ರೂಪ್ಯಾಯ।**

ಇದೇ ಅಭಿಪ್ರಾಯದಿಂದಲೇ ಈ ಮೊದಲೇ ಉಕ್ತವಾಗಿರುವ 'ತಮೋ ಮೋಹಿತಾನ್ ಕರ್ಮವಶ್ಯಾನ್.. ' ಎಂಬ ಉಪನಿಷದ್ ವಾಕ್ಯದಿಂದ ಅಜ್ಞಾನ ದಿಂದ ಮೂಢರೂ, ಕರ್ಮಗಳಿಗೆ ಅಧೀನರೂ ಆಗಿರುವ ಜೀವಗಳನ್ನು (ಪ್ರಾಣಿಗಳನ್ನು) ರಕ್ಷಿಸಬೇಕೆಂಬ ಇಚ್ಛೆಯಿಂದ ಸೃಷ್ಟಿಕರ್ತನು ಅನೇಕ ಜನ್ಮಗಳಲ್ಲಿ ಪ್ರಾಣಿಗಳು ಆರ್ಜಿಸಿರುವ ಬಹು ವಿಧ ಕರ್ಮಗಳನ್ನು ನಾಶಮಾಡುವುದಕ್ಕಾಗಿ ಅವರಿಗೆ ವಿಜ್ಞಾನವನ್ನು ಉಪದೇಶ ಮಾಡಬೇಕೆಂದು ವೇದ ಶಿಲ್ಪವನ್ನು ಪ್ರಕಟಪಡಿಸಿದನು ಎಂದು ಹೇಳಿರುತ್ತದೆ **ಕರ್ಮವಶ್ಯಾನ್** ಎಂಬ ಪದಕ್ಕೆ ಬಹು ಜನ್ಮಸ್ಥಳ ಸಮೂಹದಿಂದ ಉಂಟಾದ ನಾನಾವಿಧ ಕರ್ಮಗಳಿಗೆ ಅಧೀನರಾಗಿ ತೊಳಲುತ್ತಿರುವ ಜೀವರುಗಳನ್ನು ಎಂದು ಅರ್ಥ. ಇಂತಹ ಜೀವರುಗಳನ್ನು ವಿಜ್ಞಾನೋಪದೇಶದಿಂದ ರಕ್ಷಿಸಿ ಉದ್ಧರಿಸುವುದಕ್ಕಾಗಿಯೇ ಪರಶಿವ ಸ್ವರೂಪದನ ವಿಶ್ವಕರ್ಮ ಪರಮೇಶ್ವರನು ವೇದ ಶಿಲ್ಪವನ್ನು ಪ್ರಕಟ ಪಡಿಸಿದ್ದಾನೆ ಎಂದು ಅಭಿಪ್ರಾಯವು.

**ನನು ತದ್ರೂಪಃ ಪರಃ ಶಿವಃ ಅನಂತ ದಿವ್ಯ ತೇಜೋಮಯ ಇತಿ ಉಪನಿಷದಾ ತ್ರಿವಿಧ ಪರಿಚ್ಛೇದ ರಹಿತೋ ಬೋಧ್ಯತೇ ವಸ್ತು ಪರಿಚ್ಛೇದನಿಷೇಧೋಯತೋಽವಗಮ್ಯ। ತತೋ ಮನ್ಯಾ ಮಹೇತ-ತೋಽವಗಂತುಂ ಪೃಥವಾಮಃ ತಮಸ್ತದ್ಭಿನ್ನ ಮಸ್ತೀತಿ ನತರಾಂ ಚ ತಜ್ಞನ್ಯಾನ್ಮೋಹಾನ್ ನ ತಮಾಂ ಚ ತತ್ರ ಸೂತಾನಿ ವಿಚಿತ್ರಾಣಿ ಕರ್ಮಾ[illegible] ನೋ ಏವ [illegible] ತಜ್ಞನ್ಯಾ ವಿಚಿತ್ರಾ[illegible] ಪದಃ ಯಾಸಾಂ ನಿವರ್ತನಾಯ ವಿಚಿತ್ರಂ ವಿಜ್ಞಾನಮಪೇಕ್ಷೇತ ತದಿಹ ಕಾದೃಗ್ವಿಚಾ**

**ನಾಯಂ ಶಿಲ್ಪವೇದ ಪ್ರಕಟನಂನಾವಕಾಶಿತ ಇತಿ ಚೇತ್ ಪರಿಹೃತ ವೇತತ್ "ನಿರಾಕಾರೋsಪಿ ಸಾಕಾರತ್ವಂ ವಿಧತ್ತೇ" ಇತ್ಯಾದಿನಾ ಸಂದರ್ಭೇಣ ತಯ್ಯೈ ವೋಪನಿಷದಾ । ಅಯಮಭಿ ಸಂಧಿಃ ।**

ಉಪನಿಷತ್ತುಗಳು ಸೃಷ್ಟಿಕರ್ತನಾದ ವಿಶ್ವಕರ್ಮ ಪರಮೇಶ್ವರನನ್ನು ಸದ್ರೂಪದಿಂದ ಇರುವನು ಎಂದು ವರ್ಣಿಸುತ್ತವೆ. ಅನನು ಅನಂತ ದಿವ್ಯ ತೇಜೋಮಯನು. ಅವನಿಗೆ ದೇಶ–ಕಾಲ-ವಸ್ತುಗಳೆಂಬ ಮೂರು ಬಗೆಯ ಪರಿಚ್ಛೇದಗಳು ಇಲ್ಲ. ಹಾಗೆಂದರೆ ಅವನು ಎಲ್ಲಾ ಸ್ಥಳಗಳಲ್ಲಿಯೂ, ಎಲ್ಲಾ ಕಾಲಗಳಲ್ಲಿಯೂ, ಎಲ್ಲಾ ವಸ್ತುಗಳಲ್ಲಿಯೂ ವ್ಯಾಪಿಸಿದ್ದಾನೆ. ಇಂತಹ ಈಶ್ವರನ ಶಕ್ತಿ ಸಾಮರ್ಥ್ಯಗಳನ್ನು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. ಸೃಷ್ಟಿಕರ್ತನಾದ ಪರಮೇಶ್ವರನ ಸ್ವರೂಪವನ್ನು ತಪೋನಿಷ್ಟರೂ, ಜಿತೇಂದ್ರಿಯರೂ ಆಗಿರುವ ಯೋಗಿಗಳೇ ತಿಳಿಯಲು ಕಷ್ಟಸಾಧ್ಯವಾಗಿರುವಾಗ ಅಜ್ಞಾನದಿಂದ ಮೋಹಿತರಾಗಿರುವ ಸಾಮಾನ್ಯ ಜನರು ತಿಳಿಯುವುದೆಂತು ? ಅಜ್ಞಾನವೆಂಬುದು ಈಶ್ವರ ಸ್ವರೂಪವನ್ನು ಅರಿಯಲು ಅಡ್ಡಿಯಾಗಿದೆ. ಅಜ್ಞಾನದಿಂದ ಮೋಹವುಂಟಾಗುತ್ತದೆ. ಈ ಮೋಹದಿಂದಲೇ ಪ್ರಾಣಿಗಳು ಅನೇಕ ವಿಧವಾದ ಕರ್ಮಗಳಲ್ಲಿ ತೊಡಗುತ್ತವೆ. ವಿವಿಧ ಕರ್ಮಗಳನ್ನು ಆಚರಿಸುವುದರಿಂದ ಆಯಾ ಕರ್ಮಗಳಿಗೆ ಅನುಸಾರವಾಗಿ ಬಗೆ ಬಗೆಯ ವಿಪತ್ತುಗಳು ಉಂಟಾಗುತ್ತವೆ ಈ ವಿಪತ್ತುಗಳನ್ನು ನಾಶ ಪಡಿಸುವುದಕ್ಕಾಗಿ ಇವುಗಳಿಗೆ ಮೂಲ ಕಾರಣವಾದ ಅಜ್ಞಾನವನ್ನು ನಾಶಪಡಿಸಬೇಕು. ಅಜ್ಞಾನ ನಾಶವು ವಿಜ್ಞಾನೋಪದೇಶದಿಂದ ಮಾತ್ರವೇ ಸಾಧ್ಯವಾಗುತ್ತದೆ. ವಿಜ್ಞಾನಕ್ಕೆ ಅಜ್ಞಾನವನ್ನು ನಾಶಮಾಡುವ ಸಾಮರ್ಥ್ಯ ಮಾತ್ರವೇ ಅಲ್ಲದೆ ಮೋಕ್ಷ ಸಾಧನೆಗೆ ಅವಶ್ಯಕವಾದ ಜ್ಞಾನವನ್ನು ಮೂಡಿಸುವ ಶಕ್ತಿಯೂ ಇದೆ. ಇಂತಹ ವಿಜ್ಞಾನವನ್ನೂ ತಿಳಿದುಕೊಳ್ಳಬೇಕಾದರೆ ಶಿಲ್ಪವೇದವು ಪ್ರಕಟಗೊಳ್ಳಬೇಕಾದುದು ಅತ್ಯಾವಶ್ಯಕವಾಯಿತು.

ಸೃಷ್ಟಕರ್ತೃವಾದ ಪರಮೇಶ್ವರನು ನಿರಾಕಾರನಾಗಿದ್ದರೂ ಕರ್ಮವಶ್ಯರಾದ ಪ್ರಾಣಿಗಳ ಉದ್ಧಾರಕ್ಕಾಗಿ ಸರಕಾರವನ್ನು ಹೊಂದುವನು ಎಂದು

ಉಪನಿಷತ್ತಿನಲ್ಲಿ ಹೇಳಿರುವ ಸಂಭರ್ದಲ್ಲಿಯೇ ಈ ಮೊದಲು ಹೇಳಿದ ಎಲ್ಲಾ ದೋಷಗಳೂ ಪರಿಹೃತವಾಗಿರುವುವು.

**ಯಥಾ ಹಿ ಸಚ್ಚಿದಾನಂದ ರೂಪಃ ಪರಃ ಶಿವೋಽನನ್ತಃ ಉಪನಿಷತ್ಸಂಮತಃ ತಥೈವ ಸಾಕಾರೋಽಪಿ ಸಂಮತಃ । ಸ ಚಾಕಾರಃ ಸತ್ಯರೂಪಃ ಶಿವವನ್ನ ತ್ರಿಕಾಲಾಬಾಧ್ಯಃ ಕಿಂತು ಜ್ಞಾನ ವಿರುದ್ಧಾತ್ವಾತ್ ಜ್ಞಾನನಿವರ್ತ್ಯ ಅಜ್ಞಾನ ಪದವಾಚ್ಯಶ್ಚ ಪರಶಿವ ಶಕ್ತಿರೂಪಃ ತತೋ ಮೋಹಾಃ ತತಃ ಕರ್ಮಾ ತತ ಆ ಪದಃ ಪ್ರವರ್ತಂತ ಇತಿ ತತ್ತನ್ಮೂಲ ನಿವರ್ತಕ ವಿಜ್ಞಾನಾನ್ಯನೇಕಾನ್ಯ ಪೇಕ್ಷ್ಯಂತ ಏವೇತಿತಾದೃಗ್ಜ್ಞಾನ ಬೋಧಕ ಶಿಲ್ಪವೇದ ಪ್ರಕಟನಮತ್ಯಂತಮ ಪೇಕ್ಷಿತ ಮೇವೇತಿ । ತದಿದಂ ಮುಕ್ತಂ।**

ಪರಶಿವ ವಿಶ್ವಕರ್ಮನು ಸಚ್ಚಿದಾನಂದ ಸ್ವರೂಪನು. ಅವನಿಗೆ ಅಂತವೆಂಬುದು ಇಲ್ಲ. ಆದ್ದರಿಂದ ಅನಂತನು ದೇಶಕಾಲ ವಸ್ತುಪರಿಚ್ಛೇದವು ಅವನಿಗಿಲ್ಲ ಎಂದುಉಪನಿಷತ್ತೇ ಹೇಳುವಂತೆಯೇ ಅವನು ಸಾಕಾರನಾಗಿದ್ದಾನೆ ಎಂದು ಈಶ್ವರ ಸ್ವರೂಪವನ್ನು ಉಪನಿಷತ್ತುಗಳು ಭೋಧಿಸುತ್ತಿವೇ. ಆದರೆ ಸಾಕಾರನಾಗಿರುವ ಈಶ್ವರನ ಆಕಾರವು ಮಾತ್ರ ಸತ್ಯವಾದುದಲ್ಲ. ಏಕೆಂದರೆ ಆಕಾರವು ಮೂರುವಿಧವಾದ ಪರಿಚ್ಛತ್ತಿಗೆ–ದೇಶ ಕಾಲ ಮತ್ತು ವಸ್ತುಗಳಿಂದ ಪ್ರಮಾಣಿ ಪರಿಚ್ಛಿತ್ತಿಗೆ–ಆಧೀನವಾಗಿರುತ್ತದೆ. ಆ ಆಕಾರವು ಪರಮೇಶ್ವನಂತೆ ನಿರ್ವಿಶೇಷ ಕೃತವಾದ ಬ್ರಹ್ಮ ಸ್ವರೂಪದಂತೆ ತ್ರಿಕಾಲಗಳಿಂದ ಹೊರತು ಪಡಿಸಿ ಇರದೆ ತ್ರಿಕಾಲಬಾಧಿತವಾಗಿರುತ್ತದೆ. ಆದ್ದರಿಂದ ಈ ಆಕಾರವು ಜ್ಞಾನ ವಿರುದ್ಧವಾಗಿರುತ್ತದೆ. ಇದು ಜ್ಞಾನ ನಿವರ್ತ್ಯವಾಗಿರುತ್ತದೆ. ಇದನ್ನು ಅಜ್ಞಾನವೆಂದು ಕರೆಯುತ್ತಾರೆ. ಇದೇ ಪರಶಿವನ ಶಕ್ತಿಯ ರೂಪದಿಂದ ಇರುವುದು. ಈ ಶಕ್ತಿಯಿಂದಲೇ ಅಜ್ಞಾನವು ಅಥವ ಮೋಹವು ಉಂಟಾಗುವುದು. ಅದರಿಂದಲೇ ಕರ್ಮಗಳು, ಆ ಕರ್ಮಗಳಿಂದ ಆಪತ್ತುಗಳು ಉಂಟಾಗುತ್ತವೆ.

**ಸಚ್ಚಿಜ್ಞಾನಾನಂದ ರೂಪೋಽಪ್ಯಗಣಿತ ಮಹಿಮ ಸ್ವಾತ್ಮ ಮಾಯಾಮ್ ಸ್ವಶಕ್ತಿಂ ಸಂಗೃಹ್ಣನ್ ಸಾಂಬ ಮೂರ್ತಿಃ ವೇದ ಶಿಲ್ಪಂ ಪ್ರಕಟಯತಿತರಾಮಿತಿ। ಸುಗಮ ಮನ್ಯತ್ ತದಿದಮವನಂ ಭಗವತೀ ಉಪನಿಷತ್ ಶಿಷ್ಯ ಪ್ರಾರ್ಥನಾ ರೂಪಂ ದರ್ಶಯಂತೀ ಪ್ರವರ್ತತೇ— ಸಹನಾವವತ್ವಿತಿ ಅತ್ರ ಶಿಷ್ಯವರ್ಗ ಆಚಾರ್ಯವರ್ಗಶಬ್ದಾವರ್ಥೌ ದ್ವಿವಚನ ನಿರ್ದಿಷ್ಟೌ [illegible]ಸ್ಯೋಽರ್ಥಯತಾ ಗುರು ಪುರಸ್ಸರಃ। ದೀಪಕಾಲಂಕಾರ ವಿಧಯಾ ನಿರ್ದೇಶಃ ಹೇ ಸಾಂಬ ಮೂರ್ತೇ ಯಥಾ ಮಮಾಚಾರ್ಯಂ ಶಿಲ್ಪವೇದ ಪ್ರಕಟನಾದ್ರಕ್ಷಿತವಾನಸಿ ತಥೈವ ಮಾಮಪಿ ರಕ್ಷೇತಿ ತದರ್ಥಃ। ರಕ್ಷಣ ಸ್ವರೂಪ ಮೇವ ವಿವೃಣೋತಿ "ಸಹ ನೌ ಭುನಕ್ತು" ಇತಿ ಯಥಾ ಅಜ್ಞಾ[illegible] ನಿವರ್ತನೇನ ಆನಂದ ಭೋಗೋಽಭವದಾಚಾರ್ಯಸ್ಯ ಏವಂ ಮಾಮಪ್ಯಾನಂದಂ ಭೋಜಯೇತಿ ಪ್ರಾರ್ಥನಾಯಾಂ' ಸರ್ವತ್ರ ಲೋಟ್।**

ಸಜ್ಞಾನಾನಂದ ರೂಪನಾದ ಸೃಷ್ಟಿಕರ್ತನು ಅಪಾರ ಮಹಿಮೆಯುಳ್ಳ ತನ್ನ ಶಕ್ತಿಯನ್ನೂ ತನ್ನಲ್ಲಿಯ ಮಾಯಾ ಶಕ್ತಿಯನ್ನೂ ಸಂಗ್ರಹಿಸಿ ಶಿಲ್ಪ ವೇದವನ್ನು ಪ್ರಕಟ ಮಾಡಿರುತ್ತಾನೆ. ಈ ರೀತಿಯಾಗಿ ಸೃಷ್ಟಿಕರ್ತನು ಎಲ್ಲರನ್ನೂ ರಕ್ಷಿಸುವವನೆಂದು ಉಪನಿಷದ್ಗ್ರಂಥವು ಬೋಧಿಸುವುದು. ಶಿಷ್ಯನೂ ಕೂಡ ಇದಕ್ಕಾಗಿ ಪ್ರಾರ್ಥನೆಯನ್ನು ಮಾಡುವವನೆಂದು 'ಸಹನಾವತು' ಎಂಬ ಮಂತ್ರದಿಂದ ಸ್ಪಷ್ಟಪಡಿಸಿರುವುದು. ಈ ಮಂತ್ರದಲ್ಲಿ ನೌ (ನಮ್ಮಿಬ್ಬರನ್ನೂ) ಎಂಬ ದ್ವಿವಚನ ಸರ್ವನಾಮ ಶಬ್ದವು ಶಿಷ್ಯವರ್ಗ ಮತ್ತು ಆಚಾರ್ಯ ವರ್ಗ ಎಂಬ ಎರಡು ವರ್ಗಗಳನ್ನು ಸೂಚಿಸುತ್ತದೆ. ಶಿಷ್ಯನು ಗುರುವನ್ನು ಮುಂದಿರಿಸಿಕೊಂಡು ರಕ್ಷಣೆಯನ್ನು ಬೇಡುತ್ತಾನೆ. 'ಅವತು' ಎಂಬ ಕ್ರಿಯಾಪದವು ಶಿಷ್ಯ ಮತ್ತು ಗುರು ಶಬ್ದಗಳೆರಡಕ್ಕೂ ಸಂಬಂಧಿಸಿರುವ ಕಾರಣ ದೀಪಕಾಲಂಕಾರ ರೀತಿಯಿಂದ ಈ ವಾಕ್ಯದ ಅರ್ಥವು ಇಂತಿದೆ; 'ಅಂಬಾ ಸಮೇತವಾಗಿರುವ ಪರಮಶಿವನೇ ನೀನು ಶಿಲ್ಪವೇದವನ್ನು ಪ್ರಕಟನೆ ಮಾಡುವುದರ ಮೂಲಕ ನನ್ನ ಗುರುವನ್ನೂ ರಕ್ಷಿಸುತ್ತಿರುವ ಹಾಗೆನನ್ನನ್ನೂ ರಕ್ಷಿಸು' ಈ ವಾಕ್ಯದಲ್ಲಿಯ ರಕ್ಷಣೆಯು 'ಸಹ ನೌ ಭುನಕ್ತು' ಎಂಬ ವಾಕ್ಯದಿಂದ ಸೂಚಿತವಾಗಿದೆ. 'ನೀನು

ಶಿಲ್ಪ ವೇದದ ಪ್ರಕಟಣೆಯಿಂದ ನನ್ನ ಗುರುವಿನ ಅಜ್ಞಾನವನ್ನು ನಾಶಳಿಸಿ ಗುರುವಿಗೆ ಆನಂದಾನುಭವವನ್ನು ಉಂಟು ಮಾಡಿರುತ್ತೀಯೆ. ಅದರಂತೆಯೇ ನನಗೂ ಕೂಡ ಅಜ್ಞಾನ ನಷ್ಟವಾಗಿ ಆನಂದಾನುಭವ ಉಂಟಾಗುವಂತೆ ಅನುಗ್ರಹವನ್ನು ಮಾಡು' ಎಂಬ ಶಿಷ್ಯನ ಪ್ರಾರ್ಥನೆಯನ್ನು 'ಸಹ ನೌ ಭುನಕ್ತು' ಎಂಬ ವಾಕ್ಯವು ಹೇಳುತ್ತದೆ. ಪ್ರಾರ್ಥನೆಯನ್ನು ಬೋಧಿಸುವುದಕ್ಕಾಗಿಯೇ ಅವತು, ಭುನಕ್ತು, ಕರವಾವಹೈ, ವಿದ್ವಿಷಾವಹೈ ಎಂಬ ಕ್ರಿಯಾವಾಚಕ ಶಬ್ದಗಳು ಲೋಟ್ ಅಂತವಾಗಿಯೇ ಪ್ರಯೋಗಿಸಲ್ಪಟ್ಟಿರುವುವು.

**ಅಪರಿಮಿತ ಶಕ್ತಿಕಾಜ್ಞಾನನಿವರ್ತನೇ ಜ್ಞಾನ ವೀರ್ಯಂ ಗುರುಃ ಯಥಾ ಅಕರೋತ್ತಥಾ ಮಪಿಕುರ್ಯಾಮಿತ್ಯರ್ಥಃ। 'ಸಹ ವೀರ್ಯಂ ಕರವಾವಹೈ' [illegible] ತದೇವ ವೀರ್ಯಂ ವಿವೃಣೋತಿ ।**

ಅಪರಿಮಿತವಾದ ಶಕ್ತಿಯುಳ್ಳ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನ ಶಕ್ತಿ ಉಳ್ಳುವನಾಗಿ ಗುರುವು ನನ್ನನ್ನು ಅನುಗ್ರಹಿಸಿರುವಂತೆಯೇ ನಾನೂ ಕೂಡ ಇನ್ನೊಬ್ಬನನ್ನು(ಶಿಷ್ಯನನ್ನು) ಅನುಗ್ರಹಿಸುವ ಸಾಮರ್ಥ್ಯವಿರುವ ಜ್ಞಾನ ವೀರ್ಯನನ್ನಾಗಿ ನನ್ನನ್ನು ಮಾಡು ಎಂಬ ಪ್ರಾರ್ಥನೆಯು 'ಸಹ ವೀರ್ಯಂ ಕರವಾವಹೈ' ಎಂಬ ವಾಕ್ಯದಲ್ಲಿ ಸೂಚಿತವಾಗಿದೆ.

**"ತೇಜಸ್ವಿನಾವಧೀತ ಮಸ್ತ್ವಿತಿ। ಭಾವೇಕ್ತಃ ಇಙ್ ಧಾತೋರಧಿಪೂರ್ವಸ್ಯ। ಗತ್ಯರ್ಥಾ ಧಾತಾವೋ ಜ್ಞಾನಾರ್ಥಾಃ। ತಥಾ ಚ ಅಧೀತ ಜ್ಞಾನಂ ತೇಜಸ್ವಿ ಅಸ್ತು ಊರ್ಜಿತಮಸ್ತು ಅತಿಧೃಢಂ ನೈಕಶಕ್ತಿಕಾಜ್ಞಾನ ನಿವನಕ್ಷಮಂ ಗುರೋರಿವೇತಿ ಭಾವಃ। ಈದೃಶ ಜ್ಞಾನವತಃ ಲಕ್ಷಣ ಮಾಹ।**

ಪೂರ್ವೋಕ್ತ ಪ್ರಕರವಾದ ಜ್ಞಾನದ ಸಮರ್ಥ್ಯವನ್ನು 'ತೇಜಸ್ವಿನಾವಧೀತ ಮಸ್ತು' ಎಂಬ ವಾಕ್ಯವು ವಿವರಿಸುವುದು. ಅಧಿ ಎಂಬ ಉಪಸರ್ಗ

ಪೂರ್ವಕವಾದ **ಇಣ್** ಧಾತುವಿಗೆ ಭಾವಾರ್ಥದಲ್ಲಿ **ಕ್ತ** ಪ್ರತ್ಯಯವು ಬಂದಿರುವುದರಿಂದ **ಅಧೀತಂ** ಎಂಬ ಪದವಾಗಿದೆ. ಗತ್ಯರ್ಥಕ ವಾಚಕಗಳಾದ ಧಾತುಗಳೆಲ್ಲವೂ ಜ್ಞಾನಾರ್ಥವನ್ನು ಬೋಧಿಸುತ್ತವೆ. ಆದ್ದರಿಂದ ನಮ್ಮ ಜ್ಞಾನದಂತೆ ಅನೇಕ ವಿಧವಾದ ಸಾಮರ್ಥ್ಯವುಳ್ಳ ಅಜ್ಞಾನವನ್ನು ನಾಶಮಾಡುವುದರಲ್ಲಿ ಶಕ್ತಿಯುಳ್ಳದ್ದಾಗಿ ಊರ್ಜಿತವಾಗಿರಲಿ ಎಂದು ಅರ್ಥವಾಗುತ್ತದೆ.

**'ಮಾ ವಿದ್ವಿಷಾವಹೈ' ಇತಿ ಯಥಾ ಗುರೋಃ ಕಸ್ಯಾಪಿ ವಿಷಯೇ ವಿದ್ವೇಷ ಭಾವೇನ ಜ್ಞಾನದಾರ್ಢ್ಯಂ ದೃಷ್ಟಂ ತಥಾ। ಮಮಾಪಿ ಭವತ್ವಿತಿ ತದರ್ಥಃ ॥**

ಈ ರೀತಿಯಾದ ಜ್ಞಾನವನ್ನು ಹೊಂದಿರುವ ಗುರುಶಿಷ್ಯರಾದ ನಾವಿಬ್ಬರೂ ಪರಸ್ಪರ ದ್ವೇಷಿಸಬಾರದು ಎಂದು ಮಾ ವಿದ್ವಿಷಾವಹೈ ಎಂಬ ವಾಕ್ಯವು ಭೋಧಿಸುತ್ತದೆ, ಗುರುವಿಗೆ ಯಾವ ವಿಷಯದಲ್ಲಿಯೂ ದ್ವೇಷವಿಲ್ಲದೆ ಜ್ಞಾನದಾರಢ್ಯವಿರುವಂತೆ ಶಿಷ್ಯನಾದ ನನಗೂ ಜ್ಞಾನದಾರಢ್ಯ ಉಂಟಾಗಲಿ ಎಂಬುದು ಈ ವಾಕ್ಯದ ಅಭಿಪ್ರಾಯ.

**ಈ ದೃಶಜಾ । ಮಹಿಮ್ನಾ ಆಧ್ಯಾತ್ಮಿಕಾಧಿದೈವಿಕಾಕಧಿಭೌತಿ ದುಃಖಾಗ್ನೀನಾಂ ಶಾಂತಿ ಭವತ್ವಿತಿ ಅಜ್ಞಾನಾಖ್ಯ ಮಹಾಂಧಕಾರಾದ್ರಕ್ಷಕ ಪರಮೇಶ್ವರಾಬೋಧಕೇನ ಓಂಕಾರೇಣ ಸಂಬೋಧ್ಯ ಪ್ರಾರ್ಥಯತೇ 'ಓಂ ಶಾನ್ತಿಃ ಶಾನ್ತಿಃ ಶಾನ್ತಿಃ' ರಿತಿ ॥**

ಈ ಪ್ರಕಾರವಾದ ಜಾನದ ಮಹಿಮೆಯಿಂದಲೇ ಆಧ್ಯಾತ್ಮಿಕ, ಆಧಿದೈವಿಕ ಆಧಿಭೌತಿಕ ಎಂಬ ಮೂರು ವಿಧಗಳ ತಾಪತ್ರಯಗಳೂ ಶಾಂತವಾಗಲಿ, ಆಧಿದೈವಿಕ ಮುಂತಾದ ಈ ತಾಪತ್ರಯಗಳು ಅಗ್ನಿಯಂತೆ ದುಃಖವನ್ನು ಹೆಚ್ಚಿಸಿ ಸಂಕಟ ಪಡಿಸುವ ಕಾರಣ ಇವುಗಳ ವೇಗವು ಜ್ಞಾನದಾರಢ್ಯ ಮಹಿಮೆಯಿಂದ ಉಪಶಾಂತವಾಗಲಿ ಎಂಬ ಪ್ರಾರ್ಥನೆಯು ಬೋಧಿತವಾಗಿರುತ್ತದೆ. ಅಜ್ಞಾನವೆಂಬ ಕತ್ತಲೆಯಿಂದ ಕಾಪಾಡುವ ಪರಮೇಶ್ವರನನ್ನು ಓಂಕಾರದಿಂದಲೇ

ಸಂಬೋಧಿಸಿ 'ಓಂ ಶಾಂತಿಃ ಶಾಂತಿಃ ಶಾಂತಿಃ' ಎಂದು ದುಃಖ ಶಾಂತಿಗಾಗಿ ಪ್ರಾರ್ಥನೆ ಮಾಡಲ್ಪಟ್ಟಿದೆ.

**[redacted] ನಾವವತ್ವಿತ್ಯಾದಿ ಮಂತ್ರ ಸೂತ್ರಿತಮರ್ಥ ಜಾತಂ ವಿವೃಣ್ವತೀ ಭಗವತೀ ಉಪನಿಷತ್ಪ್ರವರ್ತತೇ। ಅಥ ಶಿಲ್ಪವಿದ್ಯಾ ರಹಸ್ಯೋಪನಿಷದಂ ವ್ಯಾಖ್ಯಾಸ್ಯಾಮ ಇತಿ। ಮಲಪಾಕಂ ಶಿಷ್ಯ ನಿಷ್ಠಮವಗತ್ಯೇತಿ ಅಥ ಶಬ್ದಾರ್ಥಃ। ಯದರ್ಥ ಮುಕ್ತಂ 'ಪರಿಪಕ್ವೇತಿ....' ಪ್ರಮಾಣಂ। ಕೇ ಪುನರತ್ರ ವ್ಯಾಖ್ಯಾಕಾರೋಽಸ್ಮದರ್ಥಾಃ। ಪರಃ ಶಿವ ಇತಿ ಬ್ರೂಮಃ। ನನ್ವೇಕಃ ಸಃ। ನ ಚೈಕಸ್ಮಿನ್ ಬಹುವಚನಂ ಘಟತೇ। ಘಟತ ಇತಿ ಬ್ರೂಮಃ। 'ಅಸ್ಮದೋದ್ವಯೋ ರಿತಿ' ಯತಃ ಪಾಣಿನೇರನು ಶಾಸನಂ। ಅಥವಾ ತದೇವ ಸ್ಮರತ್ವಾಯುಷ್ಮಾನ್।**

'ಸಹ ನಾವವತು' ಮೊದಲಾದ ಮಂತ್ರಗಳು ಈ ಉಪನಿಷತ್ತಿನಲ್ಲಿ ಸೂತ್ರಬದ್ಧ ವಾಕ್ಯಗಳಂತೆ ಅತಿ ಗಂಭೀರ ಶೈಲಿಯಿಂದ ಉಕ್ತವಾಗಿರುವುದಲ್ಲದ ಈ ಉಪನಿಷತ್ತಿನ ಅರ್ಥವನ್ನು ಬೋಧಿಸಲು 'ಅಥ ಮಹಾಶಿಲ್ಪೋಪನಿಷದಃ ವ್ಯಾಖ್ಯಾಸ್ಯಾಮಃ' ಎಂದು ಪ್ರಾರಂಭಿಸಲ್ಪಟ್ಟಿದೆ. ಅಥ ಶಬ್ದಕ್ಕೆ ಹಿಂದೆ ಹೇಳಿರುವಂತೆ ಅನೇಕ ಅರ್ಥಗಳಿದ್ದರೂ ಪ್ರಸ್ತುತದಲ್ಲಿ 'ಅನಂತರ' ಎಂದು ಅರ್ಥವಾಗಿರುತ್ತದೆ. ಅನಂತರವೆಂದರೆ ಯಾವುದರ ನಂತರವೆಂಬ ಪ್ರಶ್ನೆಯು ಉದ್ಭವಿಸುತ್ತದೆ. ಇದಕ್ಕೆ ಆಣವ, ತಾಮಸ, ಕಾರ್ಮಿಕಗಳೆಂಬ ಮೂರು ಬಗೆಯ ಮಲಗಳು ಶಿಷ್ಯನಲ್ಲಿ ಯಾವ ಹಂತದಲ್ಲಿವೆ. ಅವುಗಳ ಪರಿಪಕ್ವತೆ ಏನು ಎಂಬ ಭಾವವನ್ನು ತಿಳಿದ ನಂತರ ಎಂದು ಅರ್ಥವಾಗುತ್ತದೆ. ಈ ಅಭಿಪ್ರಾಯವನ್ನು ಅನುಸರಿಸಿಯೇ—

**ಪರಿಪಕ್ವಮಲಾ ಯೇ ತಾನುತ್ಸಾದನ ಹೇತು ಶಕ್ತಿ ಯೋಗೇನ।**
**ಯೋಜಯತಿ ಪದೇ ತತ್ತ್ವೇ ಸ ದೀಕ್ಷಯಾ ಆಚಾರ್ಯ ಮೂರ್ತಿ ಸ್ಥಃ॥**

—ಎಂಬ ಪ್ರಮಾಣವಚನ ಉದಾಹೃತವಾಗಿರುವುದು.

ಅಸ್ಮತ್ ಶಬ್ದದಿಂದ ಇಲ್ಲಿ ಅಹಂ ಪ್ರತೀತ ಗಮ್ಯನಾದ ಪರಶಿವನೇ ಈ ಉಪನಿಷತ್ತನ್ನು ವಿವರಿಸಿರುವನು ಎಂದು ತಿಳಿಯಬೇಕು. ಪರಶಿವನು ಒಬ್ಬನೇ ಆದರೂ **ವ್ಯಾಖ್ಯಾಕಾರಃ, ಅಸ್ಮದರ್ಥಾಃ** ಎಂದು ಬಹುವಚನ ಪ್ರಯೋಗ ವಿರುವುದು. ಇದು ವ್ಯಾಕರಣ ಬದ್ಧವಲ್ಲ. ಒಬ್ಬನನ್ನು ಸಂಬೋಧಿಸುವಾಗ ಬಹುವಚನವನ್ನು ಉಪಯೋಗಿಸುವುದು ಸರಿಯಲ್ಲವೆಂದು ಹೇಳ ಬೇಕಾಗು ವುದು. ಆದರೆ **ಅಸ್ಮದೋರ್ದ್ವಯೋರಿತಿ** ಎಂಬ ಪಾಣಿನಿ ಕೃತವಾದ ವ್ಯಾಕರಣ ಸೂತ್ರದಲ್ಲಿ ಹೇಳಲಾಗಿರುವಂತೆ ಏಕವಚನದ ಕರ್ತೃಪದವನ್ನು ಬಹುವಚನದ ಕ್ರಿಯಾಪದವನ್ನು ಇಲ್ಲಿ ಪ್ರಯೋಗಿಸಿರುವುದು ಸಾಧುವೆಂದು ತಿಳಿಯಬೇಕು. ಅಥವಾ 'ಗುರುವಾತ್ಮನಿ ಬಹುವಚನಂ ಎಂಬ ನ್ಯಾಯದಿಂದಲೂ ಇಲ್ಲಿ ಕರ್ತೃ ವಾಚಕವು ಬಹುವಚನವೆಂದು ಪರಿಗಣಿಸಲ್ಪಟ್ಟು ಅದಕ್ಕನುಸಾರವಾದ ಬಹು ವಚನದ ಕ್ರಿಯಾಪದದ ಪ್ರಯೋಗವು ಯುಕ್ತವಾಗಿರುವುದೆಂದು ತಿಳಿಯ ಬೇಕು.

**ಅನಾದಿರ ಸಂತಃ [redacted] । ಅತೀತಾ ವರ್ತಮಾನಾ ಆಗಾಮಿನ ಶ್ಯಾಚಾರ್ಯಾಃ । ಆಚಾರ್ಯ ಮೂರ್ತಿಸ್ಥಃ ಪರಃ ಶಿವ ಉಪದಿಶತೀತಿ । ತಸ್ಮಾದ್ಬಹುಮೂರ್ತಿ ಭೇದ ಮಾಶ್ರಿತ್ಯ ಸಾಂಬ ಆಚಷ್ಟೇ ।**

ಕಾಲವು ಆದ್ಯಂತವಿಲ್ಲದ್ದು. ಹೀಗಿರುವ ಕಾಲವನ್ನು ಅನುಸರಿಸಿ ಗುರುಗ ಳಾಗಿದ್ದವರು ಅನೇಕರು ಈಗ ಮರೆಯಾಗಿದ್ದಾರೆ. ಈಗಲೂ ಹಲವರು ಇದ್ದಾರೆ. ಇನ್ನು ಮುಂದೆಯೂ ಬಹುಮಂದಿ ಗುರುಗಳಾಗಲಿದ್ದಾರೆ. ಭೂತ, ವರ್ತಮಾನ ಮತ್ತು ಭವಿಷ್ಯತ್ಕಾಲಗಳ ಅನುಸಾರ ಗುರುಗಳು ಬೇರೆ ಬೇರೆ ಯಾದರೂ ಗುರುಮೂರ್ತಿ ಗತನಾದ ಪರಮಾತ್ಮನು ಮಾತ್ರ ಒಬ್ಬನೇ ಆಗಿದ್ದು ಉಪದೇಶವನ್ನು ಮಾಡುತ್ತಿರುವನು ಎಂಬುದು ತಾತ್ತ್ವಿಕ ವಸ್ತು ಸ್ಥಿತಿ. ಆದ್ದ ರಿಂದ ಆಯಾಯ ಗುರುವಿಗೆ ಪ್ರಯುಕ್ತವಾದ ಬಹುವಚನವು ಗುರುಭೇದ ವನ್ನು ಅನುಸರಿಸಿ ಇರುತ್ತದೆ. ಆದ್ದರಿಂದ 'ಉಪನಿಷದಂ ವ್ಯಾಖ್ಯಾಸ್ಯಾಮಃ' ಎಂಬ ಬಹುವಚನ ಪ್ರಯೋಗವು ಸಾಧುವಾಗಿದೆ.

**ವ್ಯಾಖ್ಯಾಸ್ಯಾಮ ಇತಿ । ನನು ನೈವಂ ವದಿತುಂ ಯುಕ್ತಂ ವ್ಯಾಖ್ಯಾಸ್ಯಾಮ ಇತಿ । ಯದಾ ಗುರುಂ ಪೃಚ್ಛತಿ ಶಿಷ್ಯಸ್ತದಾ ಸ ವದತಿ ತತೋ ವ್ಯಾಖ್ಯಾಮ ಇತಿ ನಿರ್ದೇಶ್ಯತ್ವಂ। ನ ನಿರ್ದೇಶ್ಯತ್ವಂ ।**

ಶಿಷ್ಯನನ್ನು ಗುರುವು ಪ್ರಶ್ನೆ ಮಾಡುವಾಗ ವ್ಯಾಖ್ಯಾಸ್ಯಾಮಃ ಎಂದು ಉತ್ತರ ಹೇಳುತ್ತಾನೆ. ಆದ್ದರಿಂದ ವ್ಯಾಖ್ಯಾಸ್ಯಾಮಃ ಎಂಬ ಶಬ್ದ ಪ್ರಯೋಗವು ಇಂತಹ ಸಂದರ್ಭದಲ್ಲಿ ರೂಢಿಯಲ್ಲಿ ಇರುವುದರಿಂದ ಶಬ್ದವು ಏಕವಚನವೇ ಅಥವ ಬಹುವಚನವೇ ಎಂದು ವಿಮರ್ಶಿಸಬೇಕಾಗಿಲ್ಲ. ಮತ್ತು ವ್ಯಾಖ್ಯಾಸ್ಯಾಮಃ ಎಂದು ನಿರ್ದೇಶಮಾಡಬೇಕೆಂಬ ವಿಧಿಯೂ ಕೂಡ ಇರುವುದೆಂದು ಶ್ರುತಿಯಿಂದ ನಿರ್ಣೀತವಾಗಿರುವುದು. ವ್ಯಾಖ್ಯಾಸ್ಯಾಮಃ ಎಂಬ ಬಹುವಚನ ಪ್ರಯೋಗವು ಎಲ್ಲಾ ದೃಷ್ಟಿಗಳಿಂದ ಸಾಧುವಾಗಿಯೇ ಇದೆ.

**ಯತ ಏವಮಭಿಸಂಧತ್ತೇ ಶ್ರುತಿಃ 'ನ ಸಹಸೈವ ಪೃಚ್ಛಂತಂ ವಿಧೇಯಂ ಬೋಧಯೇತ್ । ಅಪಿ ತರ್ಹಿ ಅತೀತ್ಯಾ ನೇಹಸಂ ತಂ ತಂ ಯಾವತಾ ಸ್ಯಾರ್ಹಂತೀ ಅವಧ್ರಿಯೇತೇತಿ' । ಸರ್ವಥಾಪಿ ಪೃಚ್ಛಂತಂ ಶಿಷ್ಯಂ ನ ತಸ್ಮಿನ್ನಿವಸೇ ಉಪದಿಶೇತ್ ಯತೋಽನದ್ಯತನ ಭವಿಷ್ಯತಿ ಲೃಟ್ ವಿಹಿತ ಇತಿ । ಸ್ಮೃತೇಶ್ಚ । ಸ್ಮರನ್ತಿ ಹಿ ವಾಸಿಷ್ಠರಾಮಾಯಣೇ ಶುಕಮುಪಸನ್ನಂ ಶಾಸ್ತಿ ಸ್ಮ ಜನಕೋಽತೀತ್ಯಾನೇಹಸಮನೇಕ ಮಿತಿ । ಅವಗತಾಃ ಶಿಷ್ಯತಾಮುವಚ್ಛಿಂದಂತೋ ಭವನ್ತಃ । ಕೇತ್ಪುನಃ ಶಾಸ್ತೃತಾಮುವ ಚ್ಛಿಂದನ್ತಿ? ತಾನಾಚಕ್ಷ್ವೇ ।**

ಶಿಷ್ಯನು ಗುರುವನ್ನು ಉಪದೇಶಮಾಡಬೇಕೆಂದು ಪ್ರಾರ್ಥಿಸಿದಾಗ ಶ್ರುತಿಯು ಇಂತು ಪರೀಕ್ಷಿಸಬೇಕೆಂದು ಶಾಸಿಸುತ್ತದೆ–'ಶಿಷ್ಯನಾದವನು ಕೋರಿದ ಕೂಡಲೇ ಗುರುವು ಉಪದೇಶವನ್ನು ಮಾಡಬಾರದು. ಈ ಮೊದಲು ಉಪದೇಶಿಸಿರುವುದನ್ನು ಶಿಷ್ಯನು ಸರಿಯಾಗಿ ಧಾರಣೆ ಮಾಡಿಕೊಂಡಿದಾನೆಯೇ ಇಲ್ಲವೇ ಅಥವ ಶಿಷ್ಯನಿಗೆ ಉಪದೇಶದ ವಿಷಯವನ್ನು ಅರಿತು ಧಾರಣೆ

ಮಾಡುವ ಯೋಗ್ಯತೆ ಇದಯೇ ಇಲ್ಲವೇ ಎಂಬುದನ್ನು ತಿಳಿದ ನಂತರ ಉಪದೇಶವನ್ನು ಮಾಡಬೇಕು. ಒಂದು ವೇಳೆ ಶಿಷ್ಯನಿಗೆ ■ ರೀತಿಯ ಯೋ.್ಯತೆ ಇಲ್ಲದಿದ್ದಲ್ಲಿ ಅವನಿಗೆ ■ ಯೋಗ್ಯತೆ ಮಾತ್ತು ಧಾರಣಾ ಸಾಮರ್ಥ್ಯವು ಬರುವ ತನಕ ಕಾದಿದ್ದು ನಂತರವೇ ಉಪದೇಶಿಸಬೇಕು'. ಆದ್ದರಿಂದ ಬಯಸಿದೊಡನೆಯೇ ಶಿಷ್ಯನಿಗೆ ಉಪದೇಶ ಮಾಡುವುದು ಸರಿಯಲ್ಲ. ಇದನ್ನು ಅನುಸರಿಸಿಯೇ ಲೃಟ್ ಪ್ರಯೋಗವು ಅನದ್ಯತನ ಭವಿಷ್ಯತ್ಕಾಲದ ಬೋಧಕ ಎಂದು ಹೇಳಿರುವುದು. ವ್ಯಾಖ್ಯಾಸ್ಯಾಮಃ ಎಂಬುದು ಲೃಟ್ ಪ್ರಯೋಗವಾಗಿರುತ್ತದೆ ಎಂದು ಸ್ಮೃತಿಯೂ ಕೂಡ ಬೋಧಿಸುತ್ತದೆ. ವಾಸಿಷ್ಠ ರಾಮಾಯಣದಲ್ಲಿ ಶುಕಮುನಿಯು ಉಪದೇಶಕ್ಕಾಗಿ ಜನಕರಾಜನ ಸಮಿಪಕ್ಕೆ ಬಂದು ಪ್ರಾರ್ಥಿಸಿದಾಗ 'ಅನೇಕ ಮನೇಹ ಸಮತೀತ್ಯ' ಎಂದು ಉಕ್ತವಾಗಿದೆ. ಅನೇಕಂ ಬಹಳವಾದ, ಅನೇಹಸಂ= ಕಾಲವನ್ನು, ಅತೀತ್ಯ= ಕಳೆದ ನಂತರ ಎಂದು ಈ ವಾಕ್ಯದ ಅರ್ಥವಾಗುತ್ತದೆ. ಅಷ್ಟಾದಶ ಪುರಾಣಗಳು, ಮಹಾಭಾರತ, ಬ್ರಹ್ಮ ಸೂತ್ರ ಮೊದಲಾದ ಗ್ರಂಥಗಳನ್ನು ಬರೆದು ವೇದಗಳನ್ನು ವಿಭಾಗ ಮಾಡಿ ಪ್ರಸಿದ್ಧನಾದ ವ್ಯಾಸ ಮಹರ್ಷಿಯ ಸಾಕ್ಷಾತ್ಪುತ್ರನಾದ ಶುಕನಿಗೂ ಕೂಡ ಬಹಳ ಕಾಲದವರೆವಿಗೂ ಪರೀಕ್ಷಿಸಿದ ನಂತರವೇ 'ನಿನಗೆ ಉಪದೇಶ ಮಾಡುತ್ತೇನೆ' ಎಂದು ಜನಕರಾಜನು ಹೇಳಿರುವನು. ಶಿಷ್ಯನು ಗ್ರಹಣ ಮತ್ತು ಧಾರಣ ಶಕ್ತಿ ಸಂಪನ್ನನಾಗಿರಬೇಕು. ವಿಧೇಯನಾಗಿ ತತ್ತ್ವೋಪದೇಶವನ್ನು ಹೊಂದುವುದಕ್ಕಾಗಿ ಗುರು ಸೇವೆಯನ್ನು ಮಾಡಬೇಕೆಂದು ಶಿಷ್ಯಧರ್ಮದಲ್ಲಿ ಉಕ್ತವಾಗಿದೆ.

**ಸಕಲ ನಿಗಮಾಗಮ ಸಾರ ಪಾರಗಂ ಪರಿಪಕ್ವ ಭಾವ ಭರಮಾಚಾರ್ಯಂ ಪ್ರಣಮ್ಯ ಛಾತ್ರಃ ಪರಿಪೃಚ್ಛತಿ । ೨**

**ಶ್ರುತಿಃ 'ಸಕಲ ನಿಗಮ ಆಗಮ ಪಾರಗಂ ಪರಿಪಕ್ವ ಭಾವ ಭರಂ ಆಚಾರ್ಯ' ಮಿತಿ। ಋಗ್ವೇದಾದ್ಯಾ ನಿಗಮಾಃ। ಕಾಮಿ**

**ಕಾದ್ಯಾ ಆಗಮಾಃ। ನನು ಸರ್ವಜ್ಞ ಏವೇಯತೋ ಜಾನೀಯನ್ನ ಮನುಷ್ಯಃ ಸಾಮಾನ್ಯಃ। ನೇತಿ ಬ್ರೂಮಃ। ಯಃ [redacted] ದೇವ ಭಾಜಂ ಗುರುಂ ಭಜತೇ ತಸ್ಯ ಪುರುಷ ದೌರೇಯಸ್ಯ ಅಕಥಿತಾರ್ಥಾ ನಾಮಪಿ ಪ್ರಕಾಶಂ ಯತೋಽವಗಚ್ಛಾಮ ಇತಿ।**

"ಸಕಲ ನಿಗಮ ಆಗಮ ಪಾರಗಂ ಪರಿಪಕ್ವ ಭಾವ ಭರಂ ಆಚಾರ್ಯಂ" ಎಂಬ ಶ್ರುತಿವಾಕ್ಯವು ಗುರುಲಕ್ಷಣವನ್ನು ಸೂಚಿಸುವುದು. ಗುರುವಾದವನು ಸಕಲ ವೇದಗಳನ್ನೂ ಸಕಲ ಆಗಮಗಳನ್ನೂ ತಿಳಿದಿರಬೇಕು. ಶಾಸ್ತ್ರ ಮನನ ದಿಂದ ಅವನ ಮನಸ್ಸು ಪರಿಪಕ್ವ ಭಾವವನ್ನು ಹೊಂದಿರಬೇಕು. ಇಂತಹ ಆಚಾರ್ಯನು ಉಪದೇಶ ಮಾಡಲು ಯೋಗ್ಯನು. ಇಲ್ಲಿ ನಿಗಮ ಪದ ಪ್ರಯೋಗ ದಿಂದ ಋಗ್ವೇದ ಮೊದಲಾದ ವೇದಗಳೂ, ಆಗಮ ಪದದಿಂದ ಕಾಮಿಕ ಮುಂತಾದ ಆಗಮಗಳೂ ಗುರುವಿಗೆ ತಿಳಿದಿರಬೇಕೆಂದು ಅರ್ಥವಾಗುತ್ತದೆ ಸಾಮಾನ್ಯ ಮನುಷ್ಯನಾದವನಿಗೆ ಎಲ್ಲವನ್ನೂ ತಿಳಿಯುವ ಸಾಮರ್ಥ್ಯವು ಇರುವು ದಿಲ್ಲ. ಸರ್ವಜ್ಞನಾದವನು ಮಾತ್ರವೇ ಎಲ್ಲವನ್ನೂ ತಿಳಿಯಬಲ್ಲನು ಎಂದು ಹೇಳಬಹುದು. ಆದರೆ ದೇವತಾನುಗ್ರಹವನ್ನು ಸಂಪಾದಿಸಿರುವ ಗುರುವನ್ನು ಸೇವಿಸಿ ಅವನ ಅನುಗ್ರಹವನ್ನು ಪಡೆದ ಉತ್ತಮನಾದ ಮನುಷ್ಯನಿಗೆ ತಾನು ಉಪದೇಶದಿಂದ ಕಲಿತ ವಿಷಯಗಳಿಗಿಂತಲೂ ಅತಿಶಯವಾಗಿ ತತ್ತ್ವಗಳು ಚೆನ್ನಾಗಿ ಸ್ಫುರಿಸುತ್ತವೆ ಎಂದು ಶಿಷ್ಯರಾದವರು ಅಂಗೀಕರಿಸುತ್ತಾರೆ. 'ಯಸ್ಯ ದೇವೇ ಪರಾಭಕ್ತಿಃ....' ಎಂಬ ವಚನವು ದೇವತೆಗಳಲ್ಲಿಯೂ, ಗುರುವಿ ನಲ್ಲಿಯೂ ನಿಶ್ಚಲನಾದ ಭಕ್ತಿಯುಳ್ಳ ಮಹಾತ್ಮನಿಗೆ ತತ್ತ್ವಗಳು ಉಪದೇಶ ಹೊಂದಿರುವುದಕ್ಕಿಂತಲೂ ಅಧಿಕವಾಗಿ ಸ್ಫುರಿಸುವುವು ಎಂದು ಬೋಧಿಸುವುದು. ಆದುದರಿಂದ ಸರ್ವಜ್ಞನು ಮಾತ್ರವೇ ತತ್ತ್ವವೆಲ್ಲವನ್ನೂ ತಿಳಿದಿರುವನು ಇತರರಿಗೆ ಆ ಸಾಮರ್ಥ್ಯವಿಲ್ಲ ಎಂಬ ಮಾತು ಅನ್ವಯವಾಗುವುದಿಲ್ಲ.

**ಯತ [redacted] 'ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ। ತಸ್ಯೈತೇಽಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನ' ಇತಿ। ಅತ್ರಾತ್ಮ ಶಬ್ದ ವಾಚಸ್ಯ ಮನಸೋ ಮಹತ್ತ್ವಂ ಪರಿಪಕ್ವ ಭಾವ**

**ಭರತ್ವಂ । ದಂಭಾಹಂಕಾರಾದಿ ಮಲಾನಾಂ ಗಂಧೇ ನಾಪ್ಯನಾಘ್ರಾತ ಚಿತ್ತವೃತ್ತಿ ಸಮುದಾಯ ಇತಿ ತದರ್ಥಃ । ಇಹ [illegible] ಪರಿಪಕ್ವ ಭಾವ ಭರಃ ಕೀರ್ತ್ಯಮಾನಃ ತಾನಪ್ಯರ್ಥಾನ್ ಗಮಯತಿ ಯೈರ್ವಿನಾ ಸಾವನು ಪಪನ್ನಃ ಸ್ಯಾತ್ । ಕೇ ಪುನಸ್ತೇಽರ್ಥಾಃ? ತಾನಾಹುಃ ಶ್ರುತಿ ಮರ್ಮವಿದಃ—“ಸದ್ವಿಪ್ರ ಕುಲೀನೋ ಭಾವ ಶುದ್ಧಃ ಸ್ಯಾತ್ ಯತಃ ಕುಲೀ ನೈರ್ಜನ ಕಾದಿ ಭಿರ್ವೈದಿಕೈಃ ಕರ್ಮಭಿಃ ಸಂಸ್ಕ್ರಿಯೇತ, ಯೇನ ವೇದ ವಾ ಆಗಮಾ ವಾ ಸಾಂಥಧ್ವೀಯೇರನ್ ತದನು ತತ್ತ್ವ ಮವಿಶೇಷಾಮವ ಬುಧ್ಯೇತ, ವಾರ್ಣ್ಣೋ ವಾಶ್ರಮೀಯೋ ವಾಚಾರೋ ಮಿಕಲ ಮನುತಿಷ್ಠೇತ । ಯನ್ನಿ ಬಂಧನಮೋನ್ಯೈಷ ದಕ್ಷಸ್ತಪಸ್ವೀ ಆಸ್ತಿಕ ಮೂರ್ಧನ್ಯಃ ಪ್ರಥೇತ । ಯಥಶ್ಚಾಸ್ಯ ಪುರುಷ ಧೌರೇಯಸ್ಯ ಸರ್ವೇ ಮಾನಸ ಭಾವಾಃ ಪರಿಪಚ್ಯೇರನ್ನಿತಿ’ । ಆಚಾರ್ಯ ಮಿತಿ ಕಃ ಪದಾರ್ಥಃ ? [illegible]ತ್ರ್ಯರ್ಥಂ ಸಂಗೃಹ್ಯ ಸುಗಮತಯಾ ಬೋಧಕ ಆಚಾರ ದೇಶಿಕ ಆಚರಿತಾ ಚ [illegible]ತ್ಪದಾರ್ಥಃ ।**

ಯಸ್ಯದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।
ತಸ್ಯೈತೇಽಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥

—ಎಂಬ ಶ್ಲೋಕದಲ್ಲಿ **ಮಹಾತ್ಮನಃ** ಎಂಬ ಶಬ್ದವು ಇದೆ. ಇಲ್ಲಿ ಆತ್ಮ ಶಬ್ದಕ್ಕೆ ಮನಸ್ಸು ಎಂದು ಅರ್ಥವನು ಹೇಳಬೇಕು. ಈ ಮನಸ್ಸಿನ ಮಹತ್ವವು ಪರಿಪಕ್ವ ಭಾವ ಭರತ್ವದಿಂದ ಉಂಟಾಗಿರುವುದು. ಮನಸ್ಸಿಗೆ ದಂಭ, ಅಹಂಕಾರ ಮೊದಲಾದ ದೋಷಗಳು ಸ್ವಲ್ಪವೂ ಇಲ್ಲದಿರುವಾಗ ಪರಿಪಕ್ವ ಭಾವ ಭರತ್ವದಿಂದ ಉಂಟಾಗುವುದು ಎಂದರೆ ದಂಭ ಅಹಂಕಾರ ಇತ್ಯಾದಿ ಚಿತ್ತ ದೋಷಗಳಿಲ್ಲದೆ ಪರಿಶುದ್ಧವಾದ ಭಾವವನ್ನು ಹೊಂದಿರುವನು ಎಂದು ತಿಳಿಯಬೇಕು. ದಂಬಾಹಂಕಾರವೇ ಮೊದಲಾದ ಚಿತ್ತದೋಷಗಳು ನಾಶವಾಗಿ ಪರಿಶುದ್ಧವಾದ ಮನಸ್ಸನ್ನು ಹೊಂದಿರುವ ಸ್ಥಿತಿಯು ಉಂಟಾಗಲು ಸತ್ಕುಲದಲ್ಲಿ ಹುಟ್ಟಿರುವುದು ಅವಶ್ಯಕವಾಗಿರಬೇಕು. ಇವೆಲ್ಲವೂ ಇರುವಾಗ ಭಾವಶುದ್ಧಿಯು ಉಂಟಾಗುವುದೆಂದು ಶ್ರುತಿ ತತ್ತ್ವಗಳನ್ನು ತಿಳಿದವರು ಹೇಳುತ್ತಾರೆ.

ಪರಿಪಕ್ವ ಭಾವ ಭರಃ ಎಂಬ ವಿಶೇಷಣವು ಉಪಲಕ್ಷಣವಾಗಿ ಧರ್ಮಾಂತರ ಸ್ಥಿತಿಯು ಆವಶ್ಯಕವೆಂದು ಬೋಧಿಸುತ್ತದೆ. ಉತ್ತಮವಾದ ವಂಶದಲ್ಲಿ ಹುಟ್ಟಿದವನಿಗೆ ಭಾವ ಶುದ್ಧಿಯು ಉಂಟಾಗುತ್ತದೆ. ಭಾವಶುದ್ಧಿಯು ಉಂಟಾಗಲು ಅಂತಹ ಸತ್ಕುಲಪ್ರಸೂತನಿಗೆ ಅವನ ತಂದೆಯೋ ಮೊದಲಾದವರು ವೈದಿಕ ಕರ್ಮವಿಧಿಗಳಿಂದ ಜಾತಕರ್ಮ ಮುಂತಾದ ಷೋಡಶ ಸಂಸ್ಕಾರಗಳನ್ನು ಮಾಡುವರು. ವೇದಗಳನ್ನೂ, ಆಗಮಗಳನ್ನೂ ಉಪದೇಶಿಸಿ ಪಠಣ ಮಾಡಿಸುತ್ತಾರೆ. ವೇದಶಾಸ್ತ್ರಾಧ್ಯಯನದಿಂದ ತತ್ತ್ವಗಳು ಚೆನ್ನಾಗಿ ತಿಳಿಯುವುದು. ಸತ್ಕುಲದಲ್ಲಿಹುಟ್ಟಿ ಜಾತಕರ್ಮಾದಿ ಸಂಸ್ಕಾರಗಳನ್ನು ಹೊಂದಿ, ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿ ತತ್ತ್ವಗಳನ್ನು ತಿಳಿದುಗೊಂಡವನು ತನ್ನ ವರ್ಣಾ-ಶ್ರಮ ಧರ್ಮಗಳನ್ನು ಯಾವ ವಿಧವಾದ ನ್ಯೂನತೆಯೂ ಇಲ್ಲದಂತೆ ಆಚರಿಸುವುದರಿಂದ ದಕ್ಷನೂ, ತಪಸ್ವಿಯೂ, ಆಸ್ತಿಕರಲ್ಲಿ ಶ್ರೇಷ್ಠನೂ ಎಂದು ಪ್ರಸಿದ್ಧಿ ಹೊಂದುವನು. ಇಂತಹ ಪುರುಷ ಶ್ರೇಷ್ಠನ ಮನಸ್ಸಿನಲ್ಲಿ ಇರುವ ಅಭಿಪ್ರಾಯಗಳೆಲ್ಲವೂ ಪರಿಶುದ್ಧವಾಗಿರುವುದು ಎಂಬ ಈ ಅರ್ಥವೆಲ್ಲವೂ 'ಪರಿಪಕ್ವ ಭಾವ ಭರಃ' ಎಂಬ ವಿಶೇಷಣದಿಂದ ಬೋಧಿತವಾಗುತ್ತದೆ. ಶಾಸ್ತ್ರಾರ್ಥವನ್ನು ಸಂಗ್ರಹಮಾಡಿ ಶಿಷ್ಯನಿಗೆ ಚೆನ್ನಾಗಿ ತಿಳಿಯುವಂತೆ ಬೋಧಿಸುವವನು ಮತ್ತು ತಾನೂ ಕೂಡ ಶಾಸ್ತ್ರ ನಿಯಮಗಳನ್ನು ಆಚರಿಸುವವನು ಆಚಾರ್ಯ ಎಂದು ಕರೆಯಲ್ಪಡುತ್ತಾನೆ.

**ಭಗವನ್ ಮೇ ಮಹಾಶಿಲ್ಪ ತತ್ತ್ವರಹಸ್ಯಂ ಬ್ರೂಹೀತಿ । ೩**

**ನಾಪೃಷ್ಟಃ ಕಸ್ಯಚಿದ್ಬ್ರೂಯಾದಿತಿ ನಿಷೇಧ ಪರಿಪಾಲನಾಯ ಪ್ರಶ್ನ ಪ್ರಕಾರಂ ದರ್ಶಯತಿ ಭಗವನ್ನಿತ್ಯಾದಿನಾ – "ಉತ್ಪತ್ತಿಂ ಚ ವಿನಾಶಂ ಚ ಭೂತಾ ನಾಮಾಗತಿಂ ಗತಿಂ । ವೇತ್ತಿ ವಿದ್ಯಾಮ ವಿದ್ಯಾಂ**

**ಚ ಸ ವಾಚ್ಯೋ ಭಗವಾನಿತಿ' ಇತಿ ವಚನ ಪ್ರಮಿತಃ ಭಗ-ವತ್ಪದಾರ್ಥಃ । ಶಿಲ್ಪ ವಿದ್ಯಾ ರಹಸ್ಯ ತತ್ತ್ವಮಿತಿ । ನಿರ್ದಿಷ್ಟಾರ್ಥಕಂ ಶಿಲ್ಪಂ । [redacted] ಏವಾಸ್ಯ ಮಹತ್ತ್ವಂ । ತತ್ತತ್ತ್ವಂ ಚ ಆಪತತೋ ಭಾಸಮಾನಾರ್ಥಾನಪೇಕ್ಷ್ಯ ಸಾರಾಂಶ ರೂಪಃ ತಸ್ಯ ರಹಸ್ಯಂ । ಕಂ ಪುನರರ್ಥಮೇಷ ರಹಸ್ಯ ಶಬ್ದೋಽಭಿಧತ್ತೇ । ಶಾಸ್ತ್ರೈಕಶಕ್ಯ ನಿಬಂಧನಃ ಗುರು ಮುಖೈಕ ಸಮಧಿಗಮ್ಯಶ್ಚ ಯೋಽರ್ಥಸ್ತಮಿತಿ ಬ್ರೂಮಃ । ಅತ ಏವ ಬ್ರೂಹೀತ್ಯಾಚಷ್ಟೇ ನ ಲಿಖೇತಿ ।**

ತತ್ತ್ವವನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆ ಇಲ್ಲದೆ ತತ್ತ್ವೋಪದೇಶ ವನ್ನು ಮಾಡಬೇಕೆಂದು ಗುರುವನ್ನು ಪ್ರಾರ್ಥಿಸದೆ ಇರುವ ಯಾವ ಮನುಷ್ಯ ನಿಗೂ ತತ್ತ್ವೋಪದೇಶವನ್ನು ಮಾಡಬಾರದು ಎಂದು ಶಾಸ್ತ್ರವು ಬೋಧಿಸು ವುದು. ಇದನ್ನು ಅನುಸರಿಸಿಯೇ 'ಭಗವನ್ ಮೇ ಮಹಾಶಿಲ್ಪತತ್ತ್ವ ರಹಸ್ಯಂ ಬ್ರೂಹಿ' ಎಂಬ ಪ್ರಶ್ನೆಯು ಕೇಳಲ್ಪಟ್ಟಿರುತ್ತದೆ. ಶಿಷ್ಯನು ಈ ರೀತಿ ಪ್ರಾರ್ಥಿ ಸಿದ ನಂತರ ಗುರುವು ಅವನಿಗೆ ತತ್ತ್ವೋಪದೇಶವನ್ನು ಮಾಡಬೇಕೆಂದು ಇಲ್ಲಿ ನಿರ್ದೇಶಿತವಾಗಿದೆ. ಪ್ರಾಣಿಗಳ ಜನನ ಮರಣಗಳನ್ನು, ಗಮನಾಗಮನಗಳನ್ನು ವಿದ್ಯೆ-ಅವಿದ್ಯೆಗಳ ಸ್ವರೂಪವನ್ನು, ಜ್ಞಾನ ಅಜ್ಞಾನಗಳನ್ನು ತಿಳಿಯುವವನು ಭಗವಂತನೆನಿಸುತ್ತಾನೆ. ಆದುದರಿಂದ ಇಲ್ಲಿ ಶಿಷ್ಯನು ಗುರುವನ್ನು 'ಭಗವಾನ್' ಎಂದೇ ಸಂಭೋದಿಸಿದ್ದಾನೆ.

ಶಿಲ್ಪ ಎಂಬ ಪದದ ಅರ್ಥವು ಅತಿಶಯವಾಗಿರುವುದರಿಂದಲೇ ಮಹಾ ಶಿಲ್ಪವೆಂದು ಹೇಳಿರುವುದು. ಶಿಲ್ಪಶಾಸ್ತ್ರಗಳಲ್ಲಿ ಬೋಧಿಸಿರುವ ವಿಷಯ ಗಳನ್ನು ಚೆನ್ನಾಗಿ ವಿಮರ್ಶಿಸಿ ತಿಳಿದುಕೊಳ್ಳದೆ ಮೇಲೆ ತೋರುವ ಅರ್ಥವನ್ನೇ ಗ್ರಹಿಸಿದಲ್ಲಿ ಅದು ಸಾರಾಂಶವಾಗುವುದಿಲ್ಲ. ಆದುದರಿಂದ ಶಾಸ್ತ್ರಗತ ವಿಷಯ ಗಳನ್ನು ಚೆನ್ನಾಗಿ ವಿಮರ್ಶೆಮಾಡಿ ಅದರ ಮುಖ್ಯಾರ್ಥವನ್ನೂ ಉದ್ದೇಶವನ್ನೂ ತಿಳಿದುಕೊಳ್ಳುವುದೇ ಸಾರಾಂಶವೆನಿಸುವುದು. ಇದರ ರಹಸ್ಯವನ್ನು ಕೇವಲ ಶಾಸ್ತ್ರ ಪ್ರವಚನದಿಂದ ತಿಳಿಯಲು ಸಾಧ್ಯವಿದೆ. ಗುರುಮುಖದಿಂದ ಉಪದೇಶ ರೂಪವಾಗಿ ಬೋಧಿಸಲ್ಪಡುವುದರಿಂದ ಮಾತ್ರವೇ ಶಿಲ್ಪ ರಹಸ್ಯವನ್ನು

ತಿಳಿಯಲು ಸಾಧ್ಯವಾಗುತ್ತದೆ. ಆದುದರಿಂದ ಶಿಲ್ಪರಹಸ್ಯವನ್ನು ಬರೆಯ
ಬೇಕೆಂದು ಕೇಳದೆ ಉಪದೇಶ ಮಾಡಿ ಎಂದು ಪ್ರಾರ್ಥಿಸಲಾಗಿದೆ.

## ತಗ್ಂ ಸಹೋವಾಚ | ೪

ತಂ ಹೋವಾಚೇತಿ ಶ್ರುತಿ ವಚನಂ ಗುರೋಃ ಸಂತೋಷ
ಪ್ರಕಟನಾಯ, ಯನ್ನಿ ಬಂಧನಂ ಹಿ ವಿಶಿಷ್ಟಮರ್ಥ ಮುಪದಿಶೇತ್ ।
ನನ್ವಾಚಾರ್ಯಸಕಾಶಂ ಹಿತಕಾರಿಣಃ ಪಿತರೋ ಮಾಣವ
ಕಾನ್ನೀತ್ವಾರ್ಥಯಂತೇ 'ಇಮಾನ್ಮಾಣವಕಾನ್ ಶಿಷ್ಯಾನನು ಶಿಷ್ಯೇತಿ'
[illegible] ತಮರ್ಥಂ ಗ್ರಾಹಯಂತಃ । ತನ್ಮಾರ್ಥಂ ಆಚಾರ್ಯ ತಾನು
ವಚ್ಛಿಂದಂತೋ ನಿರ್ದಿಶ್ಯ ಮಾನಸ್ಯ ಪರಿಪಕ್ವ ಭಾವ ಭಾರಸ್ಯ । ಅರ್ಥ
ಇತಿ ಬ್ರೂಮಃ ಅನ್ಯಾಭಿಸಂಧೇಃ । ಕೋಽಸಾವಭಿ ಸಂಧಿಃ ?
ತಮನುಶಿಷ್ಯ – ನಾಸೌ ಶಿಷ್ಯಃ ಪಿತೃನೀತಃ ಅಪಿ ತರ್ಹಿ ಸ್ವಯಮು
ಪಸನ್ನಃ । ಕಿಂ ಪುನರುಪಸತ್ತಿ ಕಾರಣಂ ? ಪರಿಪಕ್ವ ಭಾವಭರವಿತ್ತಿಃ
ಇತಿ। ನನ್ವೀದೃಶೀವಿತ್ತಿಃ ಕತಮಸ್ಮಾ ಅರ್ಥಾಯಾವಕಲ್ಪತೇ? ನಾಯಂ
ಸಾಧಾರಣಃ ಶಿಷ್ಯಃ ಅಪಿ ತು ವಿವೇಚನ ಶಕ್ತಿ ಮಾನಿತಿ ವೇದನೀಯ
ಮಿತ್ಯೇವಂ ಜಾತೀಯ ಕಾಯಾರ್ಥಾಯೇತಿ ಬ್ರೂಮಃ । ಸ್ಫುಟಿತಂ
ಚೇದಂ ಛಾತ್ರ ಶಬ್ದೇನ ಶಿಷ್ಯ ನಿರ್ದೇಶಂತ್ಯಾಃ ಶ್ರುತೇಃ। ಛಾದನಾದ್ಧಿ
ಛಾತ್ರಃ ಸ್ಯಾತ್ । ಕಿಂ ತಚ್ಛಾದನೀಯಂ ? ದೋಷ ಜಾಲಂ।
[illegible] ಚವಿವಿಂಚತೋ ದೋಷ ಸಂವಿದ್ವಾ ಗುಣಸಂವಿದ್ವಾ ಪ್ರಥೇತ
ಅಪ್ರಾರ್ಥಿತೈ ತತ್ಸಂವಿಜ್ಞ ಪುರುಷೋ ನ ಹೇಯಚ್ಛಾದನಾಯೋಪಾ-
ದೇಯ ಪ್ರಕಟನಾಯ ವೇಶೀತ, ತದಿಹ ಛಾದನಮವಗಮ್ಯಮಾನಂ
ಸ್ವವ್ಯಾಪಿಕಾಂ ತದ್ವಯ ಸಂವಿದ್ವಮಪಿ ಗಮಯತೀತಿ। ತತಶ್ಚ
ಸಿದ್ಧಂ 'ಈದೃಶೀ ಸಂವಿದಪಿ ಶಿಷ್ಯತಾಮವಚ್ಛಿನತ್ತೀತಿ' ನ ಚೈಷಾ
ಸಂವಿದ ಶುದ್ಧ ಭಾವಸ್ಯೋದಿಯಾತ್, ನ ಚಾತೀತ್ಯ ಸಂಸ್ಕೃತಿಂ

**ವೈದಿಕೀಂ ಭಾವಾಃ ಶುಧ್ಯನ್ತಿ । ತದನಯಾ ಪ್ರಣಾಲ್ಯಾ ಏವಂಜಾತೀಯಕಾ ಅಪ್ಯರ್ಥಾಃ ಶಿಷ್ಯತಾಮುಪಚ್ಛಿಂದಂತು ಇತೀ ಬೋಧನೇ ವಿಶೇಷತೋ ನಿರ್ದಿಶನನ್ತ್ಯ ಉಪದಿಷದೋ ಹೃದಯಂ ।**

'ತಗ್ಂ ಹೋವಾಚ' ಎಂಬುದು ಗುರುವು ಹೇಳುವ ಉತ್ತರ. ಇದರಿಂದ ಗುರುವಿನ ಸಂತೋಷವು ವ್ಯಕ್ತವಾಗುತ್ತದೆ. ಈ ಪ್ರಕಾರವಾಗಿ ಸಂತೋಷದಿಂದ ಇರುವ ಗುರುವು ಶಿಷ್ಯನಿಗೆ ಶಿಲ್ಪ ರಹಸ್ಯವನ್ನು ಚೆನ್ನಾಗಿ ಉಪದೇಶ ಮಾಡುವನೆಂದು ತಿಳಿಯಬೇಕು.

ಲೋಕದಲ್ಲಿ ಪುತ್ರವಂತರಾದವರು ತಮ್ಮ ಬಾಲಕರನ್ನು ಗುರುವಿನ ಸಮೀಪಕ್ಕೆ ಕರೆದುಕೊಂಡು ಬಂದು ಇವರನ್ನು ಶಿಷ್ಯರನ್ನಾಗಿ ಸ್ವೀಕರಿಸಿ ಎಂದು ಗುರುಗಳನ್ನು ಪ್ರಾರ್ಥಿಸುವರು ಮತ್ತು ಸಂದರ್ಭೋಚಿತವಾದ ಸಂಭಾಷಣಾದಿಗಳಿಂದ ತಮ್ಮ ಮನೋಕಾಮನೆಗಳನ್ನು ತಿಳಿಸುವರು. ಮನವು ಪರಿಪಕ್ವ ಪ್ರಭಾವವನ್ನು ಹೊಂದಿ ಗುರುವೆಂದು ಕರೆಯಲ್ಪಡಲು ಅರ್ಹರಾದ ಪುರುಷ ಶ್ರೇಷ್ಠರಲ್ಲಿ [redacted] ವಿಧವಾದ ಪ್ರಾರ್ಥನೆಯಿಂದ ಶಿಷ್ಯರನ್ನು ಪರಿಗ್ರಹಿಸುವುದು ಫಲಕಾರಿಯಲ್ಲ. ಶಿಷ್ಯನಾಗುವವನು ತನ್ನ ತಂದೆ ಮತ್ತು ಇತರ ಹಿರಿಯರಿಂದ ಆಚಾರ್ಯನ ಸಮೀಪಕ್ಕೆ ಕರೆದುಕೊಂಡು ಬಂದಲ್ಲಿ ಅಂತಹ ಶಿಷ್ಯನು ಗುರುವಿನಿಂದ ಪ್ರಯೋಜನವನ್ನು ಹೊಂದಲಾರನು. ತತ್ತ್ವೋಪದೇಶದಲ್ಲಿ ಆಸಕ್ತಿ ಹುಟ್ಟಿ ತನಗೆ ತಾನೇ ಗುರುವನ್ನು ಸಮೀಪಿಸಿ ಪ್ರಾರ್ಥಿಸಿ ಶಿಷ್ಯನಾಗಲು ತಾನು ಅರ್ಹನೆಂಬುದನ್ನು ತಾನೇ ತೋರ್ಪಡಿಸಿಕೊಂಡವನಿಗೆ ಮಾತ್ರವೇ ಅರ್ಹತೆ ಇರುತ್ತದೆ. ತಾನಾಗಿ ಗುರು ದರ್ಶನವನ್ನು ಮಾಡಿದವನಿಗೆ ತತ್ತ್ವರಹಸ್ಯವನ್ನು ತಿಳಿದುಕೊಳ್ಳುವ ಅರ್ಹತೆಯೂ ಅದಕ್ಕನುಸಾರವಾಗಿ ಪರಿಶುದ್ಧತೆಯೂ ಇರುತ್ತದೆ. ಹೀಗಿರುವ ಶಿಷ್ಯನ ಮನಸ್ಸಿನ ಪರಿಶುದ್ಧತೆಯನ್ನು ತಿಳಿದು ಗುರುವು ಅವನನ್ನು ಶಿಷ್ಯನನ್ನಾಗಿ ಪರಿಗ್ರಹಿಸಬೇಕು ಮತ್ತು ಈ ಶಿಷ್ಯನು ಸಾಧಾರಣ ಶಿಷ್ಯನಲ್ಲವೆಂದೂ, ಮನಶುದ್ಧಿಯನ್ನು ಹೊಂದಿ ತತ್ತ್ವ ರಹಸ್ಯಗಳನ್ನು ಚೆನ್ನಾಗಿ

ವಿವೇಚನೆಯನ್ನು ಮಾಡುವ ಶಕ್ತಿಯು ಈ ಶಿಷ್ಯನಿಗೆ ಇರುವುದೆಂದು ಗುರುವು ಗುರುತಿಸಿದ ತರುವಾಯ ಅವನಿಗೆ ತತ್ತ್ವೋಪದೇಶವನ್ನು ಮಾಡಬೇಕು.

ಇಲ್ಲಿ ಶ್ರುತಿಯು ಶಿಷ್ಯನನ್ನು ಛಾತ್ರನೆಂದು ನಿರ್ದೇಶನ ಮಾಡಿರುವುದರಿಂದ ಅದರ ಅಭಿಪ್ರಾಯವು ಸ್ಪಷ್ಟವಾಗಿದೆ — ಛಾದನೆಯುಳ್ಳವನು ಛಾತ್ರನೆನಿಸುತ್ತಾನೆ. ಛಾದನೆ ಎಂದರೆ ಮುಚ್ಚಲ್ಪಟ್ಟಿರುವುದು, ಮರೆಯಾಗಿರುವುದು ಎಂದು ಅರ್ಥ. ಮುಚ್ಚಲ್ಪಟ್ಟಿರುವುದು ಏನು ಎಂದರೆ ದೋಷ ಸಮೂಹ. ಇದರ ಅರ್ಥ ದೋಷಗಳಿಂದ ದೂರನಾಗಿರುವವನು ಎಂದು. ದೋಷ ರಹಿತನಾದವನು ಛಾತ್ರನೆಂದಾಗ ಅವನಿಗೆ ಗುಣ ಜ್ಞಾನವಾಗಲಿ ದೋಷ ಜ್ಞಾನವಾಗಲಿ ಗುಣದೋಷಗಳ ವಿಮರ್ಶೆಯಿಂದ ಉಂಟಾಗದು. ಗುಣ–ದೋಷಗಳ ವಿವೇಚನೆ ಮಾಡುವ ಶಕ್ತಿಯುಳ್ಳವನು ದೋಷವನ್ನು ತ್ಯಾಗ ಮಾಡಿ ಗುಣವನ್ನು ಗ್ರಹಿಸುತ್ತಾನೆ. ಈ ಗುಣ ದೋಷಗಳ ಹೇಯೋಪಾದೇಯ ಪ್ರಕಾರವಾದ ಜ್ಞಾನವನ್ನು ಹೊಂದಿರುವವನು ದೋಷವನ್ನು ಛಾದನೆ ಮಾಡುವವನು ಎಂದರೆ ದೋಷಗಳನ್ನು ತ್ಯಜಿಸುವವನು. ಆದುದರಿಂದ ಹೇಯೋಪಾದೇಯುವೆಂಬ ಎರಡು ವಿಧವಾದ ಜ್ಞಾನಗಳು ಶಿಷ್ಯನಾದವನಿಗೆ ಮುಖ್ಯವಾಗಿ ಇರಬೇಕು ಎಂದು ಸಿದ್ಧವಾಯಿತು. ಈ ಪ್ರಕಾರವಾಗಿ ಗುಣದೋಷ ಜ್ಞಾನವನ್ನು ಹೊಂದಿ ಅವುಗಳಲ್ಲಿ ಹೇಯೋಪಾದೇಯ ಪ್ರಕಟನೆಯನ್ನು ವಿವೇಚನೆಯಿಂದ ಆಚರಿಸುವ ಜ್ಞಾನವು (ಸಾಮರ್ಥ್ಯವು) ಅಪರಿಶುದ್ಧವಾದ ಮನಸ್ಸಿಗೆ ಉಂಟಾಗುವುದಿಲ್ಲ. ಮನಸ್ಸಿನ ಪರಿಶುದ್ಧ ಭಾವವು ಉಂಟಾಗಲು ವೈದಿಕವಾದ ಸಂಸ್ಕಾರವು ಅವಶ್ಯಕವು. ವೈದಿಕ ಸಂಸ್ಕಾರದಿಂದ ಸಂಸ್ಕೃತನಾದವನಿಗೆ ಮನಸ್ಸಿನ ಪರಿಶುದ್ಧತೆಯು ಉಂಟಾಗುತ್ತದೆ. ಈ ಕ್ರಮವು ಶಿಷ್ಯರಾದವರೆಲ್ಲರಿಗೂ ತಪ್ಪದೆ ಇರಬೇಕು ಎಂದು ಬೋಧಿಸುವುದೇ ಈ ಉಪನಿಷತ್ತಿನ ಅಂತರಂಗದ ತಾತ್ಪರ್ಯ.

**ನನು 'ಯಾಜುಷಾಥರ್ವಣ ಶಿಲ್ಪ ವಿದ್ಯಾ ರಹಸ್ಯೋಪನಿಷತ್' ಇತಿ ಶೀರ್ಷ ನಿರ್ದೇಶೋಽಸಂಬಂದ್ಧಃ । ಕಿಂ ಕಾರಣಂ ? ಯದಿ ಯಾಜುಷೀನ ತರ್ಹಿ ಆಥರ್ವಣೀ, ಅಥಾಥರ್ವಣೀ ನ ತರ್ಹಿ ಯಾಜುಷೀತಿ । ನಾಸಂಬದ್ಧಃ । ಕಥಂ ಕೃತ್ವಾ ? ಯಾಜುಷ ತತ್ತ್ವ**

**ರಹಸ್ಯೋಪನಿಷದಿತಿ ಕೃತ್ವಾ । ತದಿದ ಮಾಹ ಶ್ರುತಿಃ । 'ಮಹಾಶಿಲ್ಪ ತತ್ತ್ವರಹಸ್ಯಂ' ಇತಿ ವೇದಿತುಂ ಶಿಲ್ಪರಹಸ್ಯಂ ಶಕ್ನೋತೀತಿ ಪ್ರವರ್ತ ಮಾನಾ । ಶಿಲ್ಪೇ ಮಹತ್ತ್ವಂ ತು ಉಪರಿಷ್ಟಾದ್ವಿವೃತಂ ಭವಿಷ್ಯತಿ । ತೇನ ಚ ರಹಸ್ಯೇನ ಗುರು ಸ್ತಮುಪಸನ್ನಂ ಶುಶ್ರೂಷಣಾದಿ ನಿರತಂ ಚ ಸಹಸಾ ಶಿಷ್ಯಂ ಶಿವಂ ಗಮಯತೀತಿ ಯುಕ್ತಮುಕ್ತಂ ಯಾಜುಷ ತತ್ತ್ವರಹಸ್ಯೋಪನಿಷದಿತಿ । ತದಿಹ ಯಾವದುಕ್ತಂ ಭವತಿ 'ಉಪಸನ್ನ ನ್ನಿರತಗಮಕ' ಮಿತಿ 'ತಾವದುಕ್ತಂ ಭವತಿ ಉಪನಿಷದಿತಿ'। ಯತ್ಕಾರಣಮುಪ್ಯಕ್ಷರ ಸಾಮ್ಯಾನ್ನಿರ್ವಕ್ತವ್ಯಮಿತಿ ಪ್ರಾಮಾಣಿಕಾ ನಾಮನುಶಾಸನಂ । ಯದೇತದ್ರಹಸ್ಯ ಮುಪಕ್ರಾನ್ತಂ ನೇದ ಮನವ ಹಿತ ಮನಸಾಧಿ ಗಮೇತೇತಿ ಸಹೇತುಕ ಮವಧಾನ ಮನುಶಾಸ್ತಿ ಗುರುಃ।**

ಈ ಉಪನಿಷತ್ತಿಗೆ ಯಾಜುಷಾಥರ್ವಣ ಮಹಾ ಶಿಲ್ಪ ವಿದ್ಯಾರಹಸ್ಯೋಪ ನಿಷತ್ತೆಂಬ ಹೆಸರು ಹೇಳಲಾಗಿದೆ. ಯಜುರ್ವೇದಕ್ಕೆ ಸಂಬಂಧಿಸಿದ್ದರೆ ಅಥರ್ವಣವೇದಕ್ಕೆ ಸಂಬಂಧಪಟ್ಟಿರುವುದಿಲ್ಲ. ಅಥರ್ವಣ ವೇದಕ್ಕೆ ಸಂಬಂಧಿಸಿ ದ್ದರೆ ಯಜುರ್ವೇದಕ್ಕೆ ಸಂಬಂಧಿಸಿರುವುದಿಲ್ಲ. ಯಾವ ಉಪನಿಷತ್ತಾದರೂ ಎರಡೂ ವೇದಗಳಲ್ಲಿ ಇರುವುದಿಲ್ಲ. ಆದುದರಿಂದ ಇದನ್ನು ಅಸಂಬದ್ಧವೆಂದು ಹೇಳುವುದು ಸಾಧ್ಯವಿದೆ. ಈ ಆಕ್ಷೇಪಣೆಗೆ ಇಂತು ಸಮಾಧಾನ ಹೇಳಬಹುದು. ಈ ಉಪನಿಷತ್ ಪ್ರತಿಪಾದ್ಯಕವಾದ ವಿಷಯವು ಯಜುರ್ವೇದದಲ್ಲಿ ಹೇಳಿರುವ ತತ್ತ್ವರಹಸ್ಯವಾಗಿರುವುದರಿಂದ ಯಾಜುಷ ತತ್ತ್ವರಹಸ್ಯೋಪನಿಷತ್ ಎಂಬ ನಾಮ ನಿರ್ದೇಶನವು ಪ್ರತಿಪಾದ್ಯನುಸಾರವಾಗಿರುತ್ತದೆ. ಪ್ರತಿಪಾದ್ಯವಾದ ಪ್ರಮೇಯವು ಯಜುರ್ವೇದದ ತತ್ತ್ವರಹಸ್ಯಗಳೇ ಆದರೂ ಅವು ಅಥರ್ವಣ ಕ್ರಿಯಾ ಸಂಬಂಧವಾಗಿರುವುದರಿಂದ ಯಜುರ್ವೇದ ಎಂಬ ಹೆಸರಿನ ಜತೆಯಲ್ಲಿ ಅಥರ್ವಣ ಎಂಬ ಪದವು ಸೇರಿರುವುದು ಅವಶ್ಯಕವಾಗಿದೆ. ಈ ಕಾರಣದಿಂದ ಉಪರೋಕ್ತ ಅಸಂಬದ್ಧತಾ ದೋಷವು ಪರಿಹಾರವಾಗುತ್ತದೆ.

ಮಹತ್ತಾದ ಶಿಲ್ಪ ತತ್ತ್ವಗಳ ರಹಸ್ಯವನ್ನು ತಿಳಿಯಲು ಅವಶ್ಯಕ ವಾಗಿರುವುದರಿಂದಲೂ, ಅವುಗಳನ್ನು ಈ ಉಪನಿಷತ್ತಿನಲ್ಲಿ ವಿವರಿಸಿರುವುದ ರಿಂದಲೂ ಇದು ಮಹಾಶಿಲ್ಪ ತತ್ತ್ವೋಪನಿಷತ್ತೆಂದು ನಿರ್ದಿಷ್ಟವಾಗಿರುತ್ತದೆ,

ಶಿಲ್ಪದಲ್ಲಿರುವ ಮಹತ್ತ್ವವು ಈ ಗ್ರಂಥದಲ್ಲಿ ಮುಂದೆ ವಿವರಿಸಲ್ಪಡುವುದು. ಮಹತ್ತ್ವದಿಂದ ಕೂಡಿದ ಶಿಲ್ಪ ರಹಸ್ಯಗಳನ್ನು ಗುರುವಾದವನು ತಾನಾಗಿ ಬಂದು ಶುಶ್ರೂಷೆ ಮಾಡುತ್ತಿರುವ ಶಿಷ್ಯನಿಗೆ ಬೋಧಿಸಿ ಅವನನ್ನು ಶಿವನ ಹಾಗೆ ಪೂಜ್ಯನನ್ನಾಗಿ ಮಾಡುವನು. ಹೀಗೆ ಶಿವಭಾವ ಪ್ರಾಪಕವಾದ ಶಿಲ್ಪ ರಹಸ್ಯಗಳನ್ನು ಬೋಧಿಸುವ ಈ ಉಪನಿಷತ್ತನ್ನು ಯಾಜುಷ ತತ್ತ್ವ ರಹಸ್ಯೋಪನಿಷತ್ತೆಂದು ನಾಮ ನಿರ್ದೇಶನ ಮಾಡಿರುವುದು ಯುಕ್ತವಾಗಿಯೇ ಇರುವುದು.

**ಉಪ = ಸಮೀಪೇ, ನಿತರಾಂ = ಸೀದತಿ** ಎಂದು ಉಪನಿಷತ್ ಪದದ ಅರ್ಥ. ಷದಲ್ ಧಾತುವಿಗೆ ವಿರಣ, ಗತಿ, ಅವಸಾದನವೆಂಬ ಅರ್ಥಗಳು ಪ್ರಸಿದ್ಧವಾಗಿರುತ್ತವೆ; ಅವುಗಳಲ್ಲಿ ಗತಿ ಎಂಬ ಅರ್ಥವನ್ನು ಮಾತ್ರವೇ ಇಲ್ಲಿ ಸ್ವೀಕರಿಸಬೇಕು. ಗತ್ಯರ್ಥವು-ಜ್ಞಾನಾರ್ಥಕವೆಂದು ಪ್ರಸಿದ್ಧವಾಗಿದೆ. ಭಗವದ್ಗೀತೆಯಲ್ಲಿ ಕೂಟಸ್ಥೋsಕ್ಷರ ಉಚ್ಯತೇ ಎಂದು ಹೇಳಿರುವಂತೆ ಕೂಟಸ್ಥನಾದ ಅಕ್ಷರ ಬ್ರಹ್ಮನ ಸ್ವರೂಪವನ್ನು ತಿಳಿಸುವ ಜ್ಞಾನಜನಕವಾದ ಇದನ್ನು ಉಪನಿಷತ್ತೆಂದು ಕರೆಯುತ್ತಾರೆ. ಪ್ರತ್ಯಕ್ಷಾದಿ ಪ್ರಮಾಣಗಳ ಮೂಲಕ ತತ್ತ್ವಗಳನ್ನು ನಿಶ್ಚಯಮಾಡುವ ತತ್ತ್ವಜ್ಞರು ಉಪನಿಷತ್ ಶಬ್ದದ ಅರ್ಥವು ಹೀಗೆ ಇರುವುದೆಂದು ವಿಸರವಾಗಿ ಹೇಳಿದ್ದಾರೆ. ಈ ಕಾರಣದಿಂದಲೇ ಈ ಭಾಷ್ಯದಲ್ಲಿ 'ಉಪಸನ್ನ ನಿರತಗಮಗಂ ಉಪನಿಷತ್' ಎಂದು ನಿರ್ದೇಶ ಮಾಡಿರುತ್ತದೆ.

ಶಿಲ್ಪ ತತ್ತ್ವರಹಸ್ಯವೆಂಬುದು ಏಕಾಗ್ರತೆಯಿಲ್ಲದಿರುವ ಮನಸ್ಸಿನಿಂದ ತಿಳಿಯಲು ಅಶಕ್ಯವಾಗಿರುತ್ತದೆ. ಗುರುವು ಈ ತತ್ತ್ವರಹಸ್ಯವನ್ನು ಸುಲಭವಾದ ರೀತಿಯಿಂದ ತಿಳಿಯುವುದಕ್ಕೆ ಸಾಧ್ಯವಾಗುವಂತೆ ಕಾರಣ ಸಹಿತವಾದ ಯುಕ್ತಿಗಳನ್ನು ಶಿಷ್ಯನಿಗೆ ಬೋಧಿಸಿ ಅವನಲ್ಲಿ ಚಿತ್ತೈಕಾಗ್ರತೆಯನ್ನು ಉಂಟು ಮಾಡುವನು.

**ಅಣೋರಣೀಯೋ ಮಹತೋ ಮಹೀಯೋsತೋ**

**ನ ವೇದಿ ತುಗ್ಂ ಶಿಲ್ಪ ರಹಸ್ಯಗ್ಂ ಶಕ್ನೋತಿ ।** ■

ಭವ ತಸ್ಮಾತ್ಸಾವಧಾನಃ | [redacted]

'ಅಣೋರಣೀಯೋ ಮಹತೋ ಮಹೀಯೋऽತೋ ನ ವೇದಿತುಂ ಶಿಲ್ಪರಹಸ್ಯಂ ಶಕ್ನೋಷಿ। ಭವ ತಸ್ಮಾತ್ಸವಧಾನ' ಇತಿ। ಅಯಮರ್ಥಃ। ಲಕ್ಷಣವಿಧಿ ಪೂರ್ವಗಂ ಶಿಲ್ಪಶಬ್ದೋऽಭಿದತ್ತೇ। ಯಸ್ಯ ಪುಸರಿಮೇ ಲಕ್ಷಿತಾ ಅರ್ಥಾಃ ವಿಹಿತಾಶ್ಚ ಸಿಧ್ಯನ್ತಿಸ ಸಮಾಧಿ ಮಶ್ನುವೀತ। ನ ಚಾನವಹಿತ ಮನಸ ಇಮೇ ಸಿಧ್ಯೇಯುಃ ಯತೋऽಣೋಃ ಸೂಕ್ಷ್ಮಾತ್ತತ್ತ್ವದರ್ಥಾದಪಿ ಸೂಕ್ಷ್ಮತರಮಿದಂ ರಹಸ್ಯಂ ಪರಿಮಾಣತೋ ಮಹತ್ತ್ವಾದಪಿ। ಯದ್ಯದ್ಧಿ ಸಾಂಖ್ಯ-ಯೋಗಾದಿ ಶಾಸ್ತ್ರಂ ಮಹತ್ಸಮತಂ ತತೋಽಪಿ ಮಹತ್ತರಮಿದಂ। ಸೃಷ್ಟ್ಯಾದಿ ಪ್ರಲಯಾಂತಾ ಹಿ ಕ್ರಿಯಾಃ ಶಿಲ್ಪಶಾಸ್ತ್ರಾವಸೇಯಾಃ। ತಾಶ್ಚ ಕೋಟಿ ಕೋಟ್ಯಾಂಡ [redacted] ವ್ಯಾಪ್ನುವನ್ತಿ । [redacted] ಸರ್ವಸ್ಮಾನ್ಮಹತೋ ಮಹತ್ತರಮಿದಂ ಶಿಲ್ಪಂ। ತಚ್ಚೈವಂ ಯದಾ ಸಿಧ್ಯತಿ ತದಾ ಸಮಾದಿ ಸ್ಯಾದಿತಿ ಸಮಾಧಿ ಸಾಧನಂ ಶಿಲ್ಪಮಿತಿ ರಹಸ್ಯಂ। ಶೀಲ ಸಮಾಧೌ ಇತಿ ಧಾತೋ ರೌಣದಿಕೇ ಸಾಧನಾರ್ಥೇ ಪಪ್ರತ್ಯಯೇ ಅಚೋ ಹ್ರಸ್ವತ್ವೇ ಚ ಶಿಲ್ಪ ಶಬ್ದನಿಷ್ಪತ್ತೇಃ। ಯೋऽಸೌ ಸಾಂಬಮೂರ್ತಿಃ ಶಿಲ್ಪವೇದ ಪ್ರಕಟಯಿತಾ ಅನುಸಂಹಿತಃ ಸ ಸ್ವರೂಪತ ಔಪಾಧಿಕಶ್ಚಾವಗಮತವ್ಯ [redacted] ತದುಭಯಂ ಶಾಸ್ತಿ

**ಶೀಲ ಸಮಾಧೌ** ಎಂಬ ಧಾತುವಿನಿಂದ ಶಿಲ್ಪ ಶಬ್ದದ ನಿಷ್ಪತ್ತಿಯಾಗಿದೆ. ಶೀಲಧಾತುವಿಗೆ ಸಾಧನಾರ್ಥದಲ್ಲಿ ಉಣಾದಿಗತವಾದ ಪ ಎಂಬ ಪ್ರತ್ಯಯವು ಒಂದು ಶೀಕಾರಗತವಾದ ದೀರ್ಘಸ್ವರವು ಹ್ರಸ್ವವಾಗಿ ಶಿಲ್ಪ ಎಂಬ ಶಬ್ದವು ಸಿದ್ಧವಾಯಿತು. ಸಮಾಧಿ ಸಾಧನವೆಂಬುದು **ಶೀಲ್ಯತೇ ಅನೇನೇತಿ ಶಿಲ್ಪಂ** ಎಂಬ ನಿರ್ವಚನದಿಂದ ನಿಶ್ಚಿತವಾಗಿರುತ್ತದೆ.

ಶಿಲ್ಪವೇದವನ್ನು ಪ್ರಕಟಗೊಳಿಸದ ಅಂಬಾಶಕ್ತಿ ಸಮಾಯುಕ್ತನಾದ ಪರಮೇಶ್ವರನ ಸ್ವರೂಪವು ನಿಜ ಸ್ವರೂಪ ಸಹಿತವಾಗಿಯೂ, ಔಪಾಧಿಕ

ವಾಗಿಯೂ ಇರುವುದರಿಂದ ಈ ಎರಡೂ ವಿಧವಾದ ಸ್ವರೂಪಗಳನ್ನು ತಿಳಿಯ ಬೇಕಾದುದು ಅವಶ್ಯಕವಾಗಿದೆ.

**ವಾಙ್ಮನೋ ಗೋಚರಾತೀತಾನನ್ತ ದಿವ್ಯ ತೇಜೋಮಯೋನಿತ್ಯೋ ನಿರ್ವಿಕಲ್ಪೋ ನಿರಂಜನೋ ನಿರಖ್ಯಾತೋಽತಿಶುದ್ಧೋ ದೇವ ಏಕಃ ಪರಬ್ರಹ್ಮಾ ವಿರಾಜತೇ | ೭**

ವಾಙ್ಮನೋ ಗೋಚರಾತೀತಾನನ್ತ ದಿವ್ಯ ತೇಜೋಮಯೋ.... ವಿರಾಜತೇ ಕಶ್ಚಿತ್ ಇತಿ । ಸ ನಿರಾಕಾರೋಽಪಿ.... ನೈಸರ್ಗಿಕೌ ವರ್ತೇತೇ ಇತಿ ಚ । 'ನೈನಂ [redacted] ವಕ್ತುಮಿಷ್ಟೋಽತಿ ನಿಪುಣೋಽ-ಪಿನ ವಾ ಮನಸಾ ಮಾನ್ತುಂ । ನೈವ'ಕ್ವೇಷ ನಾಶಮೇತಿ' ತ್ರಿತಯಂ ವ್ಯಾಖ್ಯಾತಂ । ನನು ಶಶವಿಷಾಣಾದಿಕ ಮಾದ್ಯುಕ್ತ್ರ ವಿಧಮಿತಿ ತತ್ಸಮಃ ಸಾಂಬಃ ಪ್ರಾಪ್ನೋತಿ । ನ ಪ್ರಾಪ್ನೋತಿ । ಕಿಂ ಕಾರಣಂ ? ದಿವ್ಯ ತೇಜೋಮಯೋಽ ಸಾವತಿ । ಅಯಮಭಿಸನ್ಧಿಃ । ಯೋಗಿನೋ ಧ್ಯಾಯನ್ತಿ ಪ್ರತ್ಯಕ್ಷಯನ್ತಿ ಚ [redacted] ತೇಜೋ ರೂಪಂ ನ ಚ ನಶ್ವರ ಪಾರ್ಥಿವ ರೂಪಮಿತಿ । ನನು ಧ್ಯಾಯಮಾನಃ ಪ್ರಕಾಶೇತ ನೋದಾಸೀನಾವಸ್ಥಾಯಾಂ ಅಪ್ರಕಾಶ ಮಾನಶ್ಚಾ ಸನ್ನಿತಿ । ನಶ್ವರಃ ಕ್ಷಣಿಕಃ [redacted] ಸಾಂಬ ಇತಿ ಪ್ರತ್ಯವಸ್ಥಾನಂ ಬೌದ್ಧಮತೀಯಂ ನಿರುಣದ್ಧಿ । ನಿತ್ಯ ಇತಿ । ಇದಮಾಕೂತಂ ಪ್ರತ್ಯಭಿಜ್ಞಯಂ ಹಿ ಅರ್ಥಾ ಅವಧ್ರಿಯನ್ತೇ ನೈವ ತು ಯೋಗಿನೋ ನಶ್ವರಂ ಕ್ಷಣಿಕಂ ಪ್ರತ್ಯಭಿ ಜಾನನ್ತಿ, ಅಪಿ ಸದೈಕ ರೂಪಂ ನ ಚೇಯತಾ ಮನೋ ಗೋಚರತಾಪಾತಃ ।

3]

ದಿವ್ಯ ತೇಜೋಮಯನೂ, ನಿತ್ಯನೂ ಎಂದರೆ ನಾಶರಹಿತನೂ ವಿಕಾರರಹಿತನೂ, ತ್ರಿಗುಣಾತೀತನೂ ನಾಮ ರೂಪ ವರ್ಜಿತನೂ, ಅತಿಶುದ್ಧ ಸ್ವಭಾವವುಳ್ಳವನೂ ಆದ ದೇವನೊಬ್ಬನಿರುವನು. ಈತನು ಪರಬ್ರಹ್ಮನೆಂದು ಪ್ರಸಿದ್ಧನಾಗಿ ಪ್ರಕಾಶಿಸುತ್ತಿರುವನು. ಈತನಿಗೆ ನಿರಾಕಾರಸಾಕಾರಗಳೆಂಬ ಎರಡು ವಿಧವಾದ ಸ್ವಭಾವವಿರುವುದು. ಈದೇವನ ಸ್ವರೂಪವು ಹೀಗೆಯೇ ಇರುವುದು ಎಂದು ನಿರ್ಣಯ ಮಾಡಿ ಶಬ್ದಗಳಿಂದ ವಿವರಿಸಲು ಯಾರಿಗೂ ಸಾಧ್ಯವಿಲ್ಲ. ಎಂತಹ ಮೇಧಾವಿಯಾದರೂ ಈ ದೇವನನ್ನು ಬುದ್ಧಿಯಿಂದಾಗಲ್ಲಿ ಮನಸ್ಸಿನಿಂದಾಗಲಿ ತಿಳಿಯುಲು ಸಾಧ್ಯವಿಲ್ಲ. ಈದೇವನು ಆದ್ಯಂತ ರಹಿತನಾಗಿರುವನು.

ಇವನಿಗೆ ನಾಶವೆಂಬುದಿಲ್ಲ. ಮೊಲಕ್ಕೆ ಕೊಂಬಿರುವುದೆಂದು ಹೇಳಲು ಹೇಗೆ ಸಾಧ್ಯವಿಲ್ಲವೋ ಹಾಗೆ ಈ ದೇವನ ಸ್ವರೂಪವನ್ನು ಶಬ್ದಗಳಿಂದ ವಿವರಿಸುವುದಕ್ಕಾಗಲಿ, ಮನಸ್ಸಿನಿಂದ ಊಹಿಸಿ ತಿಳಿಯುವುದಕ್ಕಾಗಲಿ ಸಾಧ್ಯವಿಲ್ಲ. ಅಲ್ಲದೆ ಈ ದೇವನಿಗೆ ನಾಶವಿಲ್ಲ. ಪೂರ್ವೋಕ್ತ ಗುಣಗಳೆಲ್ಲವೂ ಮೊಲದ ಕೋಬಿನಂತೆಯೇ ಅಪ್ರಸಿದ್ಧವಾಗಿರುವುದರಿಂದ ಈ ಗುಣಗಳುಳ್ಳ ಅಂಬಾ ಸಮೇತನಾಗಿರುವ ಪರಮೇಶ್ವರನೂ ಕೂಡ ಇಲ್ಲವೆಂದೇ ಹೇಳಬೇಕಾಗಿರುವುದು ಎಂಬ ಆಕ್ಷೇಪವು ಸಹಜವಾಗಿ ಉದ್ಭವಿಸುವುದು. ಅದು ಹಾಗಲ್ಲ. ಏಕೆಂದರೆ ಯೋಗಿಗಳಾದವರು ಈ ಪರಮೇಶ್ವರನು ದಿವ್ಯ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದಾನೆ ಎಂದು ಹೇಳುವುದರಿಂದಲೂ, ಈ ವಿಧವಾದ ತೇಜೋರೂಪವನ್ನೇ ಧ್ಯಾನದಿಂದ ಸಾಕ್ಷಾತ್ಕಾರ ಮಾಡಿಕೊಳ್ಳುವುದರಿಂದಲೂ, ಹಿಂದೆ ಹೇಳಿರುವ ಆಕ್ಷೇಪಣೆಯು ಯುಕ್ತವಾಗುವುದಿಲ್ಲ. ಯೋಗಿಗಳ ಅನುಭವವನ್ನೇ ಪ್ರಮಾಣವೆಂದು ಒಪ್ಪಬೇಕಾಗುತ್ತದೆ. ಇಷ್ಟೇ ಅಲ್ಲದೆ ಯೋಗಿಗಳು ಈದೇವನ ದಿವ್ಯ ತೇಜೋಮಯವಾದ ರೂಪವನ್ನೇ ಧ್ಯಾನ ಮಾಡುತ್ತಾರೆಯೇ ಹೊರತು ಪಾರ್ಥಿವ ಸಂಬಂಧವಾದ ಸಾಕಾರ ಮೂರ್ತಿಯನ್ನು ಧ್ಯಾನ ಮಾಡಿ ಪ್ರತ್ಯಕ್ಷ ಮಾಡಿಕೊಳ್ಳುವುದಿಲ್ಲ. ಪಾರ್ಥಿವ ರೂಪವು ಯಾವಾಗಲೂ ನಾಶವಾಗುವ ಸ್ವಭಾವ ಉಳ್ಳದ್ದಾಗಿರುವುದು. ಆದುದರಿಂದ ತೇಜೋಮಯವಾದ ರೂಪವನ್ನೇ ಧ್ಯಾನಮಾಡಿ ಸಾಕ್ಷಾತ್ಕಾರ ಮಾಡಿಕೊಳ್ಳುವ ಯೋಗಿಗಳು ಬೌದ್ಧ ಮತದವರು ಹೇಳುವ ಕ್ಷಣಿಕೇಶ್ವರವಾದವನ್ನು ಖಂಡಿಸುತ್ತಾರೆ.

'ಆಸ್ತಿಕರಾದ ಜನರು ಒಪ್ಪಿರುವ ದೈವ ಸ್ವರೂಪವು ಧ್ಯಾನಕಾಲದಲ್ಲಿ ಮಾತ್ರವೇ ಗೋಚರವಾಗುವುದು. ಉದಾಸೀನರಾಗಿ ಧ್ಯಾನಾದಿಗಳಲ್ಲಿ ಅಂತ ರ್ಮುಖಿರಾಗದೆ ಇರುವಾಗ ಈ ರೂಪವು ಗೋಚರವಾಗುವುದಿಲ್ಲ. ಆದ್ದರಿಂದ ಕ್ಷಣಿಕವಾದುದು. ನಾಶವನ್ನು ಹೊಂದುವ ಸ್ವಭಾವವುಳ್ಳದ್ದು. ನಾಶವಾಗುವುದ ರಿಂದ ಇದು ಅಸತ್ ಪದಾರ್ಥವಾಗುತ್ತದೆ' ಎಂದು ಬೌದ್ಧಮತದವರು ಹೇಳು ತ್ತಾರೆ. ಬೌದ್ಧರ ಸಿದ್ಧಾಂತವನ್ನು ಯೋಗಿಗಳೂ, ಸಾಂಖ್ಯ ಶಾಸ್ತ್ರಜ್ಞರು ಒಪ್ಪುವುದಿಲ್ಲ. ಈ ಅಂಬಾ ಸಹಿತನಾದ ಪರಬ್ರಹ್ಮನನ್ನು ಈ ಉಪಪತ್ತಿನ ಲ್ಲಿಯೂ ಕೂಡ 'ವಾಙ್ಮನೋ ಗೋಚರಾನಂತ ದಿವ್ಯ ತೇಜೋಮಯೋ ನಿತ್ಯೋನಿರ್ವಿಕಲ್ಪೋ' ಮೊದಲಾಗಿ ಹೇಳಲ್ಪಟ್ಟಿದೆ.

ಒಂದು ವಸ್ತುವನ್ನು ನೋಡಿದಾಗ ಹಿಂದಿನ ತನ್ನ ▪ ವಸ್ತು ಜ್ಞಾನ ದಿಂದ ತಾನು ಹಿಂದೆ ನೋಡಿದ ಪದಾರ್ಥವು ಇದೇ ಆಗಿರುವುದು ಎಂದು ಜ್ಞಾಪಿಸಿಕೊಳ್ಳುವನು. ಈ ಪ್ರಕಾರ ಅನುಭವ ಜನ್ಯವಾದ (ಸ್ಮೃತ್ಯುದ್ಬುದ್ಧ) ಸಂಸ್ಕಾರ ಸ್ಮರಣೆಯು ಪ್ರತ್ಯಾಭಿಜ್ಞೆಯೆನಿಸುವುದು. ಇದರಲ್ಲಿ ಹಿಂದೆ ನೋಡಿದ್ದ ದೇಶಕಾಲ ವಿಷಯಕವಾದ ಸ್ಮೃತಿಯು ಈಗಿನ ದೇಶಕಾಲಗಳಲ್ಲಿ ಉದ್ಬುದ್ಧ ವಾಗಿ ವಸ್ತು ಸ್ವರೂಪಾನುಭವ ಜ್ಞಾನವು ಉಂಟಾಗುತ್ತದೆ. ಯೋಗಿಗಳು ತಮ್ಮ ಗುರುಗಳಿಂದ ಉಪದಿಷ್ಟವಾದ ರೀತಿಯಲ್ಲಿ ಧ್ಯಾನ ಮಾಡುವಾಗ ತಾವು ಸಾಕ್ಷಾತ್ಕಾರ ಮಾಡಿರುವ ದಿವ್ಯತೇಜೋಮಯನಾದ ಸಾಂಬ ಮೂರ್ತಿಯನ್ನು ಪ್ರತ್ಯಾಭಿಜ್ಞೆಯಿಂದಲೇ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಿರುವರು. ಬೌದ್ಧರು ಒಪ್ಪಿರುವ ಕ್ಷಣಿಕವಾದ ಎಂದರೆ ಒಂದು ಕ್ಷಣದಲ್ಲಿ ಇದ್ದು ಇನ್ನೊಂದು ಕ್ಷಣದಲ್ಲಿ ಬದಲಾವಣೆಯನ್ನು ಹೊಂದುವ ರೂಪವನ್ನು ಸಾಕ್ಷತ್ಕರಿಸಿಕೊಳ್ಳಲು ಸಾಧ್ಯವಾ ಗುವುದಿಲ್ಲ. ಪ್ರತಿಯೊಂದು ಕ್ಷಣದಲ್ಲಿಯೂ ಬದಲಾವಣೆಯನ್ನು ಹೊಂದುವ ನಶ್ವರವಾದ ಕ್ಷಣಿಕ ವಸ್ತುವು ಪ್ರತ್ಯಭಿಜ್ಞೆಗೆ ವಿಷಯವೇ ಆಗುವುದಿಲ್ಲ. ಆದುದ ರಿಂದಲೇ ಇದನ್ನು ಒಪ್ಪಲು ಸಾಧ್ಯವಾಗುವುದಿಲ್ಲ. ಇದೇ ಅಲ್ಲದೆ ಬೌದ್ಧ ಮತದವರು ಒಪ್ಪಿರುವ ಕ್ಷಣಿಕತ್ವವನ್ನು ನಿರಾಕರಿಸಬೇಕಾಗಿದ್ದ▪ ಸಾಂಬ ಮೂರ್ತಿಯು ನಿತ್ಯನಾಗಿದ್ದಾನೆ ಎಂದು ಹೇಳಬೇಕಾಗಿದೆ. ಯಾವಾಗಲೂ ಸಾಂಬಮೂರ್ತಿಯು ಮನಸ್ಸಿಗೆ ಗೋಚರನಾಗಿರಬೇಕೆಂಬ ನಿಯಮವೇನೂ ಇಲ್ಲ.

ಇದು ಮತ್ರ ನಿದರ್ಶನಂ। ಘಟಗರ್ಭಂ ದೀಪಗರ್ಭಂ ಚೇತಿ ಅಪವರಕದ್ವಯಂ ಪಶ್ಯಾಮಃ। ಯದಾ ಅದ್ಯಮ ಪವರಕಂ ಅವೃಣ್ವತೀಂ ಭಿತ್ತಿಂ ಭಿನತ್ತಿ ಚೈತ್ರಃ ನ ತರ್ಹಿ ತಾವತಾ ಘಟವಿಕ್ಷತೆ ತತ್ಕಸ್ಯ ಹೇತೋಃ ದೀಪಾದಿಕಂ ಪ್ರಕಾಶಂ ಯತೋ ನಾಸ್ತೀತಿ। ಯದಾ ಪುನರಂತಿಮಂ ತಾವತ್ಯೆವ ತರ್ಹಿದೀಪ ಮಿಕ್ಷತೆ ತತ್ಕಸ್ಯ ಹೇತೋಃ ಸ್ವತೋಽಸೌ ಪ್ರಕಾಶಾತ್ಮೇತಿ ಏಪನೇವಾತ್ಮೇಹ ದೀಪ ಭಾಸಂ ಭಾಸತೇ ಯೋಗಿನಃ ಅಜ್ಞಾನವಾವೃಣತ್ವ ಜ್ಞಾನಂ ಭಿತ್ತಿ ಭೇದಂ ಭಿನತ್ತಿ ಯೋಗೀತಿ ನಾತ್ಮಾ ಮನೋವಿಷಯ ತಾಮುಪ್ನು ವೀತೇತಿ। ತೇಜೋಮಯ ಇತಿ ಸ್ವರೂಪಾರ್ಥ ಕಂ ಮಯಟ್ ನಾತೋ ವಿಕಾರಾತ್ಮಕತಾ ತದನು ನಶ್ವರತಾ ವಾ ಆರೋಪಣೀಯೇತಿ ಬೋಧ್ಯಂ। ಯದಾ ಕ್ಯೆಷ ಸದ್ಯೈಕ ರೂಪತಯಾ ಯೋಗಿಭಿರನು ಭೂಯತೇ ಇತಿ ಸಿದ್ಧಂ ತದಾ ಈ ದೃಗ್ರೂಪ ಸ್ಯಾದೃಗ್ರೂಪೋಽನ್ಯಾ ದೃಗ್ವೇತಿ ವಿರುದ್ಧಾ। ಕಲ್ಪನಾಃ ನಿರ್ವ್ಯಚ್ಯನ್ತೀತಿ ನಿರ್ದಿಕಲ್ಪಃ। ಯತ್ಪುನರ್ವಾಗಗೋ ಚರತ್ವ ಮುಕ್ತಂ ತತ್ರಹೇತುಂ ಜಿಜ್ಞಾಸಮಾನಾಯ ತಮಾಹ। ನಿರಂಜನ ಇತಿ।

ಇದಕ್ಕೆ ನಿದರ್ಶನವಾಗಿ ಇದನ್ನು ಹೇಳಬಹುದು. ಆವರಣ ರೂಪವಾದ ಅಜ್ಞಾನದ ನಾಶದಿಂದ ಪರಾರ್ಥಜ್ಞಾನವು ಉಂಟಾಗುತ್ತದೆ. ಆವರಣವು ಘಟಗರ್ಭ ಮತ್ತು ದೀಪ ಗರ್ಭ ಎಂದು ಎರಡು ವಿಧವಾಗಿರುವುದು. ಮೊದಲನೆಯದಾದ ಘಟ ಗರ್ಭವೆಂಬ ಆವರಣದ ಭಿತ್ತಿಯನ್ನು ಭೇದಿಸಿದರೂ ಘಟವು ಪ್ರತ್ಯಕ್ಷವಾಗುವುದಿಲ್ಲ. ಏಕೆಂದರೆ ದೀಪದಂತೆ ಪ್ರಕಾಶವಾದ ತೇಜಸ್ಸು ಇತ್ಯಾದಿಗಳ ನೆರವಿಲ್ಲದೆ ಇರುವುದೇ ಇದಕ್ಕೆ ಕಾರಣ. ಎರಡನೆಯದಾದ ದೀಪಗರ್ಭ ಆವರಣವನ್ನು ಭೇದಿಸಿದರೆ ದೀಪದ ದರ್ಶನವಾಗುತ್ತದೆ–ಏಕೆಂದರೆ ಅದಕ್ಕೆ ಸ್ವಪ್ರಕಾಶವಿದೆ ಆ ಪ್ರಕಾಶದಿಂದ ಅದನ್ನು ನೋಡಬಹುದು. ಅದನ್ನು ನೋಡಲು ಬೇರೆ ಯಾವ ವಿಧವಾದ ಸಹಾಯವು ಬೇಕಾಗಿಲ್ಲ. ಸಾಂಬಮೂರ್ತಿಯು ಸ್ವಪ್ರಕಾಶದಿಂದಲೇ ಪ್ರಕಾಶಿಸುತ್ತಿರುವನು. ಈ ದೇವನ ಪ್ರಕಾಶದಿಂದಲೇ ದೀಪಾದಿಗಳ ಪ್ರಕಾಶ ಉಂಟಾಗುವುದು. ಸ್ವಪ್ರಕಾಶ ರೂಪನಾಗಿ

ರುವ ಆತ್ಮನ ಸ್ವರೂಪವನ್ನು ಅಜ್ಞಾನವು ಆವರಿಸಿರುವುದು. ಯೋಗಿಯಾದವನು ಸ್ವಪ್ರಕಾಶದಿಂದ ಬೆಳಗುತ್ತಿರುವ ತನ್ನಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕಾಗಿ ಆವರಿಸಿರುವ ಅಜ್ಞಾನವನ್ನು ಭೇದಿಸುವನು. ಆತ್ಮ ಸಾಕ್ಷಾತ್ಕಾರವು ಯೋಗಿಗಳಿಗೂ ಅವಶ್ಯಕವಾಗಿರುವುದು ಆತ್ಮ ಸ್ವರೂಪವು ವಾಙ್ಮನೋಗೋಚರವಾಗಿರುವುದುದರಿಂದ. ಆತ್ಮ ಸ್ವರೂಪವು ಸ್ವಪ್ರಕಾಶವಾಗಿರುವು ತೇಜೋಮಯವಾಗಿರುವುದು ಎಂದು ತಿಳಿಯಬೇಕು. ತೇಜೋಮಯವೆಂಬ ಶಬ್ದದಲ್ಲಿ ಮಯಟ್ ಪ್ರತ್ಯಯವು ಸ್ವರೂಪಾರ್ಥದಲ್ಲಿ ಹೇಳಲಾಗಿದೆ. ವಿಕಾರ ಅರ್ಥದಲ್ಲಿ ಹೇಳಲಾಗಿಲ್ಲ. ಆದ ಕಾರಣ ನಶ್ವರತ್ವ ಮೊದಲಾದ ದೋಷಗಳು ಆತ್ಮ ಸ್ವರೂಪದಲ್ಲಿ ಇರುವುದಿಲ್ಲ ಎಂದು ತಿಳಿಯಬೇಕು. ಈ ರೀತಿಯಾಗಿ ಇರುವ ಆತ್ಮ ಸ್ವರೂಪವು ಏಕರೂಪವಾಗಿ ಇರುವುದೆಂಬುದು ಯೋಗಿಗಳ ಅನುಭವ. ಆತ್ಮ ಸ್ವರೂಪದ ವಿಷಯದಲ್ಲಿ ಹಾಗೆ ಹೀಗೆ ಅಥವ ಬೇರೆ ವಿಧವೆಂಬ ಕಲ್ಪನೆಯಾಗಲಿ, ಅಭಿಪ್ರಾಯ ಭೇದವಾಗಲಿ ಉಂಟಾಗಲು ಅವಕಾಶವೇ ಇರುವುದಿಲ್ಲ. ಆದುದರಿಂದ ಆತ್ಮ ಸ್ವರೂಪವು ನಿರ್ವಿಕಲ್ಪವೆನಿಸಿರುತ್ತದೆ.

**ಅಂಜನಂ ವಿಶೇಷಕಂ [redacted] ಗುಣ ಕ್ರಿಯಾನ್ಯತಮರೂಪಂ ನಿರ್ಗತಂ ಸಾಂಬಾದಿತಿ ನಿರಾಖ್ಯಾತಃ। ಬ್ರಾಹ್ಮಣಶಬ್ದೋ [redacted] ಜಾತ್ಯಾ ವಿಶೇಷೇಣ ಪ್ರವರ್ತತೇ ಕೃಷ್ಣ ಇತಿ ಚ ಗುಣೇನ, ಪಾಚಕ ಇತಿ [redacted] ಕ್ರಿಯಯಾ ನೇದ ಮಂಜನತ್ರಯಂ ಸಾಬೋಽಸ್ತಿ ಇತಿ ಸುಷ್ಠೂಕ್ತಂ ನಿರಾಖ್ಯಾತ ಇತಿ। ನನು ಹತೋಽಯಂ, ಯ ಏಷೋಽಂಜನ ಶಬ್ದೋ ವಿಶೇಷಕಾಭಿಧಾಯೀತಿ ನ [redacted] ಇತಿ ವಧಾಮಃ। ಕಥಂ ಕೃತ್ವಾ? ಅಞ್ಜೂ ವ್ಯಕ್ತಿಮ್ರಕ್ಷಣ ಕಾಂತಿಗತಿಷು ಇತಿ ಕರಣಾಧಿಕರಣಯೋಶ್ಚ ಇತಿ ಚ ಪಾಣಿನೀಯಂ ಶಾಸನಂಪ್ರಮಾಣಯೇತಿ ವದಾಮಃ। ಗತ್ಯರ್ಥಾ ಜ್ಞಾನಾರ್ಥಾ ಇತ್ಯವೋಚಾಮ ತನ್ನ ಸ್ಮರ್ತವ್ಯಂ ವೈಷಯಿಕಂ ಚಾಧಿಕರಣಂ ತತಶ್ಚ ಜ್ಞಾನ ವಿಷಯಃ ಅಂಜನ ಶಬ್ದಾರ್ಥಃ। ಶಬ್ದ ಜನ್ಯ ಪ್ರತೀತಿ ವಿಷಯು ಇತಿ ಸ್ಫುಟತಿ। ಯದಾಹ ಹರಿಃಜಾತಿ ಪ್ರತ್ಯಾಯಕೇ ಶಬ್ದೇ ಯಾ ವ್ಯಕ್ತಿರನುಷಜ್ಯತೇ ನ ತಾನ್ವ್ಯಕ್ತಿಗತಾನ್ ಭೇದಾನ್ ಜಾತಿ ಶಬ್ದೋಽವಲಂಬತೇ ಇತಿ। ಇದ ಮತ್ರ ಕೂತಂ। ಶಬ್ದ ಸಾರ್ಥ್ಯೇನ**

**ಸಂಬಂಧೋ ನಿತ್ಯಃ, ಸ ಏಷ ಸಂಬಂಧೋऽನು ಯೋಗಿನಂ ಪ್ರತಿ ಯೋಗಿನಂ ವಾ ಅನಿತ್ಯ ಮಾಶ್ರಯನ್ ನ ನಿತ್ಯಃ ಸ್ಯಾತ್। [redacted] ರ್ಥೇನ ವಾ ಶಬ್ದೇನ ವಾ ನಿತ್ಯೇನೈವ ಭಾವ್ಯಂ ಸತ್ಯೇವಂ ಯದಿ ಶಬ್ದೋ ವ್ಯಕ್ತಿಮಭಿದಧತಿ ಧ್ರುವಂ ಸಂಬಂಧೋऽನಿತ್ಯಃ ಸ್ಯಾತ್। ಅತೋ ಜಾತಿ ಮೇವ ನಿತ್ಯಾಮಭಿದಧೀತ, ನ ವ್ಯಕ್ತಿಂ ಪ್ರತ್ಯಕ್ಷ ದೃಷ್ಟ ನಶ್ವರ ಭಾವಾಂ ಯಾಃ ಪುನಃ ಪುನಃ ಪ್ರತೀಯ ಮಾನಜಾತ್ಯಾನುಷಂ ಗಿಣ್ಯೋ ವ್ಯಕ್ತಯೋऽನೇಕಾ ಇತಿ ಭೇದ ಪ್ರತ್ಯಯಃ। ನ ಸ ಭೇದಃ ಜಾತಿಬೋಧಕ ಶಬ್ದ ಪ್ರಮೇಯ ಇತಿ। ನ ತನ್ನಿ ಬಂಧನಂ ಸಂಬಂಧಾ ನಿತ್ಯತಾಪಾದನ ಮವಕಾಶೇತ। ಸರ್ವಥಾಪಿ ಸಿದ್ಧಂ 'ಅಂಜನ ಶಬ್ದಃ ಪ್ರತೀಯ ಮಾನಾರ್ಥ ವಾಚಕ' ಇತಿ। ತಮೇವ ಪ್ರತೀಯ ಮಾನ ಮರ್ಥಂ ವಿಶೇಷಕ ಶಬ್ದೇನ ವ್ಯಾಹರಾಮೇತಿ। ಕುತಸ್ಸೋऽಯಂ ಹಠಾತ್ಕಾರವಾದ ಇತಿ।**

ಈ ಆತ್ಮ ಸ್ವರೂಪಕ್ಕೆ ಜಾತಿ ಕ್ರಿಯಾಗುಣ ಎಂಬ ಭೇದ ಸಂಬಂಧವಾದ ರೂಪಾಂತರವು ಇರುವುದಿಲ್ಲ. ಬ್ರಾಹ್ಮಣ ಇತ್ಯಾದಿಗಳು, ಜಾತಿಗಳು, ಕಪ್ಪು-ಬಿಳುಪು ಎಂಬ ಗುಣವಾಚಕಗಳು, ಪಾಚಕಃ (ಅದರೆ ಬೇಯಿಸುವವನು ಅಡುಗೆ ಮಾಡುವವನು) ಮೊದಲಾದ ಕ್ರಿಯಾ ವಾಚಕಗಳು. ಆದ್ದರಿಂದ ಆತ್ಮ ಸ್ವರೂಪಕ್ಕೆ ಈ ಮೂರು ವಿಧವಾದ ಜಾತಿ, ಕ್ರಿಯಾ, ಗುಣ ಸಂಬಂಧವಾದ ವಿಶೇಷಗಳು ಇರುವುದಿಲ್ಲ ಮತ್ತು ಈ ಜಾತಿಯೇ ಮೊದಲಾದವುಗಳ ವಿಶೇಷ ಗಳಿಗೆ ಅಸ್ಪದವಿಲ್ಲದ ಕಾರಣ ಈ ಆತ್ಮ ಸ್ವರೂಪವು ನಿರಂಜನ ಎನಿಸಿರುವುದು.

'ಅಞ್ಜೂ ವ್ಯಕ್ತಿಮ್ರಕ್ಷಣ ಕಾಂತಿ ಗತಿಷು' ಎಂಬ ಪಾಣಿನಿಯ ಸೂತ್ರ ದಲ್ಲಿ ಹೇಳಿರುವಂತೆ ಅಞ್ಜೂಧಾತುವು ಗತ್ಯರ್ಥವುಳ್ಳದ್ದಾಗಿರುವುದು. ಗತ್ಯರ್ಥ ವಾದ ಧಾತುಗಳು ಜ್ಞಾನಾರ್ಥಕಗಳಾಗಿಯೂ ಇರುವುದರಿಂದ 'ಕರಣಾಧಿಕರಣ ಯೋಶ್ಚ' ಎಂಬ ಪಾಣಿನಿ ಸೂತ್ರದಂತೆ ಅಧಿಕರಣಾರ್ಥದಲ್ಲಿ ಅಂಜನ ಶಬ್ದವು ನಿಷ್ಪನ್ನವಾಗಿ ಜ್ಞಾನ ವಿಷಯಃ ಎಂಬ ಅರ್ಥವನ್ನು ಬೋಧಿಸುವುದು. ಅಂಜನ ಶಬ್ದದ ಅರ್ಥ ಶಬ್ದವು ಜನ್ಯ ಪ್ರತೀತಿ ವಿಷಯವಾಗಿರುವುದು. ಶಬ್ದ ಮತ್ತು

ಅರ್ಥಗಳು ನಿತ್ಯವಾದುವು. ಇವರೆಡರ ಸಂಬಂಧ ನಿತ್ಯವಾದುದು. ಸಂಬಂಧವು ಮಾತ್ರ ಅನುಯೋಗಿ ಅಥವ ಪ್ರತಿಯೋಗಿಗತವಾದ ಅನಿತ್ಯತ್ವಕ್ಕೆ ಅನುಸಾರವಾಗಿ ಅನಿತ್ಯವಾಗಿರುತ್ತದೆ. ಶಬ್ದವು ಜಾತಿಯನ್ನು ಬೋಧಿಸುವಾಗ ಜಾತಿ ಗತವಾದ ನಿತ್ಯತ್ವಕ್ಕನುಸಾರವಾಗಿ ಸಂಬಂಧವು ನಿತ್ಯವಾಗುವುದು. ಇದರಿಂದಲೇ ಶಬ್ದವು ವ್ಯಕ್ತಿ ಬೋಧಕವಲ್ಲ, ವ್ಯಕ್ತಿಗಳು ಉತ್ಪತ್ತಿ ವಿನಾಶ ಗಳನ್ನು ಹೊಂದುತ್ತವೆಂಬುದು ಪ್ರತ್ಯಕ್ಷಗೋಚರವಾಗಿರುವುದು. ಈ ವ್ಯಕ್ತಿ ಗಳೂ ಕೂಡ ಜಾತಿಯನ್ನು ಅನುಸರಿಸಿಕೊಂಡು ಅನೇಕವಾಗಿವವು. ಈ ಕಾರಣ ದಿಂದಾಗಿ ವಿಷಯದಲ್ಲಿ ಭೇದ ಜ್ಞಾನ ಉಂಟಾಗುವುದು. ವ್ಯಕ್ತಿಗತವಾದ ಭೇದ ಜ್ಞಾನವನ್ನು ನಿಮಿತ್ತ ಮಾಡಿಕೊಂಡು ಜಾತಿ ಬೋಧಕವಾದ ಶಬ್ದವು ಅರ್ಥ ವನ್ನು ಬೋಧಿಸಲು ಪ್ರವೃತ್ತವಾಗುವುದಿಲ್ಲ. ಮತ್ತು ಜಾತಿ ವ್ಯಕ್ತಿಗತವಾದ ಭೇದ ನಿಮಿತ್ತದಿಂದ ಶಬ್ದ ಮತ್ತು ಅರ್ಥಗಳ ಸಂಬಂಧವು ಅನಿತ್ಯವೆಂದು ಹೇಳಲು ಸಾಧ್ಯವಾಗುವುದಿಲ್ಲ. ಇದೇ ಅಭಿಪ್ರಾಯದಿಂದಲೇ ಭರ್ತೃಹರಿಯು ಇಂತು ಹೇಳಿದ್ದಾನೆ—

[redacted] ಪ್ರತ್ಯಾಯಕೇ ಶಬ್ದೇ ಯಾ ವ್ಯಕ್ತಿರನುಷಜ್ಯತೇ ।
[redacted] ತಾನ್ವ್ಯಕ್ತಿಗತಾನ್ ಭೇದಾನ್ [redacted] ಶಬ್ದೋಽವಲಂಬತೇ ॥

ಜಾತಿ ಬೋಧಕವಾದ ಶಬ್ದವು ಜಾತಿಯನ್ನು ಬೋಧಿಸುವಾಗ ವ್ಯಕ್ತಿಯು ಉಪಸ್ಥಿತವಾಗುವುದು. ಆದರೆ ವ್ಯಕ್ತಿಗತವಾದ ಭೇದವನ್ನು ಜಾತಿ ಶಬ್ದವು ಹೊಂದಿರಬೇಕೆಂಬ ನಿಯಮವಿಲ್ಲ ಎಂದು ಮೇಲಿನ ಶ್ಲೋಕವನ್ನು ಹೇಳಿರು ವನು. ಈ ಕಾರಣದಿಂದ ಅಂಜನ ಶಬ್ದವು ಪ್ರತೀಯಮಾನಾರ್ಥ ವಾಚಕ ವಾದ ವಿಶೇಷಕ ಎಂಬ ಅರ್ಥವೆಂಬುದು ನಿರ್ಣಯವು. ಇದೇ ಅರ್ಥವನ್ನು ಇಲ್ಲಿ ಅಂಗೀಕರಿಸಿರುತ್ತದೆ. ನಿರಂಜನಂ ಎಂದು ಸಾಂಬಮೂರ್ತಿ ಸ್ವರೂಪ ಬೋಧಕವಾದ ವಿಶೇಷಣ ಪದದಿಂದ ನಿಷಿಧ್ಯ ಮಾನವಾದ ನಿಷೇಧದಿಂದ ನಿಷೇಧಾವಧಿಯಾದ ಅಧಿಷ್ಠಾನವನ್ನು ಬೋಧಿಸುವುದಕ್ಕಾಗಿಯೇ ಅಂಜನ ಶಬ್ದಕ್ಕೆ ಬಲಾತ್ಕಾರವಾಗಿ ಈ ವಿಧವಾದ ಅರ್ಥವ್ಯುತ್ಪತ್ತಿಯನ್ನು ಹೇಳಿರುತ್ತದೆ.

**ಇಯದ್ವಿಶೇಷಾಣಾನಿ ನಿಷಿಧ್ಯಮಾನಾನಿ ನಿಷೇಧಾವಧಿ ಮಧಿಷ್ಠಾನಂ ಬೋಧಯೇಯುರಿತಿ ಉಪನಿಷದೋ ಹೃದಯ ಮುದ್ಘಾಟಿತಂ। ಕ್ಷಣಿಕತಾ ಚಾಧಿಷ್ಠಾನಸ್ಯ ಯೋಗಿ ಪ್ರತ್ಯಾಭಿಜ್ಞಯಾ ನಿರ್ಧೂತಾ ತದನು ಸ್ವರೂಪತೋಽಧಿಷ್ಠಾನ ಭೂತಃ ಸಾಂಬೋಽವಗಮಯಿತವ್ಯ ಇತಿ ಪ್ರವರ್ತತೇ ಶ್ರುತಿಃ। ಅತಿ ಶುದ್ಧೋ ದೇವ ಇತಿ। ಚಿದ್ರೂಪ ಆನಂದರೂಪಶ್ಚ ತದರ್ಥಃ। ಅಶುದ್ಧತ್ವಂ ಹಿ ಅಸ್ವಪ್ರಕಾಶತ್ವ ವ್ಯಾಪ್ತಂ, ಯದಿ ಅತಿಶುದ್ಧಃ ಸಾಂಬ ಸ್ತರ್ಹಿ ಅತ್ಯಂತಂ ಸ್ವಪ್ರಕಾಶ ಇತಿ ಯಾವದುಕ್ತಂ ಭವತಿ ಚಿದ್ರೂಪ ಇತಿ ತಾವದುಕ್ತಂ ಭವತಿ ಅತಿಶುದ್ಧ ಇತಿ। ಏವಂ ಮೋದೋಽರ್ಥೋ ದಿವ್ ಧಾತೋಃ ಸ ಚ ಆನಂದ ರೂಪಃ ಇತಿ ಸಿದ್ಧಂ ಚಿದಾನಂದ ರೂಪತ್ವಂ ಸಾಂಬಸ್ಯ। ನ ಚಾಸತಃ ಕಷವಿಶಣಾದೇರೇ ತದುಭಯಾತ್ಮತಾ ಸಂಭಾವ್ಯತ ಇತಿ ತಯೋರುಪಪತ್ತ್ಯೈ ಸದ್ರೂಪತಾಕ್ಷಿಪ್ತಾ ಸ್ಯಾದಿತಿ ನ ಸದ್ರೂಪತಾ ಮಹೋಪನಿಷತ್। ತಥಾ ಚ ಸಚ್ಚಿದಾನಂದ ರೂಪ ಇತಿ ಸ್ಫುಟಿತಂ। ಏಕ ಇತಿ ಕೇವಲ ಇತ್ಯರ್ಥಃ। ನ ತದ್ಭಿನ್ನಂ ವಸ್ತು ಪರಮಾರ್ಥತೋಽಸ್ತೀತಿ ಹೃದಯಂ ಯನ್ನಿ ಬಂಧನ ಮೇವ ಕೈವಲ್ಯಮಿತಿ ಮೋಕ್ಷಮಭಿಸಂದಧತೇ ಮಹರ್ಷಯಃ।**

ಉಪನಿಷತ್ತುಗಳೆಲ್ಲವೂ ಆತ್ಮ ಸ್ವರೂಪವನ್ನು ಬೋಧಿಸುವುವು. ಅದರಂತೆ ಈ ಉಪನಿಷತ್ತೂ ಕೂಡ ಆತ್ಮ ಸ್ವರೂಪವನ್ನು ಬೋಧಿಸುವುದಾಗಿ ನಿಷೇಧಾವಧಿಯಾದ ಅಧಿಷ್ಠಾನವನ್ನು ಬೋಧಿಸುವುದು. ಈ ಅಧಿಷ್ಠಾನವು ಕ್ಷಣಿಕವಾಗಿರುವುದು ಎಂಬ ವಿಷಯವು ಯೋಗಿ ಪ್ರತ್ಯಭಿಜ್ಞೆಯಿಂದಲೇ ತಿರಸ್ಕೃತವಾಗಿರುತ್ತದೆ. ಸಾಂಬ ಮೂರ್ತಿಯೇ ಈ ಸಕಾರವಾದ ಅಧಿಷ್ಠಾನನಾಗಿರುವನೆಂದು ತಿಳಿಯಬೇಕು ಎಂದು ಶ್ರುತಿಯು ಪ್ರತಿಪಾದಿಸುವುದು.

ಈ ಅಂಬಾ ಸಮೇತನಾದ ಮೂರ್ತಿಯು ಅತಿಶುದ್ಧನಾಗಿರುವನು. ಅತಿಶುದ್ಧ ಎಂಬ ಪದಕ್ಕೆ ಚಿದ್ರೂಪನೂ, ಆನಂದ ರೂಪನೂ ಆಗಿರುವನೆಂದು ಅರ್ಥವು. ಸ್ವಪ್ರಕಾಶವಿಲ್ಲದಿರುವುದೆಲ್ಲವೂ ಅಶುದ್ಧವೆನಿಸುವುದು. ಸಾಂಬ

ಮೂರ್ತಿಯು ಸ್ವಪ್ರಕಾಶದಿಂದ ಬೆಳಗುತ್ತಿರುವುದರಿಂದಲೂ ಈ ಸ್ವಪ್ರಕಾಶವು ಚಿದ್ರೂಪದಿಂದಲೇ ಆಗಿರುವ ಕಾರಣ ಅತಿಶುದ್ಧನಾದ ಸಾಂಬಮೂರ್ತಿಯು ಚಿದ್ರೂಪದಿಂದ ಇರುವನೆಂದು ಸ್ಪಷ್ಟವಾಗಿರುತ್ತದೆ.

'ದಿವ್' ಧಾತುವಿನಿಂದ ದೇವ ಶಬ್ದವು ಉಂಟಾಗಿರುತ್ತದೆ. ದಿವ್ ಧಾತುವಿಗೆ ಪೋದ, ಆನಂದ ಎಂಬ ಅರ್ಥಗಳಿವೆ. ಸಾಂಬಮೂರ್ತಿಯು ಆನಂದ ರೂಪನಾಗಿರುವನು. ಶಶ ವಿಶೇಷಣಾದಿಗಳು ಅಸತ್ಯಾಗಿರುವವು. ಆದ ಕಾರಣದಿಂದ ಅವುಗಳಿಗೆ ಚಿದ್ರೂಪತ್ವವೂ ಇರುವುದಿಲ್ಲ. ಸಾಂಬಮೂರ್ತಿಗೆ ಚಿದ್ರೂಪತ್ವ, ಆನಂದ ರೂಪತ್ವಗಳಿರುವುದರಿಂದ ಸದ್ರೂಪತ್ವವೂ ಆಕ್ಷಿಪ್ತವಾಗಿ ಸಚ್ಚಿದಾನಂದ ರೂಪನೆಂಬುದು ಸ್ಪಷ್ಟವಾಗಿರುತ್ತದೆ.

ಏಕ ಶಬ್ದದಿಂದ ಈ ಸಚ್ಚಿದಾನಂದ ರೂಪನಾದ ಸಾಂಬಮೂರ್ತಿಯು ಕೇವಲನಾಗಿರುವನು ಎಂದು ಅರ್ಥವಾಗುತ್ತದೆ. ಇದರಿಂದ ಸಾಂಬಮೂರಿ ಗಿಂತಲೂ ಬೇರೆಯಾದ ಪರಮಾರ್ಥವಸ್ತುವು ಇಲ್ಲವೆಂದು ತಿಳಿಯಬೇಕು. ಮಹರ್ಷಿಗಳು ಈ ಪ್ರಕಾರವಾದ ಕೇವಲ ಭಾವವನ್ನು ಮೋಕ್ಷವೆಂದು ಹೇಳುವರು.

**"ಪರ ಬ್ರಹ್ಮೇತಿ" ದೇಶಕಾಲ ಪರಿಚ್ಛೇದಾಭಿಪ್ರಾಯೇಣ ವ್ಯಾಪಕತಾಮಾಹ । ಆಕಾಶಾದಿಕಂ ಹಿ ವ್ಯಾಪಕಮಭಿಮನ್ಯಂತೇ ತಾಂತ್ರಿಕಾಃ, ಸರ್ವಮೇವ ತತ್ತಾದೃಶಮಪೇಕ್ಷ್ಯ ವ್ಯಾಪಕತಮ ಇತ್ಯರ್ಥಃ । ಯಃ ಪುನರಿಮಂ ವಾದಮಾಶಾನೋದಕ ಕಲ್ಪಂ ಗೃಹ್ಣಾನೋಪಹಸೇತ್ ತದ್ದಮನಾಯಾಹ । ವಿರಾಜತೇ ಇತಿ । ಸರ್ವ ಪ್ರತ್ಯಯ ಸಾಕ್ಷಿತಯೇತಿ ಆದಿಃ । ತಮೇವ ಭಾಂತ ಮನು ಭಾತಿ ಸರ್ವಮಿತಿಶ್ರುತ್ಯಂತರಾದಿತ್ಯರ್ಥಃ । ತದಿದಂ ಸರ್ವಮುಕ್ತಂ ಸಂಗ್ರಹ ಸೂಕ್ತ್ಯಾ । 'ಸಚ್ಛಿದಾನಂದ ರೂಪೋಽಪಿ' ಇತಿ ನಿರ್ದೇಶನ । ತೇನ ನಿಷೇಧಾ ಅಪಿ ಆಕ್ಷಿಪ್ತಾ ಭವಂತಿ । ಯೇ ಪುನರಿಹ ತರ್ಕರಸಿಕಾಸ್ತನ್ನಿಬಂಧನ ಮೇವ ತಮುಪ್ಯರ್ಥಮನುಮಾನೇನೈವ ಜಿಜ್ಞಾಸಂತೇ ಯಂ ಪ್ರತ್ಯಕ್ಷೇಣಾಕಲಯಂತಿ ತಾನಪ್ಯನುಗೃಹ್ಣಾತೀ ಶ್ರುತಿರೇಷಾ**

**'ಸ ಏವಾಖಿಲಾಜಾಂಡಕೋಟೀನಾಂ ಮೂಲ ಬೀಜಂ ಭವತಿ' ಇತಿ ।**

ಈ ಸಾಂಬಮೂರ್ತಿಯು ಪರಬ್ರಹ್ಮನು ಎಂದು ಹೇಳುವುದರಿಂದ ಇವನ ದೇಶಕಾಲ ಪರಿಚ್ಛೇದಗಳಿಗೆ ಒಳಪಡುವವನಲ್ಲವೆಂದು ತಿಳಿಯಬೇಕು. ಆದುದರಿಂದ ಈತನು ಎಲ್ಲಾ ಕಡೆಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ವ್ಯಾಪಿಸಿಕೊಂಡಿರುವನು. ತಾಂತ್ರಿಕರು ಆಕಾಶಾದಿಗಳು ವ್ಯಾಪಕಗಳಾಗಿರುತ್ತವೆ ಎಂದು ಹೇಳುತ್ತಾರೆ. ಈ ಸಾಂಬಮೂರ್ತಿಯು ಆಕಾಶಾದಿಗಳನ್ನು ವ್ಯಾಪಿಸಿದ್ದಾನೆ. ಇವನಲ್ಲಿರುವ ವ್ಯಾಪಕತ್ವವು ಆಕಾಶಾದಿಗಳಲ್ಲಿರುವ ವ್ಯಾಪಕತ್ವಕ್ಕಿಂತಲೂ ಬೇರೆಯಾಗಿ ಎಲ್ಲವನ್ನು ವ್ಯಾಪಿಸಿರುವ ವ್ಯಾಪಕತ್ವವಾಗಿರುತ್ತದೆ ಆದುದರಿಂದಲೇ ಇವನು ವ್ಯಾಪಕತಮನೆನಿಸುವನು.

ವ್ಯಾಪಕತಮನಾಗಿ ಎಲ್ಲವನ್ನೂ ವ್ಯಾಪಿಸಿಕೊಂಡಿರುವ ಈ ದೇವನು ಇರುವನು. ಎಂದು ವಾದಮಾಡುವುದು ಕೇವಲ ಕಲ್ಪನೆಯೆಂದು ಕೆಲವರು ಹೇಳುವರು. ಇವರ ಅಭಿಪ್ರಾಯವು ಸರಿಯಾದುದಲ್ಲವೆಂದು ಬೋಧಿಸುವುದಕ್ಕಾಗಿ ವಿರಾಜತೇ ಎಂಬ ಶಬ್ದವನ್ನು ಪ್ರಯೋಗಿಸಿರುವುದು. ಈ ದೇವನು ಎಲ್ಲಕ್ಕೂ ಆದಿಯೆಂದು ಹೇಳುವುದಕ್ಕಾಗಿ ಸರ್ವಪ್ರಯತ್ನಗಳಿಗೂ ಸಾಕ್ಷಿಯಾಗಿರುವನು. ಎಂದು ಹೇಳಿರುವುದಲ್ಲದೆ 'ತಮೇವಭಾನ್ತಮನುಭಾತಿ ಸರ್ವಂ' ಎಂಬ ಶ್ರುತಿಯಿಂದಲೂ ಇದು ಸ್ಪಷ್ಟವಾಗುತ್ತದೆ.

ಈ ವಿಷಯಗಳೆಲ್ಲವೂ ಸಂಗ್ರಹ ಸೂಕ್ತಿಯ ಪದ್ಯವಾದ 'ಯೋ ಜೀವಾನ್ ಕರ್ಮವಶ್ಯಾನ್' ಎಂಬ ಪದದಲ್ಲಿ 'ಸದ್ಭಾವಾನಂದ ರೂಪಃ' ಮುಂತಾದ ಪದಗಳಿಂದ ನಿರ್ದೇಶಿತವಾಗಿದೆ. ಇದರಿಂದ ಈ ದೇವನ ವಿಷಯದಲ್ಲಿರುವ ನಿಷೇಧಗಳೆಲ್ಲವನ್ನೂ ಆಕ್ಷೇಪ ಮಾಡಿ ನಿರಾಸ ಮಾಡಿದಂತಾಯಿತು.

ತರ್ಕಶಾಸ್ತ್ರದಲ್ಲಿ ನಿಪುಣರಾದವರು ಪ್ರತ್ಯಕ್ಷ ದೃಷ್ಟವಾದ ವಿಷಯವನ್ನು ಅನುಮಾನ ಪ್ರಮಾಣದಿಂದಲೇ ತಿಳಿಯಲು ಅಪೇಕ್ಷಿಸುತ್ತಾರೆ ಅವರಿಗೂ ಕೂಡ ಅನುಗ್ರಹ ಮಾಡುವುದಕ್ಕಾಗಿ 'ತಮೇವ ಭಾಂತ ಮನುಭಾತಿ ಸರ್ವಂ' 'ತಸ್ಯ

ಬಾಸಾ ಸರ್ವಮಿದಂ ವಿಭಾತಿ' ಎಂಬ ಶ್ರುತಿ ವಾಕ್ಯಗಳು ಆತ್ಮನ ಸಾಕ್ಷಿ ಸ್ವರೂಪ ವನ್ನು ಹೇತು ವ್ಯಾಪ್ತಿಯೇ ಮೊದಲಾದ ತರ್ಕಶಾಸ್ತ್ರ ಮಾರ್ಗದಿಂದ ತಿಳಿಯ ಪಡಿಸುವುಲ್ಲದೆ ಸ ಏವಾಖಿಲಾ ಜಾಂಡ 'ಕೋಟಿನಾಂ ಮೂಲ ಬೀಜಂ' ಎಂಬ ವಾಕ್ಯವೂ ಕೂಡ ಸಚ್ಚಿದಾನಂದ ಸ್ವರೂಪನಾಗಿ ಸಾಕ್ಷಿಯಾಗಿರುವ ಈ ದೇವನು ಸಮಸ್ತವಾದ ಬ್ರಹ್ಮಾಂಡ ಕೋಟಿಗಳಿಗೂ ಮೂಲ ಕಾರಣವಾನಾಗಿ ರುವನು ಎಂಬರ್ಥವನ್ನು ಬೋಧಿಸುವುದು.

ಸ ಏವಾಖಿಲಾಜಾಂಡ ಕೋಟೀನಾಂ ಮೂಲ ಬೀಜಂ ಭವತಿ | ೮

**ಅಜ್ಯೈರ್ಜೀವೈಃ ಪೂರಿತಾ ಅಂಡಾಃ ಅಜಂಡಾ ಇತಿ ಮಧ್ಯಮ ಪದಲೋಪಿ ಸಮಾಸಃ । ತೇಷಾಂ ಕೋಟಯಃ । ತದುತ್ಪತ್ತಿ ಹೇತು ಕರ್ತೇತ್ಯರ್ಥಃ । ಸ್ವರೂಪೇಣಾ [illegible] ಅಪಿ ಜೀವಾ ಭಿನ್ನ ಭಿನ್ನ ಶರೀರ ಗ್ರಹಣೇನೋತ್ಪತ್ತಿಮಂತ ಅಹ್ಯಾಯಂತೇ । ಅವಶ್ಯಂ ಚೈವ ನೋವೈ ತತ್ಪ್ರತಿಪತ್ತವ್ಯಂ ಅನ್ಯಥಾ ಸ್ವರೂಪತ ಏವ ಜೀವನಾ ಮುತ್ಪತ್ತಿ ಮಂಗೀಕುರೂತ್ವಾಂ ಜಗದ್ವೈಚಿತ್ರ್ಯಮಕಾರಣಕಂ ಸ್ಯಾತ್। ಯತಸ್ತ್ತ್ರದ್ವೈಚಿತ್ರ್ಯ ಹೇತುಂ ತತ್ತಜ್ಜನ್ಮನಿ ನೋಫಲ ಭಾವಮಹ ಇತಿ । ಯದಾತ್ವಿನೋತ್ಸಜಾ ಅಭ್ಯುಪಗಮ್ಯೇರನ್ ನ ತದಾ ಜಗದ್ವೈಚಿತ್ರ್ಯಮ ಕಾರಣಕಂ ಸ್ಯಾತ್ ಪೂರ್ವ ಪೂರ್ವ ಜನ್ಮಜ ಕರ್ಮಣಾಂ ತತ್ತ್ರದುತ್ರ[illegible] ವಿಚಿತ್ರ ಜಗತ್ಕಾರಣ ತ್ವೋಪಪತ್ತೇ । ನ ಚ ಜಡಾನಾಂ ಕರ್ಮಣಾ ಮೇವ ಹೇತು ತಾಂ ಲೋಕೋsವ ಗಚ್ಛಾಮಃ। ಅಪಿ ತು ಚೇತನಸ್ಯ ಕರ್ತುಃ। ತತಶ್ಚ ಯದ್ಯತ್ಕಾರ್ಯಂ ತತ್ತತ್ಕಾಯೇರ್ತಿಸ್ಮಸಂಹತ ಚೇತನ ಕರ್ತೃಕ [illegible] ಗೃಹಿತ ವ್ಯಾಪ್ತಿಕಾಸ್ತಾರ್ಕಿಕಾ ಅಪಿಜಗತಃ ಕರ್ತೃಕತ್ವೇನ ಸಾಂಬಮನುಮಿತಾಮಿತಿ ಭಗವತ್ಯಾ ಶ್ರುತೇರಭಿ ಸಂಧಿಃ । ಇಹ ಚಾಖಿಲಾಜಾಂಡ ಕೋಟೀನಾಮಿತಿ ನಿರ್ದ್ದೇಶಃ ಅಪರಿಮೇಯಾಂ ಕರ್ತುಃ ಶಕ್ತಿಮವಬೋಧಯಿತುಂ ಅಸಂಖ್ಯ ವಿಚಿತ್ರ ಜೀವಕೋಟಿ**

**ಪೂರಿತಾ [redacted] ಚತುರ್ದಶಲೋಕಾ ತತ್ಸಂ ಪುಟಾತ್ಮಕ ಏಕೋsಡ। ಸಂತಿ ಚೈವಂ ಜಾತೀಯಕಾನಾಮಂಡಾನಾಂ ಕೋಟಯಃ ನ ಚೈತತ್ಸರ್ಜನ ಮನಾಶ್ರಿತ್ಯ ಪರಿಮೇಯಾಂ ಶಕ್ತಿಂ ಘಟೀತೇತಿ। ತದಿದಮಾಹ ಅನು ಮಿತಿಸಿದ್ಧಂ ಕರ್ತಾರಂ ಅಗಣಿತ ಮಹಿಮಸ್ವಾತ್ಮಮಾಯಾಂ ಸ್ವಶಕ್ತಿಮಿತಿ ವಿಶಿಂಷನ್। ನನು ಸ ಏವೇತಿ ಏವ ಕಾರೇಣ ಕರ್ತಾರಮನ್ಯಂ ವ್ಯವಚ್ಛಿನತ್ತಿ । ತನ್ನಾರ್ಥಃ ।**

ಈ ವಾಕ್ಯಗತವಾದ **ಅಜಾಂಡ** ಪದದಲ್ಲಿರುವ ಅಜಶಬ್ದಕ್ಕೆ ಜೀವವೆಂದು ಅರ್ಥ. ಅಜೈಃ ಪೂರಿತಾಃ ಅಂಡಾಃ ಎಂದರೆ ಜೀವದಿಂದ ತುಂಬಿರುವ ಅಂಡವು ಅಜಾಂಡವೆಂದು ಹೇಳುತ್ತಾರೆ. ಮಧ್ಯಮ ಪದ ಲೋಪವುಳ್ಳ ಸಮಾಸವನ್ನು ಹೇಳಿರುವುದರಿಂದ ಈ ರೀತಿಯಾದ ಅರ್ಥವಾಗುತ್ತದೆ. ಈ ಪ್ರಕಾರವಾಗಿ ರುವ ಅಂಡಗಳು ಅಸಂಖ್ಯಾತವಾಗಿರುತ್ತವೆ ಎಂದು ಹೇಳುವುದಕ್ಕಾಗಿ ಕೋಟಿ ಸಂಖ್ಯಾವಾಚಕವಾದ ಕೋಟಿ ಪದವನ್ನು ಪ್ರಯೋಗಿಸಲಾಗಿದೆ.

ಈ ಅಸಂಖ್ಯಾತವಾದ ಬ್ರಹ್ಮಾಂಡ ಕೋಟಿಗಳಿಗೂ ಉತ್ಪತ್ತಿಕಾರಣ ಕರ್ತೃವು ಈತನೇ. ಜೀವರುಗಳು ಸ್ವರೂಪದಿಂದ ಉತ್ಪತ್ತಿಯನ್ನೂ ನಾಶವನ್ನೂ ಹೊಂದರುವವರಲ್ಲ. ಅವರೆಲ್ಲರೂ ನಿತ್ಯರೇ ಆಗಿರುವವರು. ಆದರೆ ಜೀವ ಭಾವದಿಂದ ಇರುವ ಬೇರೆಬೇರೆಯಾದ ಶರೀರಗಳನ್ನು ಹೊಂದಿ ರುವ ಕಾರಣ ಇವರಿಗೆ ಉತ್ಪತ್ತಿ ಮೊದಲಾದುವುಗಳು ಔಪಚಾರಿಕವಾಗಿರುತ್ತವೆ ಜೀವರಿಗೆ ಉಂಟಾಗಿರುವ ಜೀವ ಭಾವವು ಔಪಾಧಿಕವೆಂದು ತಿಳಿಯಬೇಕು. ಸ್ವರೂಪದಿಂದಲೂ ಜೀವರು ಉತ್ಪತ್ತಿ ಮುಂತಾದವುಗಳನ್ನು ಹೊಂದಿರುವರು ಎಂದು ಅಂಗೀಕರಿಸುವುದಾದರೆ ಜಗತ್ತಿನವೈಚಿತ್ರ್ಯವೇ ಇಲ್ಲದೇ ಹೋಗುವುದು. ಜಗತ್ತಿನಲ್ಲಿ ಜೀವರುಗಳು ಅನೇಕ ವಿಧವಾಗಿರುವ ಉತ್ಪತ್ತ್ಯಾದಿಗಳನ್ನು ಹೊಂದಿರುವುದಕ್ಕೆ ಕಾರಣವನ್ನು ಹೇಳಬೇಕು. ಜೀವರುಗಳ ಉತ್ಪತ್ತ್ಯಾದಿ ಗಳಲ್ಲಿ ಅನೇಕ ವಿಧವಾದ ವೈಚಿತ್ರ್ಯ ಇರುವುದು. ಈ ವಿಧವಾದ ವೈಚಿತ್ರ್ಯವು ಆಯಾಯ ಜನ್ಮಗಳಲ್ಲಿ ಉಂಟಾಗಿರುವುದು ಸಕಾರಣವಾಗಿರುತ್ತವೆ.

ಯುಳ್ಳ ತನ್ನ ಮಾಯಾಶಕ್ತಿಯನ್ನು ಮುಖ್ಯವಾಗಿ ಉಪಯೋಗಿಸಿರುವನು. 'ಸ ಏವ ಕರ್ತಾ' ಎಂದು ನಿರ್ದೇಶನ ಮಾಡಿರುವುದರಿಂದ ಕರ್ತೃವಾದವನು ಇನ್ನೊಬ್ಬನಿದ್ದು ಅವನನ್ನು ಈ ಮಾತಿನಿಂದ ಪ್ರತ್ಯೇಕಗೊಳಿಸಿದೆ ಎಂದು ಅರ್ಥ ಮಾಡಬಾರದು.

**ತಸ್ಮಾನ್ನ ದ್ವಿತೀಯೋಽಸ್ತಿ ಕಶ್ಚಿತ್ ಸ ನಿರಾಕಾರೋಽಪಿ ಸಾಕಾರ ತ್ವಂ ವಿಧತ್ತೇ। ೯**

**ನಿರಾಕಾ ಸಾಕಾರಾವಸ್ಥ ನೈಸರ್ಗಿಕೌ ವರ್ತೇತೇ। ೧೦**

ತಸ್ಮಾನ್ನ ದ್ವಿತೀಯೋಽಸ್ತಿ ಕಶ್ಚಿದಿತಿ ಕರ್ತಾರ ಮಾನ್ಯಂ ವ್ಯವಚ್ಛಿಂದದ್ವಚನಸ್ಯ ಅರ್ಥ ಇತಿ ಬ್ರೂವನೋ ವಿಶೇಷಣಾವಗತೇಃ। ಲೋಕವದ್ಧಿ ಮಹತ್ಕಾರ್ಯಮನೇಕ ಕರ್ತೃಕಂ [redacted] ಅನಮಿಮೊರನ್ ಏವಕಾರಂ ಚ ಪ್ರಧಾನ ಭೂತ ಮನ್ಯಂ ಕರ್ತಾರಂ ವ್ಯವಚ್ಛೇತ್ತಾರಂ ಮನ್ವೀರನ್ । ತನ್ಮಾ ಸ್ಭೈವ ಮನುವಿ ಮತ ಮಾ ಸ್ಮ ಚ ಮನ್ವತ ಇತಿ ವಿಶೇಷಾವಗತತೇಹೇತಿ ತೋಃ ಅಭ್ಯಾಸೇ ಹಿದಾರ್ಢ್ಯ ಮರ್ಥಸ್ಯಾಭ್ಯಸ್ಯ ಮಾನಸ್ಯ ಲೋಕತೋಽವ ಗಚ್ಛಾಮಃ ತನ್ಮಾ ಗ್ರಹೀಷತ ತಾರ್ಕಿಕ ರಸಿ ಕಾಃ ಏವಕಾರ ಮೌಪಚಾರಿಕಾರ್ಥಕ ಮಿತಿ । ವಿವಿಚ್ಯಾರ್ಥಂ ಗೃಹ್ಣೀಯರಥ್ಯೇಕಾರ ಇತಿ ಮನ್ವಾನೋಽಪನಿಷತ್-ಸ ಸಾಂಬಃ ಉಕ್ತ ಪ್ರಮಾಣ್ಯೈರ್ನಿರಾಕಾರೋಽಪೀತಿ ವೃತ್ತಮನು ಕೀರ್ತಯತಿ । ಸ್ಮತ ಇತಿ ಶೇಷಃ। ವಿಧತ್ತೇ ಪುಷ್ಣಾತೀತ್ಯರ್ಥಃ। ಯಧಿ ವಿಧಾನಂ ಉತ್ಪಾದನಂ ಸ್ಯಾತ್ತದೋತ್ಪಾದ್ಯಮಾನ ಘಟಸ್ಯೋತ್ಪತ್ತೇಃ ಪೂರ್ವಂ ಘಟ ರೂಪಾ ಸತ್ತ್ವವದಾಕಾರಸ್ಯಾಸತ್ತ್ವ ಪಾತಃ। ತತಶ್ಚ ನಿರಾಕಾರ ಸಾಕಾರವಸ್ಥ ನೈಸರ್ಗಿಕಾ ವರ್ತತೇ ಇತಿ ಆಕಾರಸ್ಯ ಸ್ಮತ ಸ್ಸಿದ್ಧತ್ವ ದೂಪ ನೈಸರ್ಗಿಕತ್ವ ವಚನ ಮುಖ್ಯತ್ತ್ವ ಭಾವಾಭಿಪ್ರಾಯಕಂ ಶ್ರೌತ

**ಮುಪರುಧ್ಯೇತ, ತಸ್ಮಾತ್ಪುಷ್ಪಾತೀಶ್ಯೇನಾರ್ಥಃ । ತದಿದಂಮುಕ್ತಂ । ಸಾಂಬಮೂರ್ತಿಃ [illegible] ನೋಽವ್ಯಾದಿತಿ । ಅಯಮಭಿ ಸಂಧಿಃ । ಸ್ಯ ಅಸ್ಮಾನಿತ್ಯರ್ಥಕಂ ಕೇ ಯುೂಯ ಮಿತಿ ತದನು ಪರ್ಯನು ಯೋಗಃ ಸ್ಯಾತ್ । ಗುರು ಸಂಘ ಆಚಾರ್ಯ ಸಂಘಶ್ಚೇತಿ । ನಾವಿತಿ ದ್ವಿವಚನೇನ ಅವನೀಯಾರ್ಥ ಮಜಾನೀಮ । [illegible] ವಯಮೇವಂ ಸಮಾನಧೀ ಯಾಮ, ಅನಾದಿರೇತತ್ಸಂಘದ್ವಯಂ ಗುರೋರವನವತ್ ಶಿಷ್ಯಸ್ಯಾವ ನಮರ್ಥಯತೇ ದೀಪಕಾಲಂಕಾರ ವಿಧಯೇತಿ ಶ್ರುತ್ಯರ್ಥಮವೋ ಚಾಮ । ತನ್ನ ಪ್ರಸ್ಮರ್ತವ್ಯಂ ತತಶ್ಚಾನಾದಿಕಾಲ ಪ್ರವೃತ್ತಃ ಅವಿತಾ ಸಾಂಬೋಽಪಿ ಸಿಧ್ಯತಿ । ನ ಚ ನಿರಾಕಾರಃ [illegible] ಸ್ಯಾದಿತಿ ಅನಾದಿತ್ವಂ ಸಾಕಾರಸ್ಯೇತಿ। ಕಿಮರ್ಥಂ ಪುನರಿಹಾಕಾರತದಭಾವಯೋ ನೈಸರ್ಗಿಕ [illegible] ವಾದಃ। ತಾದೃಕ್ತ್ವಾದೃಗಧಿಕಾರಿಣಾಮನುಗ್ರಹಾಯೇತಿ ವದಾಮಃ । ಕೇಚಿದ್ಧಿ ಸಾಕಾರಂ ಧ್ಯಾಯೇಯುಃ ಪರೇಃ ನಿರಾಕಾರಂ ಉಭಯೋ ಅಪಿ ಅನುಗ್ರಾಹ್ಯಾವಿತಿ । ಭಾವ ಪ್ರಧಾನೋಽತ್ರ ನಿರ್ದೇಶಃ ! ಸಾಕಾರ ನಿರಾಕಾರತ್ವೇ ಅಸ್ಯ ನೈಸರ್ಗಿಕೌ ವರ್ತೇತೇ ಇತಿ। ಜಗದುತ್ಪತ್ತಿ ಪಾಲನ ಪ್ರಲಯಾಂತಾಃ ಕ್ರಿಯಾಃ ಮಹಾಶಿಲ್ಪ ಮವ ಗತಂ । ತಾದೃಶ ಶಿಲ್ಪ ನಿಷ್ಪತ್ತಿ ಕ್ರಮಂ ಕಾರಣಂ ಚೋಪದೇಷ್ಟು ಮಾರಭತೇ ।**

'ತಸ್ಮಾನ್ನದ್ವಿತೀಯೋಽಸ್ತಿ' ಎಂಬ ಶ್ರುತಿ ವಚನದ ಅರ್ಥವು ಈ ದೇವ ನಿಗಿಂತಲು ಬೇರೆಯಾದವನು (ಎರಡನೆಯನು) ಇಲ್ಲ ಎಂಬುದಾಗಿದ್ದು, 'ದ್ವಿತೀಯಃ' ಎಂಬ ವಿಶೇಷಣದಿಂದ ಈ ದೇವನ ಏಕತ್ವವು ಸಿದ್ಧವಾಗಿ, ದ್ವಿತೀಯ ವಸ್ತುವು ಇಲ್ಲವೆಂಬುದು ಖಚಿತವಾಗುವುದು. ಇದರಿಂದಲೇ ಆ ಲೋಕಗಳ ಮತ್ತು ಬ್ರಹ್ಮಾಂಡಗಳ ಸೃಷ್ಟಿಕರ್ತನು ಈತನಿಗಿಂತಲೂ ಬೇರೆ ಯಾದವನು ಇಲ್ಲವೇ ಇಲ್ಲ ಎಂದು ಕರ್ತ್ರಂತರ ವ್ಯವಚ್ಛೇದವು ನಿಶ್ಚಿತವಾಗಿರು ತ್ತದೆ.

ಲೋಕದಲ್ಲಿ ಹಿರಿದಾದ ಕೆಲಸವನ್ನು ಮಾಡಲು ಬಹುಮಂದಿಯು ಪ್ರವೃತ್ತರಾಗುವರು. ಎಲ್ಲರೂ ಸೇರಿ ಕೆಲಸ ಮಾಡುತ್ತಾರೆ, ಆದ್ದರಿಂದ

ಜೀವರು ಅಜರಾಗಿರುವುದಾದರೆ ಜಗದ್ವೈಚಿತ್ರ್ಯವು ಅಕಾರಣಕವಾಗಿರುವುದು, ಜಗದ್ವೈಚಿತ್ರಕ್ಕೆ ಕಾರಣವು ಪೂರ್ವ ಜನ್ಮಗಳಲ್ಲಿ ನಡೆಸುವ ಕರ್ಮಗಳು. ಜಡವಾಗಿರುವ ಕರ್ಮಗಳು ಲೋಕದಲ್ಲಿ ಜಗದ್ವೈಚಿತ್ರ್ಯವುಂಟಾಗಲು ಕಾರಣ ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಚೇತನ ವಿಶಿಷ್ಟನಾದ ಕರ್ತೃವು ಕರ್ಮಗಳನ್ನು ಆಚರಿಸುತ್ತಾನೆ. ಅವನ ಕಾರ್ಯದಿಂದ ವೈಚಿತ್ರ್ಯ ಉಂಟಾಗಿರುವುದು. ಆದ ಕಾರಣ ಆಯಾಯ ಕಾರ್ಯಗಳು ಉಂಟಾಗಿರುವ ವಿಷಯದಲ್ಲಿ ಚೈತನ್ಯ ವಿಶಿಷ್ಟನಾದ ಕರ್ತೃವು ಇರಬೇಕು ಎಂದು ನಿಯತವಾಗಿ ತಿಳಿಯಬೇಕಾಗುತ್ತದೆ. ಇದರಿಂದ **ಯದ್ಯತ್ಕಾರ್ಯಂ ತತ್ತತ್ ಚೇತನ ಕರ್ತೃಕಂ** ಎಂದು ವ್ಯಾಪ್ತಿಯು ಸಿದ್ಧವಾಗುವುದು. ಈ ಪ್ರಕಾರವಾದ ವ್ಯಾಪ್ತಿಯಿಂದ ಜಗತ್ಕರ್ತೃತ್ವವನ್ನು ಈ ದೇವನಿಗೆ ತಾರ್ಕಿಕರು ಅನುಮಾನ ಪ್ರಮಾಣದಿಂದ ನಿಶ್ಚಯ ಮಾಡಿರುತ್ತಾರೆ. ಈಅಭಿಪ್ರಾಯವನ್ನೇ ಶ್ರುತಿಯಲ್ಲಿ ನಿರ್ಧೇಶನ ಮಾಡಿರುವುದು.

ಇಲ್ಲಿ 'ಅಖಿಲಾಜಾಂಡ ಕೋಟೀನಾಂ' ಎಂದು ನಿರ್ದೇಶನ ಮಾಡಿರುವುದರಿಂದ ಈ ದೇವನ ಶಕ್ತಿಯು ಅಪರಿಮಿತವಾದದ್ದು ಎಂದು ತಿಳಿಸುವುದಕ್ಕಾಗಿಯೇ ಈ ಪದವನ್ನು ಪ್ರಯೋಗಿಸಲಾಗಿದೆ. ಹದಿನಾಲ್ಕು ಲೋಕಗಳೂ ಕೂಡ ಅಸಂಖ್ಯಕವಾದ ವೈಚಿತ್ರ್ಯವುಳ್ಳ ಅನೇಕ ಕೋಟಿ ಜೀವರಿಂದ ತುಂಬಿ ಇರುತ್ತವೆ. ಹದಿನಾಲ್ಕೂ ಲೋಕಗಳೂ ಸೇರಿಕೊಂಡು ಊರ್ಧ್ವಾಧಃ ಪ್ರದೇಶದಲ್ಲಿ ಸಂಪುಟಿತವಾಗಿ ಒಂದು ಅಂಡವಾಗಿರುವುದು. ಈ ವಿಧವಾಗಿರುವ ಅಂಡಗಳು ಅನೇಕ ಕೋಟಿ ಸಂಖ್ಯೆಯಲ್ಲಿವೆ. ಇವುಗಳನ್ನು ಸೃಷ್ಟಿಮಾಡಲು ಅಪರಿಮಿತವಾದ ಶಕ್ತಿ ಇಲ್ಲದೆ ಆಗುವುದಿಲ್ಲ. ಈ ಪ್ರಕಾರವಾದ ಅಸಂಖ್ಯಾತವಾದ ಅಂಡಗಳ ಸೃಷ್ಟಿಯು ಆಗಿರುವುದರಿಂದ ಇದನ್ನು ಸೃಷ್ಟಿ ಮಾಡಿರುವ ಕರ್ತನೂ, ಅಪರಿಮಿತವಾದ ಮಹಿಮೆ ಉಳ್ಳವನೂ ಒಬ್ಬನು ಇರಲೇಬೇಕೆಂದು ನಂಬಬೇಕಾಗುತ್ತದೆ. ಇಲ್ಲಿ ಕಾರಣವಾದ ಕರ್ತೃ ಪದಾರ್ಥವನ್ನು ಕಾರ್ಯದ ಮೂಲಕವಾಗಿ ತಿಳಿಯಬೇಕಾಗುತ್ತದೆ. ಇದನ್ನು ಅನುಮಾನ ಪ್ರಮಾಣವೆಂದು ತರ್ಕಶಾಸ್ತ್ರವು ಅಂಗೀಕರಿಸುತ್ತದೆ. ಚತುರ್ದಶಲೋಕಾತ್ಮವಾದ ಅಂಡಗಳ ಸೃಷ್ಟಿಯನ್ನು ಅಪರಿಮಿತವಾದ ಮಹಿಮೆಯುಳ್ಳ ಚೇತನ ಕರ್ತೃವಿನ ಕೃತ್ಯವಾಗಿರುವುದರಿಂದ ಈದೇವನು ಈಬಗೆಯ ಸೃಷ್ಟಿಯನ್ನು ಮಾಡುವಾಗ ಬಹಳ

ಮಹಿಮೆ ಮಹತ್ಕಾರ್ಯವು ನೆರವೇರಲು ಕರ್ತೃಗಳು ಅನೇಕರು ಇರುತ್ತಾರೆ. ಆದರೆ ಅವರಲ್ಲಿ ಮುಖ್ಯನಾದನೊಬ್ಬನಿಗೆ ಮಾತ್ರವೇ ಮುಖ್ಯವಾದ ಕರ್ತೃತ್ವವು ಉಂಟಾಗುವುದು ಎಂದು ತಾರ್ಕಿಕರು ಅನುಮಾನ ಪ್ರಮಾಣದಿಂದ ನಿಶ್ಚಯ ಮಾಡುತ್ತಾರೆ. ಈ ವಿಧವಾದ ಗೌಣ ಮತ್ತು ಮುಖ್ಯ ಕರ್ತೃತ್ವವನ್ನು ಹೇಳಿ, ಆದರಲ್ಲಿ ವ್ಯವಚ್ಛೇದ್ಯ–ವ್ಯವಚ್ಛೇದಕ ಭಾವವನ್ನು ಹೇಳುವ ತಾರ್ಕಿಕರ ಸಮ್ಮತಿಯನ್ನು ದ್ವಿತೀಯ ವಿಶೇಷಣದಿಂದ ನಿರಾಸಗೊಳಿಸಿದ್ದಾರೆ. ದ್ವಿತೀಯಃ ಎಂಬುದಂರಿದ ಉಂಟು ಮಾಡುವುದಕ್ಕಾಗಿಯೇ. ಪುನರಾವೃತ್ತಿಯಿಂದ ಅಭ್ಯಾಸ ಮಾಡಬೇಕಾಗಿದೆ ಲೋಕದಲ್ಲಿ ಒಂದು ವಿಷಯವನ್ನು ಚೆನ್ನಾಗಿ ಮನದಟ್ಟು ಮಾಡಿಕೊಳ್ಳಲು ಅದನ್ನು ಅನೇಕ ಸಾರಿ ಅರಿಯುವ ಪ್ರಯತ್ನವನ್ನು ಮಾಡಬೇಕು–ಇದು ಲೋಕಾನುಭವ ಸಂಗತಿ. 'ಸ ಏವ ಕರ್ತಾ' ಎಂಬ [redacted] ಕಾರವು ಔಪಚಾರಿಕವಾದ ಅರ್ಥವನ್ನು ತಿಳಿಸುತ್ತದೆ ಎಂದು ಅರ್ಥಮಾಡಬಾರದು.

ಉಪನಿಷತ್ತಿನಲ್ಲಿ ಹೇಳಿರುವ ಅಭಿಪ್ರಾಯವನ್ನು ಉಪನಿಷತ್ತನ್ನು ತಿಳಿಯಲು ಇಚ್ಛಿಸುವವರು ಅದರ ಅರ್ಥವಿವರಣೆಯ ಮೂಲಕ ತಿಳಿಯುತ್ತಾರೆ. ಆದ್ದರಿಂದ ಉಪನಿಷತ್ತಿನಲ್ಲಿ ಪ್ರತಿಪಾದ್ಯನಾದ ದೇವರು ನಿರಾಕಾರನಾಗಿದ್ದರೂ ಈ ಮೊದಲು ಹೇಳಿರುವ ಪ್ರಮಾಣದಿಂದ ತನ್ನ ಸ್ವರೂಪವನ್ನು ತನ್ನ ಕಾರ್ಯದ ಮೂಲಕ ವ್ಯಕ್ತಗೊಳಿಸಿರುವನು **ನಿರಾಕಾರೋಪಿ ಸಾಕಾತ್ವಂ ವಿಧತ್ತೆ** ಎಂಬ ವಾಕ್ಯದಲ್ಲಿ **ವಿಧತ್ತೆ** ಎಂಬ ಪದಕ್ಕೆ ಪ್ರಪ್ನೋತಿ ಎಂದು ಅರ್ಥವನ್ನು ಹೇಳಿರುತ್ತದೆ ಇದರಿಂದ ಈತನು ನಿರಾಕಾರನೂ ಸಾಕಾರನಾಗಿಯೂ ಇರುವನು ಎಂದು ಅಭಿಪ್ರಾಯವಾಗಿರುತ್ತದೆ. ಆದ್ದರಿಂದ ಈತನು ಸಾಕಾರತ್ವವನ್ನು ವೃದ್ಧಿ ಮಾಡುವನು ಎಂದು ತಿಳಿಯಬೇಕು.

ಸಾಕಾರತ್ವಂ ವಿಧತ್ತೆ ಎಂಬ ವಾಕ್ಯದಲ್ಲಿರುವ **ವಿಧತ್ತೆ** ಎಂಬ ಪದಕ್ಕೆ ಉತ್ಪದ್ಯತೆ ಎಂದು ಅರ್ಥಹೇಳಿ ಉತ್ಪತ್ತಿ ಎಂಬುದು ವಿಹಿತವಾಗುತ್ತದೆ ಎಂದರೆ ಅದು ಶ್ರುತಿಯಲ್ಲಿ ಹೇಳಿರುವ ಅರ್ಥಕ್ಕೆ ವಿರೋಧವಾಗುತ್ತದೆ. ವಿಧಾನವೆಂಬುದು ಉತ್ಪಾದನೆ ಎಂದು ಹೇಳುವುದಾದರೆ ಮಡಿಕೆಯು ಉತ್ಪತ್ತಿಯಾಗುವುದಕ್ಕಿಂತಲೂ ಮೊದಲು ಮಡಿಕೆಯ ರೂಪವು ಇಲ್ಲದಿರುವಂತೆ ಆಕಾರವೂ

ಕೂಡ ಅಸ್ತಿತಾಗಿರುತ್ತದೆ ಎಂದು ಹೇಳಬೇಕು. ಈ ಕಾರಣದಿಂದಲೇ ಈ ದೇವನು ನಿರಾಕಾರನೂ ಸಾಕಾರನೂ ಆಗಿರುವುದು. ಈತನ ಸ್ವಭಾವವನ್ನು ವಿವರಿಸುತ್ತದೆ. ಸ್ವತಃ ಸಿದ್ಧಪಡಿಸಿದ.ಆಕಾರವನ್ನು ಹೊಂದುವಿಕೆಯು ಉತ್ಪತ್ತಿ ಎಂದು ಹೇಳುವ ಮಾತಿಗಿಂತಲೂ ಭಿನ್ನವಾದದ್ದು. ಆದ್ದರಿಂದ ವಿಭಕ್ತೆ ಎಂಬ ಪದಕ್ಕೆ ಪುಷ್ಟಾತಿ ಎಂಬ ಅರ್ಥವನ್ನು ಅಂಗೀಕರಿಸಿರುತ್ತದೆ. ಇದರಿಂದಲೇ ಈ ದೇವನು ಸಾಂಬಮೂರ್ತಿಯು ಆಕಾರದಿಂದ ಇರುವವನಾಗಿ ನಮ್ಮನ್ನು ರಕ್ಷಿಸಲಿ ಎಂದು ಸಾಕಾರತ್ವ ನಿರ್ದೇಶನ ಮಾಡಿರುತ್ತದೆ. ನಃ ಎಂಬ ಪದವು ನಮ್ಮನ್ನು ಎಂದು ಅರ್ಥವನ್ನು ಬೋಧಿಸುವುದು ನಃಎಂಬ ಪದಕ್ಕೆ ನಾವ್ಮನ್ನು ಎಂಬ ಅರ್ಥವಾದರೆ ನೀವು ಯಾರು ಎಂಬ ಪ್ರಶ್ನೆಯುಂಟಾಗುವುದು. ಗುರು ಸಂಘವು ಆಚಾರ್ಯ ಸಂಘವೂ ಕೂಡ ಯಾರು ಎಂಬ ಪ್ರಶ್ನೆಯನ್ನು ಎದುರಿಸ ಬೇಕಾಗುತ್ತದೆ. ನೌ ಎಂಬ ದ್ವಿವಚನದಿಂದ ರಕ್ಷಣೆಗೆ ಅರ್ಹರು ಎಂಬ ಅರ್ಥವನ್ನು ತಿಳಿಯುತ್ತೇವೆ. ಆ ರೀತಿಯಲ್ಲಿ ಪ್ರಸಿದ್ಧರಾದ ನಾವುಗಳು ಅನಾದಿಯಾದ ಗುರು ಸಂಘ. ಆಚಾರ್ಯ ಸಂಘವೆಂಬ ಎರಡು ಸಂಘಗಳು ತಮ್ಮ ತಮ್ಮ ರಕ್ಷಣೆಯನ್ನು ಪ್ರಾರ್ಥಿಸುವ ಹಾಗೆ ಶಿಷ್ಯ ಸಂಘಕ್ಕೂ ರಕ್ಷಣೆಯನ್ನು ಪ್ರಾರ್ಥಿಸುತ್ತಿರುವುದು.

ಪದಾವೃತ್ತಿ ರೂಪವಾದ ದೀಪಕಾಲಂಕಾರದಂತೆಯೇ ಗುರುವನ್ನೂ ರಕ್ಷಿಸಲಿ, ಶಿಷ್ಯನನ್ನೂ ರಕ್ಷಿಸಲಿ ಎಂದು ಶ್ರುತ್ಯರ್ಥವನ್ನು ಹೇಳಿರುತ್ತದೆ. ಈ ಅರ್ಥವು ಈ ಗ್ರಂಥದಲ್ಲಿ ಹಿಂದೆಯೇ ಹೇಳಲಾಗಿದೆ. ಹೀಗೆ ಹೇಳುವುದರಿಂದ ಕಾಲವು ಅನಾದಿಯಾಗಿ ಪ್ರವರ್ತಿಸುತ್ತಿರುವುದರಿಂದ ರಕ್ಷಣೆಯನ್ನು ಮಾಡುವ ಕ್ರಿಯಾಕರ್ತೃವಾಗಿರುವವನು ಸಾಂಬಮೂರ್ತಿಯೇ ಆಗಿರುವನು ಎಂದು ಸಿದ್ಧವಾಗಿರುತ್ತದೆ. ಸಾಂಬಮೂರ್ತಿಯು ನಿರಾಕಾರನಾಗಿಯೂ ಸಾಕಾರನಾಗಿಯೂ ಅನಾದಿಯಾಗಿಯೂ ಇರುವನು. ಸಾಕಾರ ನಿರಾಕಾರಗಳು ನೈಸರ್ಗಿಕವಾದುವು. ಆಯಾಯ ಅಧಿಕಾರಿಗಳ ಅನುಗ್ರಹಕ್ಕಾಗಿ ಇರುವುದು. ಕೆಲವರು ಸಾಕಾರವನ್ನು ಧ್ಯಾನಮಾಡುವರು, ಕೆಲವರು ನಿರಾಕಾರವನ್ನು ಧ್ಯಾನ ಮಾಡುವರು. ಇವರಿಬ್ಬರಿಗೂ ಅನುಗ್ರಹವನ್ನು ಉಂಟು ಮಾಡುವುದಕ್ಕಾಗಿಯೇ ಭಾವ ಪ್ರಧಾನವಾದ ನಿರ್ದೇಶನವನ್ನು ಮಾಡಲಾಗಿದೆ.

4]

ಜಗದುದಯಕಾರಣಂ ತನ್ಮನೋ ಜಾಯತೇ ।೧೧
ಮನಸ್ಸಂಕಲ್ಪಾತ್ಸರ್ವಂ ಕಲ್ಪಿತಂ ಭವತಿ । ೧೨
ತದೇವೈವಂ ಪ್ರಾರಭ್ಯತೇ ಜಗಚ್ಛಿಲ್ಪಂ । ೧೩

ಜಗದುದಯ ಕಾರಣಂ ತನ್ಮನೋ ಜಾಯತ ಇತ್ಯಾದಿನಾ। ನೈ [redacted] ಕೋಟಿಕೋಟಿಯೋ ಜೀವಾಃ ಸ್ಥಾವರಾಃ ಕ್ರಿಮಯಃ ಅಬ್ಜಾಃ ಪಕ್ಷಿಣಃ ಪಶವಃ ನರಾಃ ಸಹಸ್ರ ಪೂರ್ವಾಃ । ಯದ್ಯೇಕೋ ನರಸ್ತರ್ಹಿ ಸಹಸ್ರಂ ಪಶವಃ। ಯದ್ಯೇಕಃ ಪಶುಸ್ತರ್ಹಿ ಸಹಸ್ರಂ ಪಕ್ಷಿಣಃ । ಯದ್ಯೇಕಃ ಪಕ್ಷೀ ತರ್ಹಿ ಸಹಸ್ರಮಬ್ಜಾಃ । ಯದ್ಯೇಕೋಽಬ್ಧಸ್ತರ್ಹಿ ಸಹಸ್ರಂ ಕ್ರಿಮಯಃ । ಯದ್ಯೇಕಃ ಕ್ರಿಮಿಸ್ತರ್ಹಿ ಸಹಸ್ರಂ ಸ್ಥಾವರಾ ಇತಿ ತದರ್ಥಃ । ಯದಾಹುಃ—ಸ್ಥಾವರಾಃ ಕ್ರಿಮಯೋ ಹ್ಯಬ್ಜಾಃ ಪಕ್ಷಿಣಃ ಪಶವೋ ನರಾಃ। ಸಹಸ್ರಪೂರ್ವತಸ್ತೇಷಾಂ ಗಣನಾ ಪರಿಕೀರ್ತಿತೇತಿ । [redacted] ಏತೇ ಜಗತ್ಪದಾರ್ಥಾಃ। ಪುನಃ ಪುನರ್ಜ್ಞಾತ ರೂಪದತದರ್ಥ ಯೋಗಾತ್। ತೇಷಾಂ ಚ ಪ್ರಲಯೇ ಸ್ವಕರ್ಮ ನಿಮಿತ್ತೇ ಜಾತೇ ಯದಾ ಜಗದುದಯ ಕಮೋರ್ದ್ಯೋಧಸ್ತದಾ ಸ ಸಾಂಬಮೂರ್ತಿಃ ಸ್ವಸ್ವರೂಪಾನು ಸಂಧಾನಾತ್ಪ್ರಚ್ಯುತಃ ಸ್ಯಾತ್ತತಶ್ಚೇತಿ ಆದಿಭಾಗೋಽಸ್ಯಾಃ ಶ್ರುತೇರನುಸಂಜನೀಯಃ। ನಮನಸಃ ಸ್ವರೂಪತ ಉತ್ಪತ್ತಿ ಅಪಿ ತರ್ಹಿ ಜಗದುದಯ ಕಾರಣತಯಾವ ಸ್ಥಾನ ಮಿತ್ಯರ್ಥಃ। ಕೀ ದೃಶೀ ಸಾವಸ್ಥೇತಿ ಜಿಜ್ಞಾಸಾಯಾಮಾಹ। ಮನಸ್ಸಂಕಲ್ಪಾತ್ಸರ್ವಂ ಜಗತ್ಸಂಕಲ್ಪಿತಂ ಭವತೀತಿ । ತದಿಚ್ಛಯೈವ ಸರ್ವಂ ಜಗತ್ಸೃಷ್ಟಂ ಭವತಿತ್ಯರ್ಥಃ। ಯಥಾ ಹಿ 'ಸರ್ವಂ ಜಗತ್ಕರೋಮೀತಿ' ಮಾನಸೀ ವೃತ್ತಿ [redacted] ಸಂಕಲ್ಪಃ । ನೈಷಾ ಪುನರಿಚ್ಛಾಂ ವಿನೋತ್ಪದ್ಯತ [redacted] ತದಭಿಸಂಧಿಃ। ಜ್ಞಾನಂ ಇಚ್ಛಾ ತದನು ಸಂಕಲ್ಪಂ [redacted] ಕ್ರಮಾತ್ಸರ್ವಂ ಜಗತ್ ಸಮ್ಯಕ್ಕಲ್ಪಿತಂ ಭವತೀತಿ ಚ ಸಮ್ಯಕ್ಕೃತಂ ಭವತೀತಿ ಬೋಧಾತ್। ಯ [redacted] ಸಂಕಲ್ಪೋ ನೈಕ ಶ್ರುತಿ ವೇದಿತೋಽಯಂ ಸಾಂಬಸ್ಯ ಜಗಚ್ಛಿಲ್ಪ

**ಕ್ರಮ [redacted] ನಿದರ್ಶಯಿತುಂ ಕಾಚಿಚ್ಛ್ರುತಿಃ ಪ್ರದರ್ಶ್ಯತ ಇತ್ಯಾಹ। ತದೇವೈವಂ ಜಗಚ್ಛಿಲ್ಪಂ ಪ್ರಾರಭ್ಯತ ಇತಿ। ಯಚ್ಛಿಲ್ಪಮುಪಕ್ರಾಂತಂ ತದೇವ। ಏವಂ ಅತ್ರ ಶ್ರುತಾವುಕ್ತ ಪ್ರಕಾರೇಣೈವ ಪ್ರಾರಭ್ಯತೇ। ಶ್ರುತ್ಯಂತರೇಽಪೀತಿ ಶೇಷೋಽನುಷಂಜನೀಯಃ। ಕಾ ಸಾ ಶ್ರುತಿಃ ? ತಾಮಾಹ ಯ ಇಮೇತಿ।**

ಜಗತ್ತಿನ ಉತ್ಪತ್ತಿ ಪಾಲನೆ ನಾಶ ಮುಂತಾದ ಕಾರ್ಯಗಳು ಮಹಾಶಿಲ್ಪ ಜ್ಞಾನವನ್ನು ಬೋಧಿಸುವುದು. 'ಜಗದುದಯ ಕಾರಣಂ ತನ್ನನೋಽಜಾಯತ' ಎಂಬ ವಾಕ್ಯದಿಂದ ಶಿಲ್ಪವಿದ್ಯಾರಹಸ್ಯವನ್ನು ಈ ಶ್ರುತಿಯು ಉಪದೇಶ ಮಾಡಲು ಪ್ರಾರಂಭಿಸುತ್ತದೆ. ಜೀವರು ಅನೇಕ ಕೋಟಿ ಸಂಖ್ಯೆಯುಳ್ಳವರು. ಇವರಂತೆಯೇ ಕ್ರಿಮಿಗಳು, ಸ್ಥಿರವಾದ ಪ್ರಾಣಿಗಳು, ನೀರಿನಲ್ಲಿ ಬೆಳೆಯುವ ಪ್ರಾಣಿಗಳು, ಪಕ್ಷಿಗಳು, ಪಶುಗಳು, ಮನುಷ್ಯರು ಎಂಬ ಈ ಪ್ರಾಣಿವರ್ಗಗಳೆಲ್ಲವೂ ಸಾವಿರ ಗಟ್ಟಲೆಯಾಗಿ ಉತ್ಪತ್ತಿಯುಳ್ಳವರಾಗಿರುವರು. ಮನುಷ್ಯನು ಒಬ್ಬನು ಇದ್ದಲ್ಲಿ ಸಾವಿರ ಪಶುಗಳು ಇರುವವು. ಪಶುವು ಒಂದು ಇದ್ದಲ್ಲಿ ಸಾವಿರ ಪಕ್ಷಿಗಳು ಇರುವವು. ಒಂದು ಪಕ್ಷಿ ಇರುವಾಗ ಸಾವಿರ ಜಲಚರಗಳು ಇರುವವು. ಒಂದು ಜಲಚರ ಪ್ರಾಣಿ ಇರುವಾಗ ಸಾವಿರ ಕ್ರಿಮಿಗಳು ಇರುವವು. ಒಂದು ಕ್ರಿಮಿ ಇರುವಾಗ ಸಾವಿರ ಸ್ಥಿರ ಪ್ರಾಣಿಗಳು ಇರುವವು ಎಂದು ಅಭಿಯುಕ್ತವಚನವು ಹೇಳುತ್ತದೆ. ಪಶು ಪಕ್ಷಿ ಕ್ರಿಮಿ ಸ್ಥಾವರ ಜಲಚರ ನರ ಎಂಬ ಪ್ರಾಣಿಗಳ ಗಣನೆಯು ಸಹಸ್ರ ಪೂರ್ವಕವಾಗಿರುತ್ತದೆ. ಇದೇ ಅರ್ಥವನ್ನು—

ಸ್ಥಾವರಾಃ ಕ್ರಿಮಯೋಽಪ್ಯಬ್ಜಾಃ ಪಕ್ಷಿಣಃ ಪಶವೋ ನರಾಃ।
ಸಹಸ್ರ ಪೂರ್ವತಸ್ತೇಷಾಂ ಗಣನಾ ಪರಿಕೀರ್ತಿತಾ॥

—ಎಂಬ ಶ್ಲೋಕವು ಬೋಧಿಸುತ್ತದೆ. ಈ ವಿಧವಾಗಿ ಪ್ರಾಣಿಗಳು ಸೇರಿರುವ ಸಮುದಾಯವನ್ನೂ, ಪ್ರಾಣಿಗಳಿಗೆ ಆಶ್ರಯವಾಗಿರುವುದನ್ನೂ ಜಗತ್ತೆಂದು ಕರೆಯುತ್ತಾರೆ. ಈ ಪ್ರಾಣಿಗಳು ಉತ್ಪನ್ನವಾದ ನಂತರ ಅವುಗಳ ಸ್ಥಿತಿಯು ಆಯಾ ಪ್ರಾಣಿಗಳ

ಕರ್ಮಾನುಸಾರವಾಗಿ ಇರುತ್ತದೆ. ಜಗತ್ತಿನ ಪ್ರಳಯ ಕಾಲದಲ್ಲಿ ಪ್ರಾಣಿಗಳ ನಾಶಕ್ಕನುಸಾರವಾಗಿ ಆಯಾ ಪ್ರಾಣಿಗಳ ಕರ್ಮಗಳು ನಿಮಿತ್ತವಾಗುವುವು. ಪುನಃ ಜಗತ್ತಿನ ಸೃಷ್ಟಿಯುಂಟಾದಾಗ ಆಯಾ ಪ್ರಾಣಿಗಳ ಕರ್ಮವನ್ನು ಅನುಸರಿಸಿ ಉದ್ಭೋಧವಾಗುತ್ತವೆ. ಆಗ ಈ ದೇವನು ತನ್ನ ಸ್ವರೂಪವನ್ನು ಧ್ಯಾನ ಮಾಡುವುದರಿಂದ ಎಚ್ಚರಗೊಳ್ಳುತ್ತಾನೆ. ಸಾಂಬಮೂರ್ತಿಯ ಸ್ವಸ್ವರೂಪ, ಪ್ರಜ್ಯೋತಿಯು ಜಗತ್ತಿನಉತ್ಪತ್ತಿಗೆ ಕಾರಣವಾದ ಸಂಕಲ್ಪಾವಸ್ಥೆಯಾಗಿರುತ್ತದೆ. ಈ ಅವಸ್ಥೆಯು 'ಮನಸ್ಸಂಕಲ್ಪಾತ್ಸರ್ವಂ ಜಗತ್ ಸಂಕಲ್ಪಿತಂ ಭವತಿ' ಎಂದು ಶ್ರುತಿಯಲ್ಲಿ ಬೋಧಿತವಾಗಿದೆ. ಮನಸ್ಸೆಂಬುದಾಗಿ ಪ್ರತ್ಯೇಕವಾದ ಸ್ವರೂಪದಿಂದ ಮನಸ್ಸಿನ ಉತ್ಪತ್ತಿಇರುವದಿಲ್ಲ ಎಂಬುದನ್ನು ಸ್ಪಷ್ಟವಾಗಿ ಅರಿಯಬೇಕು ಸಾಂಬಮೂರ್ತಿ ಸ್ವಸ್ವರೂಪಾನು ಸಂಧಾನದಿಂದ ಪ್ರತ್ಯುತಾವಸ್ಥೆಯು ಜಗದುದಯ ಕಾರಣರೂಪದಿಂದ ಇರುವದು. ಸಾಂಬಮೂರ್ತಿಯು ಇಚ್ಛೆಯಿಂದಲೇ ಜಗತ್ತೆಲ್ಲವೂ ಸೃಷ್ಟಿಯಾಗಿರುವದು. ಜಗತ್ತೆಲ್ಲವನ್ನೂ ನಿರ್ಮಿಸುತ್ತೇನೆ ಎಂಬ ಮನಸ್ಸಿನ ವೃತ್ತಿಯು ಇಚ್ಛೆಯಿಲ್ಲದೆ ಉಂಟಾಗುವದಿಲ್ಲ. ಆದ್ದರಿಂದ ಇಚ್ಛಾಪೂರ್ವಕ ವೃತ್ತಿಯು ಸಂಕಲ್ಪವೆನಿಸಿರುತ್ತದೆ. ಮೊದಲು ಪ್ರಪಂಚವನ್ನು ಸೃಷ್ಟಿಸಬೇಕೆಂದು ಸಾಮಾನ್ಯವಾಗಿ ಒಂದು ಜ್ಞಾನವು ಉಂಟಾಗುತ್ತದೆ ಅನಂತರ ಅದು ದೃಢವಾಗಿ ಇಚ್ಛೆಯೆನಿಸುವದು, ಅದೇ ಇನ್ನೂ ದೃಢವಾಗಿ ಸಂಕಲ್ಪವೆನಿಸುತ್ತದೆ ಈ ಸಂಕಲ್ಪದಿಂದಲೇ ಒಂದು ಕಾರ್ಯವು ನಿರ್ವಹಿಸಲ್ಪಡುತ್ತದೆ. ಹೀಗೆಯೇ ಸಾಂಬಮೂರ್ತಿಯು ತನ್ನ ಮನಸ್ಸಿನ ವೃತ್ತಿ, ಜ್ಞಾನ, ಇಚ್ಛೆ, ಸಂಕಲ್ಪಗಳಿಂದ ಜಗತ್ತೆಲ್ಲವನ್ನೂ ಚೆನ್ನಾಗಿರುವಂತೆ ಕಲ್ಪಿಸಿರುವನು. ಇದರಿಂದಲೇ ಜಗತ್ತು ಚೆನ್ನಾಗಿ ಸೃಷ್ಟಿಮಾಡಲ್ಪಟ್ಟಿರುವದು ಎಂದು ತಿಳಿಯಬೇಕು.

ಈ ಪ್ರಕಾರವಾದ ಸಂಕಲ್ಪವು ಒಂದು ಶ್ರುತಿಯಿಂದಲೇ ತಿಳಿಯುವುದು ಅಸಾಧ್ಯವಾಗಿರುತ್ತದೆ. ಆದ್ದರಿಂದ ಅನೇಕ ಶ್ರುತಿಗಳಿಂದ ಸಾಂಬನು ಸೃಷ್ಟಿ ಮಾಡಿರುವ ಈ ಜಗಚ್ಛಿಲ್ಪ ಕ್ರಮವನ್ನು ನಾವು ತಿಳಿಯ ಬೇಕಾಗಿರುತ್ತದೆ. ಇದೇ ಉದ್ದೇಶದಿಂದಲೇ ಇಲ್ಲಿ ಒಂದು ಶ್ರುತಿಯನ್ನು ನಿರ್ದೇಶಿಸಲಾಗಿದೆ. ಜಗತ್ತಿನ ಸೃಷ್ಟಿಯೇ ಶಿಲ್ಪವಾಗಿದ್ದು ಅದನ್ನು ಜಗಚ್ಛಿಲ್ಪವೆನ್ನುತ್ತಾರೆ. ಆದ್ದರಿಂದ **ಶಿಲ್ಪವು** ಜಗಚ್ಛಿಲ್ಪದಿಂದಲೇ ಪ್ರಾರಂಭವಾಗಿದೆಯೆಂದೂ, ಇಲ್ಲಿ

ನಿರ್ದೇಶಿತವಾಗಿರುವ ಪ್ರಕಾರದಂತೆಯೇ ಇತರ ಶ್ರುತಿಗಳಲ್ಲೂ ಉಕ್ತವಾಗಿರುವಿದು ಎಂದೂ ತಿಳಿಯಬೇಕು. **ಯ ಇಮಾ**....ಎಂಬುದಾಗಿ ಆ ಶ್ರುತಿಯು ಪ್ರಾರಂಭವಾಗುತ್ತದೆ.

**ಯ ಇಮಾ ವಿಶ್ವಾ ಭುವನಾನಿ ಜುಹ್ವ**
**ದೃಷಿ ರ್ಹೋತಾ ನಿಷಸಾದಾ ಪಿತಾ ನಃ |**
**ಸ ಆಶಿಷಾ ದ್ರವಿಣ ಮಿಚ್ಛಮಾನಃ**
**ಪ್ರಥಮಚ್ಛದೋವರ ಆ ವಿವೇಶ ||೧೪**

[ಸೃಷ್ಟಿ ಸೂಕ್ತಗಳಲ್ಲಿ ಪ್ರಮುಖವಾದ ವಿಶ್ವಕರ್ಮ ಸೂಕ್ತದ ಈ ಮೊದಲ ಋಕ್ ಬಹು ಪ್ರಧಾನವಾಗಿದ್ದು ಈ ಋಕ್ಕಿನ ಬಗ್ಗೆ ವಿಶೇಷ ತಿಳಿವನ್ನು ಪಡೆಯುವುದು ಈ ಉಪನಿಷತ್ತನ್ನು ಅರಿಯಲು ಅವಶ್ಯಕ. ಸಾಯಣಾದಾದಿ ಆಚಾರ್ಯರ ಭಾಷ್ಯಗಳ ಅನ್ವಯದ ಪ್ರಕಾರ ಈ ಬಗ್ಗೆ ವಿಶೇಷ ವಿವರಣೆಯನ್ನು ಇಲ್ಲಿ ಕೊಡಲಾಗಿದೆ. ಈ ವಿವರಣೆಯ ನಂತರ ಕೌಮಾರ ಭಾಷ್ಯ ಮತ್ತು ಅದರ ಅನುವಾದವನ್ನು ಮುಂದುವರಿಸಲಾಗಿದೆ. ಈ ಅಂಶವನ್ನು ವಾಚಕರು ಗಮನಿಸಬೇಕಾಗಿ ಕೋರಿದೆ—

ಋಗ್ವೇದದ ಹತ್ತನೆಯ ಮಂಡಲದ ೮೧ ಮತ್ತು ೮೨ನೇ ಸೂಕ್ತಗಳಲ್ಲಿ, ಯಜುರ್ವೇದ ತೈತ್ತಿರೀಯ ಸಂಹಿತೆಯಲ್ಲಿ, ಶುಕ್ಲಯಜುರ್ವೇದದಲ್ಲಿ ಈ ಸೂಕ್ತಗಳ ಕಿಂಚಿತ್ ಭೇದದೊಂದಿಗೆ ಇವೆ. ಪ್ರಸ್ತುತ ಉಕ್ತವಾಗಿರುವುದು ಯಜುರ್ವೇದೀಯ ಸೂಕ್ತವು. ಇವುಗಳ ದ್ರಷ್ಟಾರ ಭೌವನ ವಿಶ್ವಕರ್ಮನು. ಈ ಸೂಕ್ತಗಳು ವಿಶ್ವಕರ್ಮ ಎಂಬ ಹೆಸರಿನ ದೇವತಾ ಪ್ರಶಂಸೆಯನ್ನೊಳಗೊಂಡಿವೆ. ಈ ಸೂಕ್ತಗಳ ಮಂತ್ರಗಳನ್ನು ಯಜ್ಞಪರವಾಗಿಯೂ ಮತ್ತು ಆಧ್ಯಾತ್ಮಪರವಾಗಿಯೂ ಸಾಯಣಾದಿ ಭಾಷಾಚಾರ್ಯರು ವಿವರಿಸಿದ್ದಾರೆ. ಅಘಮರ್ಷಣ, ಪ್ರಜಾಪತಿ, ಪರಮೇಷ್ಠಿ, ಬ್ರಹ್ಮಣಸ್ಪತಿ, ದೀರ್ಘ ತಮಸ್, ಹಿರಣ್ಯಗರ್ಭ ಇತ್ಯಾದಿ ಋಷಿಗಳಿಂದ ಪ್ರಣೀತವಾದ ಸೂಕ್ತಗಳೆಲ್ಲವೂ ಜಗತ್ತಿನ ಸೃಷ್ಟಿ ಮತ್ತು ಸ್ಥಿತ್ಯಾದಿಗಳ ವಿಷಯದಲ್ಲಿ ಬೇರೆ ಬೇರೆ ವಿವರಣೆಗಳನ್ನು ಹೇಳುತ್ತವೆ. ಆದರೆ, ಮುಖ್ಯ ವಿಷಯಗಳಲ್ಲಿ ಮಾತ

ಅವೆಲ್ಲವೂ ಸಮಾನವಾಗಿರುತ್ತವೆ. **ತಮಿದ್ಗರ್ಭಂ ಪ್ರಥಮಂ ದಧ್ರ ಅಪಃ** (ಋ ಸಂ. ೧೦-೮೨-೬) ಎಂಬ ವಿವರಣೆಯು ಭೌವನ ವಿಶ್ವಕರ್ಮ ಋಷಿಯ ಮತವನ್ನು ತಿಳಿಸುತ್ತದೆ. ಪ್ರಧಮತಃ, ವಿಶ್ವಕರ್ಮನ ಸ್ವರೂಪವೇನು ? ಸೃಷ್ಟವಾದ ಜಗತ್ತಿಗೂ ಅವನಿಗೂ ಇರುವ ಸಂಬಂಧವೇನು? ಇತ್ಯಾದಿ ವಿಷಯ ಗಳನ್ನು ಈ ಸೂಕ್ತದಲ್ಲಿ ವಿವರಿಸಲಾಗಿದೆ.

ಸಕಲವನ್ನೂ ಸೃಷ್ಟಿಸಿರುವುದರಿಂದ ಈತನಿಗೆ ವಿಶ್ವಕರ್ಮನೆಂದು ಹೆಸರು[1] ಎಂದು ನಿರುಕ್ತಕಾರರ ನಿರ್ವಚನವಿರುತ್ತದೆ. ದುರ್ಗಾಚಾರ್ಯರು ಇದನ್ನು ವಿವರಿಸುತ್ತ[2] ಹಿಂದೆ ನಿರ್ಮಿತವಾಗಿದ್ದುದು ಈಗ ಸಂಭವಿಸುತ್ತಿರುವುದು, ಇನ್ನು ಮೇಲೆ ನಿರ್ಮಿತವಾಗ ತಕ್ಕದ್ದು ಇವೆಲ್ಲವನ್ನೂ ಉತ್ಪನ್ನ ಮಾಡಿ ಸಂಸ್ಕರಿ ಸುವುದರಿಂದ ಈತನಿಗೆ ವಿಶ್ವಕರ್ಮಾ ಎಂಬ ಹೆಸರು ಎಂದು ತಿಳಿಸಿದ್ದಾರೆ. ಬೃಹದ್ದೇವತಾ ಕೂಡ ಈ ಪದದ ನಿರ್ವಚನವನ್ನು ಬೇಸಿಗೆ ಕಾಲವು ಕಳೆದ ನಂತರ ನೀರಿನಿಂದ ಭೂಮಿಯನ್ನು ಫಲವತ್ತನ್ನಾಗಿ ಮಾಡಿ ವಿಶ್ವದಲ್ಲಿ ಸಕಲ ವಿಧವಾದ ಕರ್ಮವನ್ನೂ ಆರಂಭಿಸುವಂತೆ ಮಾಡುತ್ತಾನೆ. ಆದುದರಿಂದ ವಿಶ್ವ ಕರ್ಮನೆಂದು ಹೆಸರು[3] ಎಂದು ವಿವರಿಸಿದೆ.

ವಿಶ್ವಕರ್ಮನಿಗೆ ಭೌವನನೆಂಬ ವಿಶೇಷಣವೂ ಇರುತ್ತದೆ. ಇದರಿಂದ ಈತನು ಭುವನನ ಪುತ್ರನೆಂದು ಅರ್ಥವಾಗುತ್ತದೆ ಇದಕ್ಕೆ ಆಧ್ಯಾತ್ಮಿಕಪರವಾಗಿ ಅರ್ಥವನ್ನು ಹೇಳುವಾಗ ಸಕಲ ಭುವನಗಳಲ್ಲಿಯೂ ಸಕಲ ಭೂತಜಾತಗಳಲ್ಲಿಯೂ, ತಾನೇ ಪ್ರವೇಶಿಸಿ, ಅವೆಲ್ಲವನ್ನು ತನ್ನಲ್ಲೇ ಅಡಗಿಸಿಕೊಂಡುದರಿಂದ ವಿಶ್ವಕರ್ಮನಿಗೆ

---

1 ವಿಶ್ವಕರ್ಮಾ ಸರ್ವಸ್ಯ ಕರ್ತಾ (ನಿರುಕ್ತ ೧೦-೨೫)

2 ಯದಿದಂ ಕಿಂಚಿದ್ಭೂತಂ ಭವಿಷ್ಯಮಾಣಂ, ಕ್ರಿಯಮಾಣಂ [illegible] ತಸ್ಯ ಸರ್ವಸ್ಯಕರ್ತಾ । (ನಿರುಕ್ತ ಭಾಷ್ಯ ೧೦-೨೫)

3 'ನಿದಾಘವಾಸಾತಿಗವೋ ಯದ್ವೃತೇನಾವತಿ ಕ್ಷಿತಿಂ ।
ವಿಶ್ವಸ್ಯ ಜನಯನ್ಕರ್ಮ-ವಿಶ್ವಕರ್ಮೈಷ ತೇನಸಃ॥ (ಬೃಹದ್ದೇವತಾ ೨-೫೦)

**ಭೌವನ** ಎಂಬ ವಿಶೇಷಣವು ಪ್ರಸಿದ್ಧವಾಗಿದೆ[4]ಯೆಂದು ಹೇಳಲಾಗುತ್ತದೆ. ಸಕಲಲೋಕಕ್ಕೂ ಪ್ರಭುವಾಗಿರುವುದರಿಂದ ಈತನೇ ಇಂದ್ರನು. ಮೂರು ಲೋಕಗಳಲ್ಲೂ ವ್ಯಾಪ್ತಿಯಿರುವುದರಿಂದ ಈತನೇ ಅಗ್ನಿಯು, ಇತ್ಯಾದಿ ಪ್ರಶಂಸೆಗಳೂ ಅನೇಕವಾಗಿರುತ್ತವೆ.

ಇಂದ್ರನೇ ವಿಶ್ವಕರ್ಮರೂಪದಿಂದ ತನ್ನ ಕರ್ತವ್ಯವನ್ನು ನೆರವೇರಿಸಿದನು ಎಂಬುದಕ್ಕೆ ಐತರೇಯ ಬ್ರಾಹ್ಮಣದಲ್ಲಿ ಐತಿಹಾಸಿಕವಾದ ಸಂದರ್ಭವು ಹೇಳಲ್ಪಟ್ಟಿದೆ. ಈ ಸಂದರ್ಭದಲ್ಲಿ ವಿಶ್ವಕ್ಕೆಲ್ಲ ಸೃಷ್ಟಿಕರ್ತನಾದ ಪ್ರಜಾಪತಿಗೂ ವಿಶ್ವಕರ್ಮನಿಗೂ ತಾದಾತ್ಮ್ಯವನ್ನು ತಿಳಿಸಿದೆ. ಇಂದ್ರನು ವೃತ್ರನನ್ನು ಕೊಂದು ವಿಶ್ವಕರ್ಮರೂಪವನ್ನು ಪಡೆದನು. ಪ್ರಜಾಪತಿಯು ಪ್ರಜೆಗಳನ್ನು ಸೃಜಿಸಿ ವಿಶ್ವಕರ್ಮನಾದನು. ವಿಶ್ವಕರ್ಮನೇ ಸಂವತ್ಸರಾತ್ಮಕನು. ಇಂದ್ರನೂ ಸಂವತ್ಸರಾತ್ಮಕನು. ಆದುದರಿಂದ ಇಂದ್ರನ ಅನುಸಂಧಾನದಿಂದ, ಸಂವತ್ಸರ, ಪ್ರಜಾಪತಿ ಮತ್ತು ವಿಶ್ವಕರ್ಮ ಇವರ ಸಾಕ್ಷಾತ್ಕಾರವಾಗುತ್ತದೆ. ಕೊನೆಯಲ್ಲಿ ಇವರ ಆಶ್ರಯವೇ ಯಜಮಾನನ್ನು ರಕ್ಷಿಸುತ್ತದೆ. ಈ ತತ್ತ್ವವನ್ನರಿತವನಿಗೆ ದೃಢವಾದ ಆಶ್ರಯವು ಖಂಡಿತ ಎಂದು ಸಾರಿದೆ.

ಸಕಲ ಜಗತ್ತಿಗೂ ಮೂಲವಾದ ಪ್ರಜಾಪತಿಯೇ ಈ ವಿಶ್ವಕರ್ಮನು—

---

4 ವಿಶ್ವಕರ್ಮಾ ಭುವನಾನಾಂ ಭೂತಾನಾಮಾತ್ಮನಿ ಹೋತಾ ಭೂತೇಷು ಚಾತ್ಮಾನಂ ತಥಾ ಹಿ ವಿಜ್ಞಾಯತೇ; ಹಂತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನಿ ಚಾತ್ಮನಿ। (ಶತಪಥ ಬ್ರಾಹ್ಮಣ_೧೩.೭.೧.೧)

5 ಇಂದ್ರೋ ವೈ ವೃತ್ರಂ ಹತ್ವಾ ವಿಶ್ವಕರ್ಮಾಭವತ್ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ವಿಶ್ವಕರ್ಮಾಭವತ್ಸಂವತ್ಸರೋ ವಿಶ್ವಕರ್ಮೇಂದ್ರಮೇವ ತದಾತ್ಮಾನಂ ಪ್ರಜಾಪತಿಂ ಸಂವತ್ಸರಂ ವಿಶ್ವಕರ್ಮಾಣಮಾಪ್ನುವಂತೀಂದ್ರ ಏವ ತದಾತ್ಮನಿ ಪ್ರಜಾಪತೌ ಸಂವತ್ಸರೇ ವಿಶ್ವಕರ್ಮಣ್ಯಂತತಃ ಪ್ರತಿಷ್ಠಂತಿ...। (ಐತರೇಯ ಬ್ರಾಹ್ಮಣ ೪-೨೨)

ರಸೋ ವಾ ಊರ್ಜ್ವಿರ್ವಿಶ್ವಕರ್ಮಾ ತ ಋಷಿರಿತಿ ಪ್ರಜಾಪತಿರ್ವೈ ವಿಶ್ವಕರ್ಮಾ ಪ್ರಜಾತಿ ಸೃಷ್ಟ್ವಾಸಿ ॥[6]

ವಿಷ್ಟಂಭೋ ವಯ ಇತಿ । ಪ್ರಜಾಪತಿರ್ವೈ ವಿಷ್ಟಂಭಃ ಸವಯೋಽಭವದಧಿಪತಿ ಶ್ಛಂದ ಇತಿ ಪ್ರಜಾಪತಿರ್ವಾ ಅಧಿಪತಿಃ ಪ್ರಜಾಪತಿರೇವಚ್ಛಂದೋಽಭವತ್ । ವಿಶ್ವ ಕರ್ಮಾ ವಯ ಇತಿ। ಪ್ರಜಾಪತಿರ್ವೈ ವಿಶ್ವಕರ್ಮಾ ವಯೋಽಭವತ್॥ [7]

ಪ್ರಜಾಪತಿರ್ವೈ ವಿಶ್ವಕರ್ಮೇತಿ । ಪ್ರಜಾಪತಿರ್ವೈ ವಿಶ್ವಕರ್ಮಾ । ಸ ಹೀದ ಗ್ಂ ಸರ್ವಮಕರೋನ್ನನೋ ಗಂಧರ್ವಸ್ತಸ್ಯ ಋಕ್ಸಾಮಾನ್ಯಪ್ಸರಸಃ.... ॥[8]

—ಇತ್ಯಾದಿ ವಾಕ್ಯಗಳಲ್ಲಿ ಪ್ರಜಾಪತಿಗೂ ವಿಶ್ವಕರ್ಮನಿಗೂ ತಾದಾತ್ಮ್ಯ ವನ್ನು ತಿಳಿಸಿದೆ. ವಿಶ್ವಕ್ಕೆ ನಾಭಿರೂಪವಾದ ಯಜ್ಞಕ್ಕೆ ವಿಶ್ವಕರ್ಮರೂಪನಾದ ಪ್ರಜಾಪತಿಯೇ ಅವಷ್ಟಂಭಕವು (ಅಶ್ರಯವು). ವಿಶ್ವವ್ಯವಹಾರಕ್ಕೆ ಆಧಾರ ಭೂತನಾದ ಯಜ್ಞಕ್ಕೆ ವಿಶ್ವಕರ್ಮನೇ ಆಶ್ರಯವೆಂದಾಯಿತು. ಈ ಆಧಾರವೇ ಶಕ್ತಿರೂಪವು (ಶಕ್ತಿಯಿಲ್ಲದಿದ್ದರೆ ಆಶ್ರಯವಿಲ್ಲ). ಆದುದರಿಂದ ಯಜ್ಞ ತತ್ತ್ವಕ್ಕೆ ಆಧಾರನಾದ ಪ್ರಜಾಪತಿಯೇ ಈ ಶಕ್ತಿ ಸ್ವರೂಪನು. ಪ್ರಜಾಪತಿಯು ಸಕಲವನ್ನೂ ನಿರ್ಮಿಸುವುದರಿಂದ ಇವನಿಗೆ ವಿಶ್ವಕರ್ಮಾ ಎಂದೂ ಹೆಸರು. ತೈತ್ತಿರೀಯಬ್ರಾಹ್ಮಣದಲ್ಲಿ ಯಾವ ದೇವತೆಗಳನ್ನು ವಿಶ್ವಸೃಜಃ ಎಂದು ವರ್ಣಿಸಿದೆಯೋ, ಆ ದೇವತೆಗಳ ಸ್ವರೂಪಗಳೆಲ್ಲವೂ ವಿಶ್ವಕರ್ಮನಲ್ಲಿಯೇ ಅಡಕವಾಗಿವೆ.[9] ಎಂದು ಹೇಳಲಾಗಿದೆ ಈ ವಿವರಣೆವನ್ನು ಇದೇ ಸೂಕ್ತದ **ವಿಶ್ವತಶ್ಚಕ್ಷುಃ** ಎಂಬ ಋಕ್ಕಿನಲ್ಲಿಯೂ ತಿಳಿಸಲಾಗಿದೆ.

ಸಕಲ ಜಗದ್ವ್ಯವಹಾರಗಳಿಗೂ ಮೂಲವಾದ ವಾಕ್ತತ್ತ್ವವು ಪ್ರಜಾಪತಿ ಯಿಂದ ಸ್ಪಷ್ಟವಾಗಿ ಪ್ರಜಾಪತಿರೂಪದಲ್ಲಿಯೇ ಜಗದಾಧಾರವಾಗಿರುತ್ತದೆ

---

6 ಶ. ಬ್ರಾ. ೮-೨-೧-೧೦
7 ಶ. ಬ್ರಾ. ೮-೨-೩-೧೨
8 ಶ. ಬ್ರಾ. ೯-೪-೧-೧೨
9 ತೈತ್ತಿರೀಯ ಬ್ರಾಹ್ಮಣ ೩-೨೧-೯

(ಈ ವಿಷಯವನ್ನು ಇದೇಸೂಕ್ತದ **ವಾಚಸ್ಪತಿಂ** ಎಂಬಋಕ್ಕಿನ ಹೇಳಲಾಗಿದೆ.) ವಾಚಸ್ಪತಿಯೆಂದು ಪ್ರಶಂಸಿತನಾಗಿರುವ ವಿಶ್ವಕರ್ಮನು ವಾಕ್ಕಿನ ಆಧಾರದ ಮೇಲೆಯೇ ಜಗತ್ತನು ಸೃಜಿಸಿದ್ದಾನೆ ಮತ್ತು ಅಗ್ನಿರೂಪನಾಗಿದ್ದಾನೆ. ಅಗ್ನಿಯು ಅಗ್ನಿಯಿಂದಲೇ ಉತ್ಪನ್ನನಾದನು. ಪ್ರಜಾಪತಿಯ ತಪಸ್ಸಿನ ಫಲವಾಗಿ ಉತ್ಪನ್ನ ವಾದವೆಲ್ಲವೂ ದ್ಯಾವಾ ಪೃಥಿವಿಗಳ ಶೋಕದ (ತಪಸ್ಸಿನ) ಫಲವಾಗಿ ಉತ್ಪನ್ನ ವಾದವು ಎಂದು ಹೇಳಬೇಕು. ಆದುದರಿಂದ ದ್ಯಾವಾ ಪೃಥಿವಿಗಳ ಶೋಕದ (ತಪಸ್ಸಿನ) ಫಲವಾಗಿ ಅಗ್ನಿಯು ಉತ್ಪನ್ನನಾದನು. ವಿಶ್ವಕರ್ಮನ ಸೃಷ್ಟಿಗೆ ಆಧಾರವೇ ಇದು, ಜನ್ಮರಹಿತವಾಗಿ ಅಜ ಸಂಜ್ಞಕವಾದ ಯಾವ ವಾಕ್‌ತತ್ತ್ವ ವಿದೆಯೋ ಆ ತತ್ತ್ವದ ಆಧಾರದಿಂದಲೇ ವಿಶ್ವಕರ್ಮ ರೂಪನಾದ ಪ್ರಜಾಪತಿಯ ಜಗತ್ತನ್ನು ನಿರ್ಮಿಸಿದನು. ಇಲ್ಲಿ ಸೃಷ್ಟಿಗೆ ಮೂಲವೂ ಅಗ್ನಿ ರೂಪವೇ. ಸಕಲವೂ ಅಗ್ನಿ ತೇಜಸ್ಸಿನಿಂದಲೇ ವ್ಯಾಪ್ತವಾಗಿದೆ. ಆದುದರಿಂದಲೇ "ಅಗ್ನಿ ಯಿಂದ ಅಗ್ನಿಯ ಉತ್ಪತ್ತಿ"[10] ಎಂದು ತಿಳಿಸಿದೆಯೆಂದು ವಿವರಿಸಿದೆ. ಸಕಲ ವನ್ನೂ ನಿರ್ಮಿಸತಕ್ಕ ವಿಶ್ವಕರ್ಮನೇ ಋಷಿಯು. ನಿರ್ಮಿತವಾದ ಸಕಲ ಭೂತಗಳ ವ್ಯವಹಾರಕ್ಕೂ ವಾಕ್ಕೇ ಮೂಲವಾದುದರಿಂದ ವಿಶ್ವಕರ್ಮನೇ ವಾಗ್ರೂಪನು. ವಿಶ್ವಕರ್ಮ ರೂಪನಾದ ಪ್ರಜಾಪತಿಯಿಂದ ಸೃಷ್ಟನಾದ ನಿನಗೂ ನಿನ್ನ ಸಂತತಿಗೂ ವಾಕ್ಕನ್ನ ಒದಗಿಸುತ್ತೇನೆ.[11] ಇತ್ಯಾದಿ ವರ್ಣನೆಗಳಿ ಗಿರುವ ಸನ್ನಿವೇಶಗಳಲ್ಲಿ ವಾಕ್ಕಿಗೂ ವಿಶ್ವಕರ್ಮನಿಗೂ ತಾದಾತ್ಮ್ಯವಿರುತ್ತದೆ. ಈ

---

10 ಅಗ್ನಿರ್ವಾ ಏಷೋಽಗ್ನೇರಧ್ಯಜಾಯತ । ಶೋಕಾತ್ಪೃಥಿವ್ಯಾ ಉತ [illegible] ದಿವಸ್ಪರೀತಿ ಯದ್ವೈ ಪ್ರಜಾಪತೇಃ ಶೋಕಾದಜಾಯತ ತದ್ದಿವಶ್ಚ ಪೃಥಿವ್ಯೈ [illegible] ಶೋಕಾದ ಜಾಯತ ಯೇನ ಪ್ರಜಾ ವಿಶ್ವಕರ್ಮಾ [illegible] ನೇತಿ ವಾಗ್ವಾ ಅಜೋ ವಾಚೋ ವೈ ಪ್ರಜಾ ವಿಶ್ವಕರ್ಮಾ ಜಜಾನ ತಮಗ್ನೇ ಹೇಡಃ ಪರಿ ತೇ ವೃಣಕ್ತು॥ (ಶ.ಬ್ರಾ. ೬-೫-೨-೨೧)

11 ವಿಶ್ವಕರ್ಮಾ ಋಷಿರಿತಿ । ವಾಗ್ವೈ ವಿಶ್ವಕರ್ಮರ್ಷಿರ್ವಾಚಾ ಹೀದಗ್ಂ ಸರ್ವಂ ಕೃತಂ ತಸ್ಮಾದ್ವಾಗ್ವಿಶ್ವಕರ್ಮರ್ಷಿಃ ಪ್ರಜಾಪತಿ ಗೃಹೀತಯಾ ತ್ವಯೇತಿಪ್ರಜಾಪತಿಸೃಷ್ಟಯಾತ್ವಯೇತ್ಯೇತದ್ವಾಚಂ ಗೃಹ್ಣಾಮಿ ಪ್ರಜಾಭ್ಯ ಇತಿ....। (ಶ.ಬ್ರಾ. ೮-೧-೨-೯)

ವಾಕ್ಕಿನ ಆಧಾರದ ಮೇಲೆಯೇ ವಿಶ್ವವು ವಿಶ್ವಕರ್ಮನಿಂದ ನಿರ್ಮಿತವಾಯಿತು ಎಂಬುದು ಈ ಮೊದಲೇ ತಿಳಿಸಿದೆ.

ವಿಶ್ವಕರ್ಮನಿಂದ ನಿರ್ಮಿತವಾದ ಜಗತ್ತಿನಸೃಷ್ಟಿಗೂ ಯಜ್ಞವೇ ಆಧಾರ; ಪ್ರಳಯವೂ ಯಜ್ಞರೂಪವಾಗಿಯೇ ಇದೆ. ಆದುದರಿಂದ ವಿಶ್ವಕರ್ಮನು ಯಜ್ಞಾಗ್ನಿ ರೂಪದಲ್ಲಿದ್ದಾನೆ. ಪತಿಪತ್ನಿಯರೊಡಗೂಡದೆ ಯಜ್ಞವಿಲ್ಲ. ಆದುದರಿಂದ ಅಗ್ನಿ ಮತ್ತು ಆತನ ಪತ್ನಿಯೂ ಕೂಡಿ ಈ ಯಜ್ಞ ಕ್ರಿಯೆಯಲ್ಲಿ ಭಾಗವಹಿಸುತ್ತಾರೆ. 'ಪತ್ನೀವಂತನನ್ನುದ್ದೇಶಿಸಿ ಯಜ್ಞಾಹುತಿಯನ್ನರ್ಪಿಸು' ಎಂಬುದೇ ವಿಧಿ. **ಅಗ್ನೀಧ** ಸಂಜ್ಞಕವಾದ ತತ್ತ್ವವೇ ಪುಂರೂಪವು. ಪತ್ನಿಯೇ ಸ್ತ್ರೀರೂಪವು. ಈ ಪತಿಪತ್ನಿಯರ ಸಂಯೋಗದಿಂದ ಪ್ರಜೋತ್ಪತ್ತಿಯು. ಎಲ್ಲೈ **ಪತ್ನಿವಂತನಾದ ಅಗ್ನಿಯೇ** ಎಂದು ಸಂಬೋಧಿಸಿ ಆಹುತಿಯನ್ನರ್ಪಿಸಬೇಕು.[12] ಅಗ್ನಿಯೇ **ಪುಮಾನ್**; ಪತ್ನಿಯೇ **ಸ್ತ್ರೀ** (ಅಗ್ನೇವಾಕ್ ಪತ್ನೀ ಎಂಬ ವಾಕ್ಯವು ಇದೇ ಸಂದರ್ಭದಲ್ಲಿ ಶತಪಥ ಬ್ರಾಹ್ಮಣದ ಕಾಣ್ವ ಪಾಠದಲ್ಲಿರುತ್ತದೆ). ಈ ರೀತಿ ಪತಿರೂಪನಾದ ಅಗ್ನಿಗೂ ಪತ್ನೀರೂಪದ (ವಾಕ್) ಸ್ತ್ರೀಗೂ ಸಂಭವಿಸಿದ ಸಂಯೋಗದಿಂದ ಪ್ರಜೋತ್ಪತ್ತಿಯೆಂದು ವರ್ಣಿಸಿದೆ. ಯಜ್ಞಪುರುಷನಾದ ಈ ಅಗ್ನಿಯೇ ವಿಶ್ವಕರ್ಮಾಖ್ಯನು. ಯಾರನ್ನು ವಾಚಸ್ಪತಿಯೆಂದು ನಿರ್ದೇಶಿಸಿ, ಯಾರ ಯಜ್ಞ ಕ್ರಿಯೆಯಿಂದ ಜಗತ್ತಿನ ಉತ್ಪನ್ನ ವಾಯಿತೆಂದು ಹೇಳಿದೆಯೋ, [redacted] ಅಗ್ನಿಯೇ, ವಿಶ್ವಕರ್ಮ ರೂಪನು. [redacted] ವಿಷಯವನ್ನು ನಿಷ್ಕರ್ಷವಾಗಿ ಈ ರೀತಿ ತಿಳಿಸಿದೆ—

---

12 ಅಥಾಹಾತ್ಪಾತ್ನೀವತಸ್ಯ ಯಜೇತಿ । ವೃಷಾ [redacted] ಅಗ್ನೀದ್ಯೋಷಾ ಪತ್ನಿ ಮಿಥುನಮೇವೈತತ್ಪ್ರಜನನಂ ಕ್ರಿಯತೇ ಸ ಜುಹೋತ್ಯಗ್ನಾ [redacted] ಪತ್ನೀವನ್ನಿತಿ ವೃಷಾ ವಾ ಅಗ್ನಿರ್ಯೋಷಾ ಪತ್ನೀ ಮಿಥುನಮೇವೈತತ್ಪ್ರಜನನ( ಕುರುತೇ ।....ಏತದಂತಕೋ ಯಜ್ಞಸ್ಯ ಮಿಥುನಾತ್ಪ್ರಜನನಾತ್ಪ್ರ ಜನಯತಿ [redacted]

(ಶ.ಬ್ರಾ. ೪-೪-೨-೮)

ಪ್ರತ್ಯೇತ್ಯ ವೈಶ್ವಕರ್ಮಾಣಿ ಜುಹೋತಿ। ವಿಶ್ವಾನಿ ಕರ್ಮಾಣ್ಯ ಯಮಗ್ನಿ ಸ್ತಾಸ್ಯಸ್ಯಾತ್ರ ಸರ್ಮಾಣಿ ಕರ್ಮಾಣಿ ಕೃತಾನಿ ಭವಂತಿ ತಾನ್ಯೇತತ್ಪ್ರೀಣಾತಿ ತಾನಿ ಹವಿಷಾ ದೇವತಾಂ ಕರೋತಿ...ಸಾ ದೇವತಾ ನಸಾ ಯಸ್ಯೈನ ಗೃಹ್ಯತೇಽಥೊ ವಿಶ್ವಕರ್ಮಾಯ ಮಗ್ನಿಸ್ತಮೇ ವೈತತ್ಪ್ರೀಣಾತಿ ॥[13]

ಇಲ್ಲಿ ವಿಹಿತವಾಗಿರುವ ಅಗ್ನಿಯು (ಅಗ್ನಿ ಚಯನವು ಸಕಲ ಕರ್ಮಗಳನ್ನೂ ಒಳಗೊಂಡಿರುವುದರಿಂದಲೇ ವಿಶ್ವಕರ್ಮನಿಗೆ ಇಲ್ಲಿ ಆಹುತ್ಯರ್ಪಣೆಯೆಂಬ ವಿಧಿ ಯಿದೆ. ಅಗ್ನಿಯೇ ವಿಶ್ವಕರ್ಮನಾದುದರಿಂದ ಅಗ್ನಿಯಲ್ಲಿ ಅರ್ಪಿತವಾದ ಆಹುತಿಯು ಸಕಲದೇವತೆಗಳಿಗೂ ಅರ್ಪಿತವಾದಂತೆಯೇ.

ನಮ್ಮಿಂದ ಯಾವ ದಾನವು ಅಗ್ನಿಯನ್ನುದ್ದೇಶಿಸಿ ದತ್ತವಾಗುವುದೋ, ಯಾವ ಸಂಕಲ್ಪವು ನೆರವೇರಲ್ಪಡುವುದೋ, ಯಾವ ಹವಿರಾದಿಗಳು ಅರ್ಪಿತ ವಾಗುವುವೋ ಅವೆಲ್ಲವನ್ನೂ ಅಗ್ನಿರೂಪನಾದ ವಿಶ್ವಕರ್ಮನು ದೇವತೆಗಳಲ್ಲಿ ಸ್ಥಾಪಿಸುತ್ತಾನೆ. ವಿದ್ಯುಕ್ತವಾದ ಋತುಕಾಲಗಳಲ್ಲಾಗಲಿ ಅಥವಾ ಬೇರೆ [redacted] ಗಳಲ್ಲಾಗಲಿ. ನಾವು ಯಾವುದನ್ನು ಅರ್ಪಿಸುವೆವೋ, ಅವೆಲ್ಲವನ್ನೂ ದೇವ ಲೋಕದಲ್ಲಿ ಸ್ಥಾಪಿಸುತ್ತಾನೆ.[14] 'ಯಾವ ದೇವಲೋಕದಲ್ಲಿ ವಿಚ್ಛಿತ್ತಿಯಿಲ್ಲದೆ, ಅನುಸ್ಯೂತವಾಗಿ ಮಧುವಿನ ಧಾರೆಗಳೂ ಘೃತದ ಧಾರೆಗಳೂ ಪ್ರವಹಿಸುವುವೊ [redacted] ಲೋಕದಲ್ಲಿ ಅಗ್ನಿರೂಪನಾದ ವಿಶ್ವಕರ್ಮನು ನಮ್ಮನ್ನು ಸ್ಥಾಪಿಸಲಿ. ನಮ್ಮ ವಿಧ್ಯುಕ್ತವಾದ ಕರ್ಮಕ್ಕೆ ತಕ್ಕ ಫಲವು ಲಭಿಸುವಂತೆ ಮಾಡಲಿ'[15] ಇತ್ಯಾದಿ

---

13 ಶ. ಬ್ರಾ. ೯-೫-೨-೪೨

14 ಯದ್ದತ್ತಂ ಯತ್ಪರಾದಾನಂ। ಯತ್ಪೂರ್ತಂ ಯಾಶ್ಚ ದಕ್ಷಿಣಾಃ। [redacted] ಗ್ನಿರ್ವೈಶ್ವಕರ್ಮಣಃ ಸ್ವರ್ದೇವೇಷು ನೋ ದಧದಿತಿ ಯಚ್ಚೈವ ಸಂಪ್ರತಿ ದದ್ಮೋ ಯಚ್ಚಾಸಂಪ್ರತಿ ತನ್ನೋಽಯಮಗ್ನಿರ್ವೈಶ್ವ ಕರ್ಮಣಿ ಸ್ವರ್ಗೇ ಲೋಕೇ ದಧಾತ್ವಿತ್ಯೇತತ್ ॥ (ಶ.ಬ್ರಾ. ೯-೫-೧-೪೯)

15 ಯತ್ರ ಧಾರಾ ಅನಪೇತಾಃ। ಮದೋರ್ಘೃತಸ್ಯ ಚಯಾಃ ತದಗ್ನಿರ್ವೈಶ್ವ ಕರ್ಮಣಃ ಸ್ವರ್ದೇವೇಷು ನೋ ದಧದಿತ ಯತ್ರೈವ ಯಜಸ್ತಥಾ ಬಂಧುಃ ॥ (ಶ. ಬ್ರಾ. ೯-೫-೧-೫೦)

ಯಾಗಿ ಅಗ್ನಿಗೂ ವಿಶ್ವಕರ್ಮನಿಗೂ ತಾದಾತ್ಮ್ಯವನ್ನು ತೋರಿಸಿ ಅಗ್ನಿಯಲ್ಲಿ (ಅಗ್ನಿಚಯನದಲ್ಲಿ) ಅರ್ಪಿತವಾದ ಸಕಲ ಹೋಮವೂ ವಿಶ್ವಕರ್ಮರೂಪನಾದ ಅಗ್ನಿಗೆ ತೃಪ್ತಿಯನ್ನುಂಟು ಮಾಡಿ ತತ್ಫಲವನ್ನು ಕೊಡುತ್ತದೆ ಎಂದು ಪ್ರಶಂಸಿಸಿದೆ.

ವಿಶ್ವಕರ್ಮನು ಸಕಲವನ್ನೂ ನಿರ್ಮಾಣ ಮಾಡುವವನು ಎಂದು ಅರ್ಥ. ಅಗ್ನಿ, ಇಂದ್ರ, ಆದಿತ್ಯ ಎಂಬ ಹೆಸರುಗಳು ಆಯಾ ಲೋಕಕ್ಕೂ, ಆಯಾ ಕರ್ಮಕ್ಕೂ ಅನುರೂಪಗಳಾದ ಹೆಸರುಗಳೇ ವಿನಾ ಅವು ಮೂಲತತ್ತ್ವದ ತಾತ್ತ್ವಿಕವಾದ ವ್ಯತ್ಯಾಸ ಭಾವವನ್ನು ತೋರಿಸುವುದಿಲ್ಲ ಎಂಬುದು ಅಗ್ನಿಯ ಮೂರು ವಿಧವಾದ ರೂಪಗಳನ್ನು ವಿವರವಾಗಿ ವಿಶ್ಲೇಷಿಸಿದರೆ ಸ್ಪಷ್ಟವಾಗಿ ಗೊತ್ತಾಗುತ್ತದೆ. ಆದುದರಿಂದ ಅಗ್ನಿಯು ವಿಶ್ವಕರ್ಮನಾದರೆ, ಇಂದ್ರ ಮತ್ತು ಆದಿತ್ಯರೂ ಅದೇ ಸಂಜ್ಞೆಯಿಂದ ನಿರ್ದೇಶಿಸಲ್ಪಡುವುದರಲ್ಲಿ ಯಾವ ಅನೌಚಿತ್ಯವೂ ಇರುವುದಿಲ್ಲ.

ಇಂದ್ರನನ್ನು ಇದೇ ವಿಶೇಷಣದಿಂದ ವರ್ಣಿಸುತ್ತ ಋಕ್ಸಂಹಿತೆಯಲ್ಲಿ 'ಎಲೈ ಇಂದ್ರನೇ, ನೀನು ಶತ್ರುಗಳನ್ನೆಲ್ಲ ಸೋಲಿಸುವವನಾಗಿದ್ದೀಯೆ. ನೀನು ಆದಿತ್ಯನನ್ನು ಪ್ರಭಾಯುತನನ್ನಾಗಿ ಮಾಡಿದ್ದೀಯೆ. ನೀನು ಸಕಲಕರ್ಮಗಳನ್ನೂ ಮಾಡುತ್ತ (ಸಕಲ ದೇವತೆಗಳ ಕರ್ಮವನ್ನು ನೀನೊಬ್ಬನೇ ಮಾಡುತ್ತ) ಆಯಾ ದೇವತಾಸಂಜ್ಞೆಯಿಂದ ನಿರ್ದಿಷ್ಟನಾಗುತ್ತೀಯೆ.[16] ಎಂದು ವಿಶ್ವಕರ್ಮನ ಇಂದ್ರತ್ವವನ್ನು ಪ್ರಶಂಸಿಸುವ ಸಂದರ್ಭದಲ್ಲಿ ಅವನ ಮಹಿಮೆಯನ್ನು ಈ ವಿಶೇಷಣವು ವಿವರಿಸುತ್ತದೆ.

ಎಲೈ ಆದಿತ್ಯನೇ, ನೀನು ಸಕಲ ಜಗತ್ತನ್ನೂ ನಿನ್ನ ತೇಜಸ್ಸಿನಿಂದ ಪ್ರಕಾಶಿಸುವಂತೆ ಮಾಡುತ್ತ, ನೀನು ದ್ಯುವಲೋಕದಲ್ಲಿ ನಿನ್ನ ಸ್ಥಾನವನ್ನು

---

16 ತ್ವಮಿಂದ್ರಾಭಿಭೂರಸಿ ತ್ವಂ ಸೂರ್ಯಮರೋಚಯಃ ।
ವಿಶ್ವಕರ್ಮಾ ವಿಶ್ವದೇವೋ ಮಹಾ ಅಸಿ ॥
(ಋಗ್ವೇದ ಸಂಹಿತ ೮೯-೮-೨)

ಹೊಂದಿದ್ದೀಯೆ. ನಿನ್ನ ತೇಜಸ್ಸುಗಳ ಸಹಾಯದಿಂದ ನೀನು ಸಕಲ ವ್ಯವಹಾರಗಳನ್ನು ನಡೆಸಲು ಶಕ್ತನಾಗಿದ್ದೀಯೆ. ಆದುದರಿಂದಲೇ ನೀನು ವಿಶ್ವಕರ್ಮನು ಮತ್ತು ಸಕಲ ದೇವತೆಗಳಿಗೂ ಹಿತಕರವಾದ ಯಜ್ಞಕ್ಕೆ ಸಾಧನವಾದ ಉದಕವನ್ನು ನಿನ್ನ ತೇಜಸ್ಸಿನಿಂದಲೇ ಹೀರಿ ಲೋಕಕ್ಕೆ ಹರಡುತ್ತೀಯೆ. ಆದುದರಿಂದಲೇ ನೀನು ಸರ್ವಕರ್ಮಕುಶಲನು,[17] ಇತ್ಯಾದಿಯಾಗಿ ಆದಿತ್ಯನ ಪ್ರಶಂಸೆಯಿರುತ್ತದೆ.

'ಹೀಗೆ ಅಗ್ನಿ, ಇಂದ್ರ, ಆದಿತ್ಯ ರೂಪಗಳಲ್ಲಿ ಮೂರು ಲೋಕಗಳಲ್ಲೂ ವ್ಯಾಪಿಸಿ ಸಕಲ ಜಗತ್ತಿಗೂ ಕಾರಣವೂ, ಆಧಾರವೂ, ಆಶ್ರಯವೂ ಆದ ಏಕಮೇವ ತತ್ತ್ವವು ವಿಶ್ವಕರ್ಮನೆಂದು ವ್ಯವಹರಿಸಲ್ಪಡುತ್ತದೆ. ಈ ವಿಷಯವನ್ನೆ ದುರ್ಗಾಚಾರ್ಯರು ತಮ್ಮ ನಿರುಕ್ತ ಭಾಷ್ಯದಲ್ಲಿ ವಿವರಿಸುತ್ತ 'ತೇಜಸ್ಸಿನಿಂದ ಪರಿಪಕ್ವವಾಗಿ ಮಾಡಲ್ಪಟ್ಟ ಪೃಥಿವ್ಯಂತರಿಕ್ಷಗಳ ಧಾತುಗಳನ್ನು ವಿಭಾಗ ಮಾಡಿ ಆಯಾ ಸಂದರ್ಭಾನುಸಾರವಾಗಿ ಹರಡಿ, ತಾನೂ ಅವುಗಳಲ್ಲಿ ಪ್ರವೇಶಿಸಿ ವೈವಿಧ್ಯವನ್ನು ಹೊಂದಿರುವುದೂ ಅದ್ಭುತವಾದುದೂ ಆದ ಜಗತ್ತನ್ನು ನಿರ್ಮಿಸುತ್ತಾನೆ. ಸಕಲವನ್ನೂ ತನ್ನ ಪ್ರಭಾವದಿಂದಲೇ ನಿರ್ಮಿಸುವುದರಿಂದ ಇವನಿಗೆ ವಿಶ್ವಕರ್ಮನೆಂದು ಹೆಸರು'[18] ಎಂದು ಹೇಳಿದ್ದಾರೆ.

ಅಥೈಷ ವೈಶ್ವಕರ್ಮಣೋ ವಿಶ್ವಾನಿ ಮೇ ಕರ್ಮಾಣಿ ಕೃತಾನ್ಯಾ ಸನ್ನಿತ ವಿಶ್ವಕರ್ಮಾ ಹಿ ಸೋಽಭವತ್ ।[19]

---

17 ವಿಭ್ರಾಜಞ್ಜ್ಯೋತಿಷಾ ಸ್ವಂರಗಚ್ಛೋ ರೋಚನಂ ದಿವಃ ।
ಯೇನೇಮಾ ವಿಶ್ವಾ ಭುವನಾನ್ಯಾಭೃತಾ ವಿಶ್ವಕರ್ಮಣಾ ವಿಶ್ವದೇವ್ಯಾವತಾ।
(ಋ.ಸಂ. ೧೦-೧೭೦-೪)

18 ಪಾರ್ಥಿವಾನ್ಯೋಧಾತೂ ತೇಜಸಾ ಪರಿಪಚ್ಯಮಾನಾ ವಾಯುಃ ವ್ಯೂಹೇನ ವಿಚರನ್ ಸರ್ವ ಭಾವಾನುಪ್ರವೇಶಂ ಸರ್ವವಿಂದಮತ್ಯದ್ಭುತಮ ಚಿಂತ್ಯಮ ಕೃತಾತ್ಮಭಿರ್ಜಗತ್ ಕರೋತೀತಿ ಮಧ್ಯಮಃ। ವಿಶ್ವಕರಣಾ ದ್ವಿಶ್ವಕರ್ಮಾ । (ನಿ.ಭಾ. ೧೦-೨೫)

19 ಮೈತ್ರಾಯಣೀ ಸಂಹಿತಾ ೧೦-೧-೧೬.

ಇತ್ಯಾದಿ ಶ್ರುತಿ ವಾಕ್ಯಗಳು ಅದಿತತ್ತ್ವವಾದ ವಿಶ್ವಕರ್ಮ್ಮನ್ನು ಸ್ತುತಿಸುತ್ತವೆ.

—ಹೀಗೆ ವರ್ಣಿತವಾಗಿರುವ ವಿಶ್ವಕರ್ಮನು ಜಗತ್ತನ್ನು ಸೃಷ್ಟಿ ಮಾಡುವ ಸಂಕಲ್ಪಮಾಡಿ, ತನ್ನ ಯಜ್ಞರೂಪವಾದ ಕ್ರಿಯೆಯಿಂದ ಜಗತ್ಸೃಷ್ಟಿಯನ್ನು ಮಾಡಿದ ವಿಷಯವು ಒಂದು ಇತಿಹಾಸ ರೂಪದಲ್ಲಿ ಕೆಲವೆಡೆಗಳಲ್ಲಿ ಉಕ್ತವಾಗಿದೆ. 'ವಿಶ್ವಕರ್ಮಭೌವನನು ಈ ಸರ್ವಮೇಧ ಯಾಗವನ್ನಾಚರಿಸಿದನು. ಇದರ ಫಲವಾಗಿ ಅವನು ಸಕಲ ಭೂತಗಳನ್ನೂ ಮೀರಿದ ಸ್ಥಾನವನ್ನಾಕ್ರಮಿಸಿದನು ಮತ್ತು ತಾನೇ ಎಲ್ಲ ರೂಪಗಳನ್ನೂ ಹೊಂದಿದನು. ಯಾವನು ಈ ಸರ್ವಮೇಧ ಯಾಗವನ್ನಾಚರಿಸುವನೋ, ಅವನೂ ಸಹ ವಿಶ್ವಕರ್ಮನ ಅನುಗ್ರಹದಿಂದ ಅದೇ ರೀತಿ ಸಕಲಭೂತಗಳನ್ನೂ ಆಕ್ರಮಿಸಿದ ಸ್ಥಾನವನ್ನಾಕ್ರಮಿಸಿ ತಾನೂ ಅವೆಲ್ಲದರ ರೂಪಗಳನ್ನು ಪಡೆಯುತ್ತಾನೆ.'[20]

ಈ ಸಂದರ್ಭದಲ್ಲಿ ಇನ್ನೊಂದು ಪ್ರಕರಣವು ಉಕ್ತವಾಗಿದೆ.

ಐತರೇಯ ಬ್ರಾಹ್ಮಣದಲ್ಲಿ[21] ಪ್ರಶಂಸಿತವಾದ ಐಂದ್ರಾಭಿಷೇಕದಿಂದ ಕಶ್ಯಪನು ವಿಶ್ವಕರ್ಮಭೌವನನ್ನೂ ಸಂಸ್ಕರಿಸಿದನು. ಇದರ ಫಲವಾಗಿ ವಿಶ್ವಕರ್ಮಭೌವನನು ಸಾರ್ವಭೌಮತ್ವವನ್ನು ಹೊಂದಿ ಸಕಲವಾದ ಪೃಥ್ವಿಯನ್ನೂ ಸಂಚರಿಸಿ, ಜಯಿಸಿ, ಅಶ್ವಮೇಧಯಾಗವನ್ನಾಚರಿಸಿದನು.

---

20 ತೇನ ಹೈತೇನ ವಿಶ್ವಕರ್ಮಾ ಭೌವನ ಈಜೇ। ತೇನೇಷ್ವಾತ್ಯತಿಷ್ಠತ್ಸರ್ವಾಣಿ ಭೂತಾನೀದಗ್ಂ ಸರ್ವಮಭವದತಿಷ್ಠತಿ ಸರ್ವಾಣಿ ಭೂತಾನೀದಗ್ಂ ಸರ್ವಂ ಭವತಿ ಯ ಏವಂ ವಿದ್ವಾನ್ತ್ಸರ್ವಮೇಧೇನ ಯಜತೇ ಯೋವೈತದೇವಂ ವೇದ ॥ (ಶ.ಬ್ರಾ. ೧೩-೭-೧-೧೪)

21 ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ಕಶ್ಯಪೋ ವಿಶ್ವಕರ್ಮಾಣಂ ಭೌವನಮಭಿಷಿಷೇಚ ತಸ್ಮಾದು ವಿಶ್ವಕರ್ಮಾ ಭೌವನಃ ಸಮಂತಂ ಸರ್ವತಃ ಪೃಥಿವೀಂ ಜಯನ್ ಪರೀಯಾಯಾಶ್ವೇನ [illegible] ಮೇಧ್ಯೇನೇಜೇ ಭೂಮಿರ್ಹ ಜಗಾವಿತ್ಯುದಾಹರಂತಿನ ಮಾ ಮರ್ತ್ಯಃ ಕಶ್ಚನ ದಾತು ಮರ್ಹತಿ.... (ಐ.ಬ್ರಾ. ೮-೨೧)

**ವಿಶ್ವಕರ್ಮಾ ಋಷಿರಿತಿ । ವಾಗ್ವೈ ವಿಶ್ವಕರ್ಮಾ ಋಷಿಃ....॥**[22]
ಎಂಬ ವಾಕ್ಯದಲ್ಲಿಯೂ ಇತರ ಸನ್ನಿವೇಶಗಳಲ್ಲೂ ಸಹ ವಿಶ್ವಕರ್ಮನೇ, ಋಷಿಯೆಂದೂ ತಿಳಿಸಿದೆ. ಋಷಿ ಶಬ್ದಕ್ಕೆ ಇಲ್ಲಿ ಸರ್ವಜ್ಞನೆಂದರ್ಥ. ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ ಸರ್ವಕರ್ಮ ಕುಶಲನೂ ಆದ ವಿಶ್ವಕರ್ಮ ದೇವನೇ ವಿಶ್ವಕರ್ಮ ಋಷಿಯು. ಆದರೂ ಈ ಋಷಿಯು ಮರ್ತ್ಯಲೋಕದವನೆಂದು ಐತರೇಯ ಬ್ರಾಹ್ಮಣವು ಸ್ಪಷ್ಟವಾಗಿ ಹೇಳಿರುವುದರಿಂದ ಪ್ರತ್ಯೇಕ ಋಷಿಯೊಬ್ಬನು (ಭೌವನ ವಿಶ್ವಕರ್ಮ) ಇದ್ದನೆಂದು ಹೇಳಬಹುದು. ಪ್ರಕೃತವಾದ (೧೦–೮೧, ೮೨) ಸೂಕ್ತಗಳ ದ್ರಷ್ಟಾರನು ಅದೇ ಋಷಿಯೇ. ಆತನೂ ಸಹ ವಿಶ್ವಕರ್ಮಾಖ್ಯನಾಗಿಯೇ ಇದ್ದಾನೆ. ವೈಶ್ವಕರ್ಮಣ ಮತದ ಪ್ರಕಾರ ಜಗತ್ತತ್ತ್ವವೇನೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ.

ವೈಶ್ವಕರ್ಮಣ ಮತದ ಪ್ರಕಾರ ಸಕಲ ಜಗತ್ತಿಗೂ ಉದಕವೇ ಮೂಲಾಧಾರ[23] ಆದರೆ, ಈ ಉದಕವೂ ಸಹ ಉತ್ಪನ್ನವಾದ ವಸ್ತುವೇ ಆಗಿರುವುದರಿಂದ ಇದಕ್ಕೆ ಮೂಲವಾವುದು ಎಂಬ ಪ್ರಶ್ನೆಯೂ ಸಹಜವಾಗಿದೆ.[24] ಜಗತ್ತಿಗೆಲ್ಲ ಪ್ರಥಮಕಾರಣನು ವಿಶ್ವಕರ್ಮನು. ಅವನ್ನನೇ **ವಿಶ್ವತಶ್ಚಕ್ಷುಃ** ಇತ್ಯಾದಿ ವಿಶೇಷಣಗಳಿಂದ ವರ್ಣಿಸಿದೆ. ಅವನೊಬ್ಬನೇ ದೇವನು. **ಜನಯನ್ ದೇವ ದೇವ ಏಕಃ** ಅವನೇ ಎಲ್ಲಕ್ಕೂ ಉತ್ಪಾದಕನು. **ಯೋನಃ ಪಿತಾ** ಸಕಲ ದೇವತೆಗಳಿಗೂ ಅವನೇ ಆಶ್ರಯನು. **ಯತ್ರ ದೇವಾಃ ಸಮಪಶ್ಯಂತ ವಿಶ್ವೇ.**

ಹೀಗೆ ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ ಆದ ವಿಶ್ವಕರ್ಮನನ್ನು ಲೌಕಿಕವಾದ ಚಕ್ಷುಸ್ಸಿನಿಂದ ನೋಡಲಾಗುವುದಿಲ್ಲ. [illegible] **ವಿಧಾತ**

---

22 ಶ. ಬ್ರಾ. ೮-೧-೩-೯,

23 ತಮಿದ್ಗರ್ಭಂ ಪ್ರಥಮಂ ದಧ್ರ ಆಪಃ॥ (ಋ.ಸಂ. ೧೦-೮೨-೬)

24 ಕಂಸ್ವಿದ್ಗರ್ಭಂ ಪ್ರಥಮಂ ದಧ್ರ [illegible] (ಋ. ಸಂ. ೧೦-೮೨-೫

[illegible] ಋ. ಸಂ. ೧೦-೮೨-೫

**ಯ ಇಮಾ ಜಜಾನಾನ್ಯದ್ಯುಷ್ಮಾಕಮಂತರಂ** ಅವನ ರೂಪವು ಲೋಕದ ಇತರ ರೂಪಗಳಿಗಿಂತಲೂ ಭಿನ್ನವು. ಅಜ್ಞಾನದಿಂದ ಆವೃತರಾದ ನಮಗೆ ಅವನ ದರ್ಶನವು ಸಾಧ್ಯವಿಲ್ಲ. ಆದರೆ ಅವನ ದರ್ಶನವು ಅತ್ಯವಶ್ಯ.

ಯಜ್ಞ ಕರ್ತೃತ್ವ ಮತ್ತು ಸೃಷ್ಟಿಶಕ್ತಿ ಇವೆರಡೂ ಈ ವಿಶ್ವಕರ್ಮನಲ್ಲಿ ಸೇರಿವೆ. ಅಗ್ನಿಯಲ್ಲಿಯೂ ಹಿರಣ್ಯಗರ್ಭನಲ್ಲಿಯೂ ಯಾವ ಶಕ್ತಿಗಳು ಸಾಮರಸ್ಯವನ್ನು ಹೊಂದಿವೆಯೋ ಅದೇ ಶಕ್ತಿಗಳು ವಿಶ್ವಕರ್ಮನಲ್ಲೂ ಸಾಮರಸ್ಯವನ್ನು ಹೊಂದಿರುತ್ತವೆ. **ಸ್ವಯಂ ಯಜಸ್ವ ತನ್ವಂ** (೧೦-೮೧-೫) ಎಂಬ ಯಜ್ಞಕರ್ತೃತ್ವಾಂಶವು ಮಾತ್ರ ಅಗ್ನಿಯ ವೈಶಿಷ್ಟ್ಯವನ್ನು ತೋರಿಸುತ್ತದೆ. **ವಿಶ್ವತಶ್ಚಕ್ಷುಃ** ಇತ್ಯಾದಿ ವಿಶೇಷಣಗಳು ಆದಿತ್ಯನ ವೈಶಿಷ್ಟ್ಯವನ್ನು ತೋರಿಸುತ್ತವೆ. ೮೨ನೇ ಸೂಕ್ತದ ೫ ಮತ್ತು ೬ನೇ ಋಕ್ಕುಗಳು ಹಿರಣ್ಯಗರ್ಭ ಸೂಕ್ತದ ೭ ಮತ್ತು ೮ನೇ ಋಕ್ಕುಗಳಲ್ಲಿ ವಿವೃತವಾಗಿರುವ ಅಂಶಗಳನ್ನು ತಿಳಿಸುತ್ತವೆ. ಈ ಎರಡು ಸನ್ನಿವೇಶಗಳೂ ಸಹ ಆದಿತ್ಯರೂಪದ ಆದಿತತ್ತ್ವವನ್ನೇ ಪ್ರಶಂಸಿಸುತ್ತದೆ.

ವಿಶ್ವಕರ್ಮಾಹ್ಯಜನಿಷ್ಟ ದೇವ ಆದಿದ್ಗಂಧರ್ವೋ ಅಭವದ್ದ್ವಿತೀಯಃ ।
ತೃತೀಯಃ ಪಿತಾಜನಿತೌಷಧೀನಾಮಪಾಂ ಗರ್ಭಂ ವ್ಯದಧಾತ್ ಪುರುತ್ರಾ ॥

ದೇವತಾತ್ಮನಾದ ವಿಶ್ವಕರ್ಮನು ಮೊದಲು ಉತ್ಪನ್ನನಾದನು. ಎರಡನೆಯದಾಗಿ ಗಂಧರ್ವನೂ ಮೂರನೆಯದಾಗಿ ಓಷಧಿಗಳಿಗೆ (ವನಸ್ಪತಿಗಳಿಗೆ) ಉತ್ಪಾದಕನಾದ ಪಿತೃವೂ ಜನಿಸಿದರು. ಮತ್ತು ಅನೇಕ ಕಡೆಗಳಲ್ಲಿ ಉದಕರೂಪವಾದ ಗರ್ಭವು ಸ್ಥಾಪಿವಾಯಿತು ಎಂಬ ಈ ವಿವರಣೆಯು ವಿಶ್ವಕರ್ಮನ ಜನ್ಮವನ್ನು ತಿಳಿಸುತ್ತಿದೆ. ಅಲ್ಲದೇ,

ವಿಶ್ವಕರ್ಮನ್ ಹವಿಷಾ ವರ್ಧನೇನ ತ್ರಾತಾರಮಿಂದ್ರಮಕೃಣೋರವಧ್ಯಂ
ತಸ್ಮೈ ವಿಶಃ ಸಮನಮಂತ ಪೂರ್ವೀರಯಮುಗ್ರೋ ವಿಹವ್ಯೋ ಯಥಾಸತ್ ॥[27]

---

26 ತೈ. ಸಂ. ೪-೬-೨-೩

27. ತೈ. ಸಂ. ೪-೬-೬೩

ಎಲೈ ವಿಶ್ವಕರ್ಮನೇ, ಶಕ್ತಿದಾಯಕವಾದ ಹವಿಸ್ಸಿನಿಂದ ಉತ್ಸಾಹ ವನ್ನು ಹೊಂದಿ ಲೋಕಪಾಲಕನಾದ ಇಂದ್ರನನ್ನು ಹಾನಿಯಿಂದ ತಪ್ಪಿಸಿದೆ. ಅವನಿಗೆ ಪುರಾತನರಾದ ಋಷಿಗಳೆಲ್ಲರೂ ತಮ್ಮ ಭಕ್ತಿಯುತವಾದ ಪ್ರಣಾಮ ಗಳನ್ನರ್ಪಿಸಿದರು. ಅವನಿಗೆ ಎಲ್ಲರೂ ಭಕ್ತಿಯನ್ನು ತೋರಿಸಿ ಅವನನ್ನು ಯಜ್ಞಕಾರ್ಯಗಳಲ್ಲಿ ಆಹ್ವಾನಕ್ಕೆ ಪಾತ್ರನನ್ನಾಗಿ ಮಾಡಿದರು. ಅದೆಲ್ಲವೂ ನಿನ್ನ ಪ್ರಭಾವ ಎಂಬುದು ವಿಶ್ವಕರ್ಮನಾದ ನಿನ್ನ ಅತಿಶಯವಾದ ಶಕ್ತಿಯನ್ನು ತೋರಿಸುತ್ತದೆ. ಆದುದರಿಂದಲೇ—

ಸಮುದ್ರಾಯ ವಯುನಾಯ ಸಿಂಧೂನಾಂ ಪತಯೇ ನಮಃ। ನದೀನಾಗ್ಂ ಸರ್ವಾಸಾಂ ಪಿತ್ರೇ ಜುಹುತಾ ವಿಶ್ವಕರ್ಮಣೇ ವಿಶ್ವಾಹಾಮರ್ತ್ಯಗ್ಂ ಹವಿಃ॥[28]

ನದಿಗಳ ಪ್ರಭುವೂ ಚಲನಾತ್ಮಕವೂ ಆದ ಸಮುದ್ರಕ್ಕೆ ಪ್ರಣಾಮವು, ನದಿಗಳಿಗೆ ಪ್ರಭುವಾದ ವಿಶ್ವಕರ್ಮನನ್ನುದ್ದೇಶಿಸಿ ನಿತ್ಯವಾದ ಆಹುತಿಯನ್ನರ್ಪಿಸಿರಿ ಎಂದು ವಿಶ್ವಕರ್ಮನ ಮಹತ್ವಕ್ಕನುಗುಣವಾದ ಪೂಜೆಯನ್ನು ವಿಧಿಸಿದೆ.

ವಿಶ್ವಕರ್ಮರೂಪನಾದ ಪ್ರಜಾಪತಿಯು ಯಜ್ಞ ರೂಪದಲ್ಲಿ ವಿಶ್ವವನ್ನು ಸಂಹರಿಸುವುದು; ಆಹುತಿ ರೂಪದಲ್ಲಿ ತನ್ನಲ್ಲೇ ಅರ್ಪಿತವಾದ ವಿಶ್ವವನ್ನು ವಿಸ್ತರಿಸಬೇಕೆಂದು ಆಶಿಸುವುದು ಮತ್ತು ವಿಸ್ತೃತವಾದ ವಿಶ್ವದ ಸಕಲ ವಸ್ತು ಗಳಲ್ಲಿಯೇ ತಾನೂ ಅಂತರ್ ಭೂತನಾಗಿ ವ್ಯಾಪಿಸುವುದು ಈ ವಿಷಯಗಳು ಪ್ರಥಮ ಋಕ್ಕಿನಲ್ಲಿ (೧೦-೮೦-೧) ವರ್ಣಿತವಾಗಿವೆ. ಪ್ರಥಮತಃ ಈ ಅಂಶ ಗಳನ್ನು ಪರಿಶೀಲಿಸುವುದು ಪ್ರಕೃತವಾಗಿರುತ್ತದೆ. ಈ ವಿಷಯಗಳನ್ನು ಮೊದ ಲನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಲಾಗುತ್ತದೆ.

ಮನಸ್ಸಿನ ಕೆಲವು ಭಾವನೆಗಳಿಗೆ ದೇವತೆಗಳೆಂಬ ವ್ಯವಹಾರವು ಕಂಡು ಬರುತ್ತದೆ. ಈ ಕ್ರಿಯೆಗಳೆಲ್ಲವೂ ಸರ್ವೋತ್ತಮನಾದ ಒಬ್ಬ ದೇವನಿಗೇ ಸೇರಿವೆ. ವಿಶ್ವಕರ್ಮಾ ಎಂಬುದು ಆತನ ಅನೇಕ ನಾಮಗಳಲ್ಲಿ ಒಂದು.

---

28. ತೈ. ಸಂ. ೪-೬-೨-೬

ಋಗ್ವೇದದ ಎರಡು ಸೂಕ್ತಗಳಲ್ಲಿ (೧೦;೮೧ ಮತ್ತು ೭೨) ವಿಶ್ವಕರ್ಮನು ಈ ರೀತಿ ವರ್ಣಿತನಾಗಿದ್ದಾನೆ—ಅವನು ಸರ್ವದರ್ಶಿ; ಅವನಿಗೆ ಎಲ್ಲಾ ಪಾರ್ಶ್ವಗಳಲೂ ಕಣ್ಣುಗಳು, ಮುಖಗಳು, ಬಾಹುಗಳು, ಪಾದಗಳು ಇವೆ. ಅವನಿಗೆ ರೆಕ್ಕೆಗಳೂ ಇವೆ. ಆತನು ಒಬ್ಬ ಋಷಿ, ಪುರೋಹಿತ ಮತ್ತು ಜನಕ. ಆತನು ವಾಚಸ್ಪತಿ; ಮನೋ ವೇಗವುಳ್ಳವನು; ಉಪಕಾರಿ; ಸಮಸ್ತ ವಿಧವಾದ ಅಭಿವೃದ್ಧಿಗೂ ಮೂಲಭೂತನು. ಎಲ್ಲಾ ಪ್ರದೇಶಗಳೂ, ಎಲ್ಲಾ ಪ್ರಾಣಿಗಳೂ ಅವನ ಸೃಷ್ಟಿಯೇ; ಅವನೇ ದೇವತೆಗಳಿಗೆಲ್ಲಾ ನಾಮಕರಣ ಮಾಡಿ ಅವರ ಹೆಸರನ್ನು ತಿಳಿಸುವವನು. ಜ್ಞಾನಿ ಮತ್ತು ಸಮರ್ಥ; ಪರಮೋತ್ತಮನು. ಸಮಸ್ತಕ್ಕೂ ಆಧಾರಭೂತನು ಅವನೇ ಭೂಮಿಯನ್ನು ಸೃಜಿಸಿ, ಆಕಾಶವನ್ನು ಪ್ರಕಾಶಕ್ಕೆ ತಂದವನು. ಸೃಷ್ಟಿ ಶಿಲ್ಪ ಈ ದೇವತೆಯ ವೈಶಿಷ್ಟ್ಯ. ಬ್ರಾಹ್ಮಣಗಳಲ್ಲಿ[29] ವಿಶ್ವಕರ್ಮ, ಹಿರಣ್ಯಗರ್ಭ ಮತ್ತು ಪ್ರಜಾಪತಿಗಳು ಒಂದೇ ಎಂದು ಸ್ಪಷ್ಟವಾಗಿ ಹೇಳಿದೆ.

ಈ ಋಕ್ಕಿನ ಭಾವಾರ್ಥವು ಸಾಯಣ ಭಾಷ್ಯದ ಅನ್ವಯ ಇಂತಿದೆ.

ಸರ್ವಜ್ಞನೂ ಹೋಮ ಸಂಪಾದಕನೂ ಆದ ಯಾವ ವಿಶ್ವಕರ್ಮನು ಸಕಲವಾದ ಲೋಕಗಳನ್ನೂ ಆಹುತಿ ರೂಪದಲ್ಲಿ ಅರ್ಪಿಸಿದ ತನ್ನ ದಿವ್ಯ ಸ್ಥಾನದಲ್ಲಿ ಕುಳಿತನೋ, ಅಂತಹ ನಮ್ಮನ್ನೆಲ್ಲಾ ಉತ್ಪಾದಿಸಿದ ತಂದೆಯಾದ ವಿಶ್ವಕರ್ಮನ ಆಶೀರ್ವಾದ ಪೂರ್ವಕವಾದ ಧನವನ್ನು ಅಪೇಕ್ಷಿಸಿಯೂ, ಪ್ರಥಮದಲ್ಲಿ ಸರ್ವವನ್ನೂ ಅಗ್ನಿರೂಪದಲ್ಲಿ ವ್ಯಾಪಿಸಿಯೂ, ತನ್ನಿಂದ ಸೃಷ್ಟವಾದ ಸಕಲ ಭೂತಗಳನ್ನೂ ಪ್ರವೇಶಿಸಿದನು.

ಈ ಋಕ್ಕಿನಲ್ಲಿ ವಿಶ್ವಕರ್ಮನ ಮುಖ್ಯವಾದ ನಾಲ್ಕು ಕ್ರಿಯೆಗಳು ವರ್ಣಿತವಾಗಿವೆ :—

೧) ವಿಶ್ವಕರ್ಮನು ಈ ಸಕಲ ವಿಶ್ವವನ್ನೂ ಯಜ್ಞಾಹುತಿ ರೂಪದಲ್ಲಿ ಅರ್ಪಿಸಿದನು (**ಯಃ ಇಮಾ ವಿಶ್ವಾ ಭುವನಾನಿ ಜುಹ್ವತ್**).

---

29. ಶ. ಬ್ರಾ. ೮-೨-೧-೧೦, ೮-೨-೨-೧೪ ಐ.ಬ್ರಾ. ೪-೨೨ನ್ನು ನೋಡಿ

೨) ಆಹುತಿ ರೂಪದಲ್ಲಿ ಅರ್ಪಿಸಿದ ಈ ಜಗತ್ತನ್ನೇ ಪುನಃ ಪುನಃ ಸೃಷ್ಟಿ ಮಾಡಬೇಕೆಂಬ ಅಪೇಕ್ಷೆ (**ಸ ಆಶಿಷಾ ದ್ರವಿಣಮಿಚ್ಛಮಾನಃ**).

೩) ನಿಷ್ಪ್ರಪಂಚವೂ ಪಾರಮಾರ್ಥಿಕವೂ ಆದ ರೂಪವನು ಹೊಂದಿರುವುದು. (**ಪ್ರಥಮಚ್ಛತ್**).

೪) ತನ್ನ ಇಚ್ಛೆಯಿಂದಲೇ ಸೃಷ್ಟವಾದ ಸಕಲ ಭೂತಗಳ ಹೃದಯಗಳಲ್ಲೂ ಪ್ರವೇಶಿಸಿ ಸರ್ವಾಂತರ್ಯಾಮಿಯಾಗಿರುವುದು (**ಅವರಾನ್ ಅವಿವೇಶಃ**). ಹೀಗೆ ಸೃಷ್ಟಿ ಸ್ಥಿತಿ ಲಯ ಕಾರ್ಯಗಳು ವರ್ಣಿತವಾಗಿವೆ. ಇಲ್ಲಿ ಇನ್ನೊಂದು ವಿಷಯವು ಗಮನಾರ್ಹ. ಸೃಷ್ಟ್ಯಾದಿ ಕಾರ್ಯಗಳಲ್ಲಿ ಪ್ರಥಮತಃ ಸೃಷ್ಟಿಯು ವರ್ಣಿತವಾಗಿಲ್ಲ. ಮೊದಲು ಪ್ರಳಯ ರೂಪವಾದ ಕ್ರಿಯೆ, ಅನಂತರ ಸೃಷ್ಟಿಯ ಇಚ್ಛೆ, ತದನಂತರ ಸೃಷ್ಟಿ, ಕೊನೆಯಲ್ಲಿ ಸೃಷ್ಟಿಸಿದ ಜಗತ್ತಿನಲ್ಲಿ ತನ್ನ ವ್ಯಾಪಕತ್ವ. ಈ ಕ್ರಮದಲ್ಲಿ ವಿಶ್ವಕರ್ಮನ ಕ್ರಿಯೆಗಳು ವರ್ಣಿತವಾಗಿವೆ.

೧

ಸೃಷ್ಟವಾದ ಜಗತ್ತನ್ನು ಪ್ರಳಯ ಕಾಲವಲ್ಲಿ ತನ್ನಲ್ಲೇ ಅಡಗಿಸಿಕೊಂಡು ತಾನು ಮಾತ್ರ ಅದ್ವಿತೀಯನಾಗಿರತಕ್ಕದ್ದು ವಿಶ್ವಕರ್ಮನ ಲೀಲೆಗಳಲ್ಲೊಂದು. ಈ ಕಾರ್ಯವು ಜಗತ್ತಿನ ದೃಷ್ಟಿಯಿಂದ ನಾಶರೂಪವಾದರೂ, ವಿಶ್ವಕರ್ಮನ ದೃಷ್ಟಿಯಿಂದ ಕೇವಲ ಅವಸ್ಥಾ ವಿಶೇಷವೆಂದು ಪರಿಗಣಿತವಾಗುತ್ತದೆ. ಪ್ರಳಯ ರೂಪವಾದ ಈ ಆಹುತ್ಯರ್ಪಣವು ಅನೇಕ ಸನ್ನಿವೇಶಗಳಲ್ಲಿ ವಿವೃತವಾಗಿರತ್ತದೆ. ನಿರುಕ್ತಕಾರರು ಇಂತಹ ಒಂದು ಸಂದರ್ಭವನ್ನು ಇತಿಹಾಸ ರೂಪದಲ್ಲಿ ಭುವನಪುತ್ರನಾದ ವಿಶ್ವಕರ್ಮನು ಸರ್ವಮೇಧ ಯಾಗದಲ್ಲಿ ಸಕಲ ಭೂತಗಳನ್ನೂ ಆಹುತಿರೂಪದಲ್ಲಿ ಅರ್ಪಿಸಿದನ್ನು, ಕೊನೆಯಲ್ಲಿ ತನ್ನನ್ನೂ ಆಹುತಿ ರೂಪದಲ್ಲಿ ಅರ್ಪಿಸಿಕೊಂಡನು[29] ಎಂಬುದನ್ನು **ಯಾ ಇಮಾ ವಿಶ್ವ** (೧೦-೮೧-೧) ಎಂಬ ಮಂತ್ರವು ಸ್ಪಷ್ಟಪಡಿಸುತ್ತದೆ ಎಂದಿದ್ದಾರೆ.

29. ತತ್ರೇತಿಹಾಸಮಾಚಕ್ಷತೇ। ವಿಶ್ವಕರ್ಮಾ ಭೌವನಃ ಸರ್ವಮೇಧೇ ಸರ್ವಾಣಿ ಭೂತಾನಿ ಜುಹವಾಂಚಕಾರ। ಸ ಆತ್ಮಾನಮಪ್ಯಂತತೋ ಜುಹವಾಂಚಕಾರ। ತದಭಿವಾದಿನ್ಯೇಷರ್ಗ್ಭವತಿ। ಯ ಇಮಾ ವಿಶ್ವಾ [redacted] (ನಿರುಕ್ತ ೧೦-೨೬)

ಈ ಆಹುತ್ಯರ್ಪಣಕ್ರಿಯೆಯನ್ನೇ ಶತಪಥಬ್ರಾಹ್ಮಣದಲ್ಲಿ ಈ ರೀತಿ ವಿವರಿಸಿದೆ : 'ಸ್ವಯಂಭು ಸಂಜ್ಞಕನಾದ ವಿಶ್ವಕರ್ಮ ಪರಬ್ರಹ್ಮನು ತಪಸ್ಸನ್ನಾಚರಿಸುತ್ತಿದ್ದನು. ಆಗ ಈ ರೀತಿ ಯೋಚಿಸಿದನು. ತಪಸ್ಸು ಅನಂತವಾಗಿರತಕ್ಕದಲ್ಲ. ಇವರ ಪರ್ಯಾಯವಾಗಿ ನಾನು ಸರ್ವಮೇಧವನ್ನಾಚರಿಸುತ್ತೇನೆ. ನಾನು ನನ್ನನ್ನೇ ಭೂತಗಳಲ್ಲಿ ಆಹುತಿರೂಪದಲ್ಲಿ ಅರ್ಪಿಸುತ್ತೇನೆ. ಮತ್ತು ಭೂತಗಳನ್ನು ನನ್ನಲ್ಲೇ ಆಹುತಿರೂಪದಲ್ಲಿ ಅರ್ಪಿಸಿಕೊಳ್ಳುತ್ತೇನೆ. ಈ ರೀತಿ ತನ್ನನ್ನು ಭೂತಗಳಲ್ಲೂ, ಸಕಲಭೂತಗಳನ್ನೂ ತನ್ನಲ್ಲೂ ಅರ್ಪಿಸಿಕೊಳ್ಳುವುದರಿಂದ ಅವನು ತನ್ನದೇ ಆದ ಸ್ವರಾಜ್ಯವನ್ನೂ, ವಿಶ್ವಗಳಿಗೆಲ್ಲ ಆಧಿಪತ್ಯವನ್ನೂ ಹೊಂದಿದನು.[30] ಈ ವಿಧವಾದ ಸರ್ವಮೇಧವನ್ನು ಭುವನಪುತ್ರನಾದ ವಿಶ್ವಕರ್ಮ ಆಚರಿಸಿದನು. ಇದರ ಫಲವಾಗಿ ಸಕಲ ಭೂತಗಳಿಗಿಂತಲೂ ಅಧಿಕವಾದ ಸ್ಥಾನವನ್ನು ಪಡೆದನು. ಮತ್ತು ತಾನೇ ಸಕಲ ಭೂತಗಳ ರೂಪವನ್ನೂ ಪಡೆದನು.[31]

ಈ ವಿಧವಾದ ಸರ್ವಮೇಧವು ವಿಧಾತನ ಕಾರ್ಯಗಳಲ್ಲೊಂದು. ಯಾವನು ಸೃಷ್ಟಿಕರ್ತೃವೋ ಅವನೇ ಸಂಹಾರ ಕರ್ತೃವು. ತನಗೆ ತನ್ನಿಂದ ಸೃಷ್ಟವಾದ ವಿಶ್ವವೇ ಆಹುತಿಯು. ತನಗೆ ತಾನೇ ಆಹುತಿಯು. ಇದೋದು ಯಜ್ಞಪ್ರಭೇದ. ಜಗತ್ತಿನ ಸೃಷ್ಟಿಗೆ ಯಜ್ಞವು ಯಾವ ರೀತಿ ಆದಿಕಾರಣವಾಗಿದೆಯೋ ಅದೇ ರೀತಿ ವಿಶ್ವದ ಲಯವೂ ಯುಜ್ಞರೂಪವಾಗಿಯೇ ಇರುತ್ತದೆ. ಯಾವ

---

30 ಬ್ರಹ್ಮ ವೈ ಸ್ವಯಂಭು ತಪೋಽತಪ್ಯತ । ತದೈಕ್ಷತ ನ ವೈ ತಪಸ್ಯಾನಂತಮಸ್ತಿ ಹಂತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನಿ ಚಾತ್ಮನೀತಿ ತತ್ಸರ್ವೇಷು ಭೂತೇಷ್ವಾತ್ಮಾನಗ್ಂ ಹುತ್ವಾ ಭೂತಾನಿ ಸರ್ವೇಷಾಂ ಭೂತಾನಾಗ್ ಶ್ರೈಷ್ಠ್ಯಗ್ಂ ಸ್ವರಾಜ್ಯಮಾಧಿಪತ್ಯಂ ಪರ್ಯೈತಿ ॥
(ಶ. ಬ್ರಾ. ೧೩-೭-೧-೧)

31 ತೇನೈತೇನ ವಿಶ್ವಕರ್ಮಾ ಭೌವನ ಈಜೇ। ತೇನೇಷ್ಟ್ವಾತ್ಯತಿಷ್ಠತ್ಸರ್ವಾಣಿ ಭೂತಾನೀದಗ್ಂ ಸರ್ವಮಭವತ್... ....ಯ ಏವಂ ವಿದ್ವಾನ್....।
(ಶ. ಬ್ರಾ. ೧೩-೭-೧-೧೪)

ಯಜ್ಞವನ್ನು **ಸರ್ವೇಷಾಂ ಭೂತಾನಾಂ ಮಾತ್ಮಾಯಜ್ಞಃ**[32] ಎಂದು ಪ್ರಶಂಶಿಸಿದೆಯೋ, ಅದೇ ಯಜ್ಞವೇ ಸಕಲಭೂತಗಳನ್ನೂ ಭುಜಿಸುವುದರಿಂದ ಯಜ್ಞಕ್ಕೆ **ಭುಜ್ಯು** ವೆಂಬ ಹೆಸರು ಪ್ರಸಿದ್ಧವಾಗಿದೆ.[33] ಯಾವ ಲೋಕಗಳನ್ನು ವಿಶ್ವಕರ್ಮ ಪ್ರಜಾಪತಿಯು ಉತ್ಪನ್ನ ಮಾಡುವನೋ, ಅವನ್ನೇ ಭುಜಿಸುವುದೂ ಅವನ ಸ್ವಭಾವವಾಗಿದೆ. ಉತ್ಪನ್ನವಾದ ವಸ್ತುಗಳಲ್ಲಿ ಯಾವುದೂ ಶಾಶ್ವತ ವಾಗಿರಲು ಸಾಧ್ಯವೇ ಇಲ್ಲ. ಪ್ರತಿಯೊಂದು ಲಯವನ್ನು ಹೊಂದಲೇ ಬೇಕಾಗಿರುತ್ತದೆ. ಸೃಷ್ಟಿಕರ್ತನಾದ ವಿಶ್ವಕರ್ಮ ಪ್ರಜಾಪತಿಯೇ ಈ ಲಯ ಕರ್ತನು.

ಯಾವ ಅದ್ವಿತೀಯನಾದ ರುದ್ರನು ಜಗತ್ತನ್ನು ನಿಯಸುತ್ತಲೂ ರಕ್ಷಿಸುತ್ತಲೂ ಇರುವನೋ, ಅವನು ಸಕಲ ಜಗತ್ತನ್ನು ವ್ಯಾಪಿಸಿ ಸರ್ವಾಂತ ರ್ಯಾಮಿಯಾಗಿರುತ್ತಾನೆ. ಸೂಕ್ಷ್ಮರೂಪವಾದ ಜಗತ್ತನ್ನು ವಿಸ್ತರಿಸಿ ಜಗದ್ವ್ಯವ ಹಾರವು ಮುಗಿಯಿತೆಂದು ತನಗೆ ತಿಳಿದೊಡನೆಯೇ ಸಕಲ ವಿಶ್ವವನ್ನು ತನ್ನ ಲ್ಲಿಯೇ ಅಡಗಿಸಿಕೊಳ್ಳುತ್ತಾನೆ.[34] ಇದೇ ಪ್ರಳಯವು. **ಅಸ್ಯ ವಾಮಸ್ಯ ಪಲಿತಸ್ಯ ಹೋತುಃ**[35] ಎಂಬ ವಾಕ್ಯದಲ್ಲಿ ಹೋತುಃ ಎಂಬುದಕ್ಕೂ ಸಂಹರ್ತುಃ ಎಂಬ ಅರ್ಥವನ್ನು ಹೇಳಿ ಈ ಪ್ರಳಯ ಕಾರ್ಯವನ್ನೇ ವಿವರಿಸಿದೆ.

ಪ್ರಜಾಪತಿಯು ತಾನು ಉತ್ಪನ್ನ ಮಾಡಿದುದನ್ನೆಲ್ಲ ಪುನಃ ತಾನೇ ಭಕ್ಷಿಸ ತೊಡಗಿದನು. ವಿಶ್ವವೆಲ್ಲವೂ ಅವನಿಗೆ ಅನ್ನವಾಗಿದೆ (ಬೃ ಉ ೧–೨–೫) ಇತ್ಯಾದಿ ವಾಕ್ಯಗಳಲ್ಲಿ ವರ್ಣಿತವಾಗಿರುವಂತೆಯೇ ಪ್ರಕೃತದಲ್ಲಿಯೂ

---

32 ಶ. ಬ್ರಾ. ೧೪–೩–೨–೧

33 ಯಜ್ಞೋ ವೈ ಭುಜುರ್ಯಜ್ಞೋ ಹಿ ಸರ್ವಾಣಿ ಭೂತಾನಿ ಭುನಕ್ತಿ.
(ಶ. ಬ್ರಾ. ೯-೪-೧-೧೧)

34 ಏಕೋ ಹಿ ರುದ್ರೋ ದ್ವಿತೀಯಾಯ ತಸ್ಥುರ್ಯ ಇಮಾನ್ ಲೋಕಾ ನೀಶತ ಈಶನೀಭಿಃ । ಪ್ರತ್ಯಙ್ ಜನಾಸ್ತಿಷ್ಠತಿ ಸಂಚುಕೋಚಾಂತಕಾಲೇ ಸಂಸೃಜ್ಯ ವಿಶ್ವಾ ಭುವನಾನಿ ಗೋಪಾಃ ॥
(ಶ್ವೇ. ಉ. ೩–೨)

35 ಋ. ಸಂ. ೧–೧೬೪–೧

ತಿಳಿಸಲ್ಪಟ್ಟಿದೆ. ಜಗತ್ತನ್ನು ಆಹುತಿ ರೂಪದಲ್ಲಿ ತನಗೆ ಅರ್ಪಿಸಿಕೊಂಡ ಕಾಲವೇ ಪ್ರಳಯ ಕಾಲವು. ಈ ಕಾಲದಲ್ಲಿ ವಿಶ್ವವನ್ನೆಲ್ಲ ಮೃತ್ಯುವು ಆವರಿಸಿಕೊಳ್ಳುತ್ತದೆ. ಆಗ ಅದ್ವಿತೀಯನಾಗಿರುವವಿಶ್ವಕರ್ಮಪರಮೇಶ್ವರನು ಪುನಃ ಸದ್ವಿತೀಯನಾಗಲು ಆಶಿಸುತ್ತಾನೆ. ಜಗತ್ತಿನ ಸಂಕೋಚ ಕಾಲವೂ ಶಾಶ್ವತವಲ್ಲ. ಅದು ವಿಕಾಸ ವನ್ನು ಹೊಂದಲೇಬೇಕು. ಮೃತ್ಯುವಿನಿಂದ ಆವೃತವಾದ ಜಗತ್ತು ವಿಕಾಸ ವನ್ನು ಹೊಂದಬೇಕಾದರೆ ಅದಕ್ಕೆ ವಿಶ್ವಕರ್ಮನ ಸಂಕಲ್ಪವು ಅತ್ಯವಶ್ಯವಾಗಿರು ತ್ತದೆ. ಈ ಸಂಕಲ್ಪವಾದೊಡಯೇ ಪುನಃ ವಿಕಾಸವು ಪ್ರಾರಂಭವಾಗುತ್ತದೆ. **ಆಶಿಷಾ ದ್ರವಿಣ ಮಿಚ್ಛಮಾನಃ** ಎಂಬುದರಿಂದ ವಿಶ್ವಕರ್ಮನ ಈ ಸಂಕಲ್ಪವೂ ನಿರ್ದಿಷ್ಟವಾಗಿದೆ ಮೃತ್ಯುವಿನಿಂದ ಆವೃತವಾದ ಜಗದ್ವಿಕಾಸವನ್ನೂ ಅದರ ಕ್ರಮ ಗಳನ್ನೂ ವೇದದಲ್ಲಿ ಒಂದೊಂದೆಡೆಯಲ್ಲಿ ಒಂದೊಂದು ವಿಧವಾಗಿ ವರ್ಣಿಸಲಾ ಗಿವೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಈ ರೀತಿ ಯಾದ ವಿವರಣೆಯಿರುತ್ತದೆ.

ಆರಂಭಕಾಲದಲ್ಲಿ ಸರ್ವಶೂನ್ಯವಾಗಿದ್ದಿತು. ಸಕಲವೂ ಮೃತ್ಯುವಿ ನಿಂದಲೇ ಆವೃತವಾಗಿದ್ದಿತು. ಈ ಮೃತ್ಯುವು ಕ್ಷುದ್ರೂಪವಾಹ ಬಯಕೆಯಾಗಿ ದ್ದಿತು. ಆಗ ಅದು ಸಚೇತನವಾಗಲಿಚ್ಛಿಸಿತು. ಈ ಇಚ್ಛೆಯೊಡನೆ ಚಲಿಸು ವಾಗ ಉದಕದ ಆವಿರ್ಭಾವವಾಯಿತು. ಅದು ಪೂಜ್ಯವಾದ ವಸ್ತು ವಾಯಿತು.[36]

ನನ್ನಿಂದ ಎರಡನೆಯ ರೂಪವೂ ಉತ್ಪನ್ನವಾಗಲಿ ಎಂದು [illegible] ಮೃತ್ಯುವು ಆಶಿಸಿತು. ಆಗ ಅದೇ ಮೃತ್ಯುವು ವಾಕ್ಕಿಗೂ ಮನಸ್ಸಿಗೂ ಸಂಯೋಗವನ್ನುಂಟು ಮಾಡಿತು. ಈ ವಾಙ್ಮನಃ ಸಂಯೋಗದ ಫಲವಾಗಿ ಜನಿಸಿದ ರೇತಸ್ಸುಸಂವತ್ಸರ ರೂಪವನ್ನು ತಾಳಿತು, ಇದಕ್ಕಿಂತಲೂ ಮೊದಲು ಸಂವತ್ಸರವೆಂಬ ತತ್ತ್ವವೇ ಇರಲಿಲ್ಲ. ಆಗ ಒಂದು ಸಂವತ್ಸರದವರೆಗೆ ಅದನ್ನು ಭರಿಸಿತು. [illegible] ಸಂವತ್ಸರದ ಉತ್ಪನ್ನವಾಗುವಾಗ ಅದನ್ನು ಕಬಳಿಸಬೇಕೆಂದು ಮೃತ್ಯುವು. ಬಾಯನ್ನು ತೆರೆಯಿತು. ಆಗ ಶಿಶುರೂಪದ ಸಂವತ್ಸರವು **ಭಾಣ್** ಎಂಬ ಶಬ್ದ ವನ್ನು ಮಾಡಿತು. ಇದೇ ವಾಕ್ಕಾಯಿತು. **ಸ ಯದ್ಯದೇವಾ ಸೃಜತ ತತ್ತ ದತ್ತುಮಧ್ರಿಯತ**—ತಾನು ಉತ್ಪನ್ನ ಮಾಡಿದುದನ್ನೆಲ್ಲಾ ಭಕ್ಷಿಸತೊಡಗಿತು

---

[illegible] ಬೃ. ಉ. ೧-೧-೧

ಉತ್ಪನ್ನವಾದ ಲೋಕವೆಲ್ಲವೂ ಇದಕ್ಕೆ ಅನ್ನವಾಯಿತು[37]. ಈ ವಾಙ್ಮನಃ ಸಂಯೋಗದಿಂದಲೇ ಜಗತ್ತಿನ ಸಕಲತತ್ತ್ವಗಳೂ ಉತ್ಪನ್ನವಾದುವು[38] ಎಂಬುದಾಗಿ ಮೃತ್ಯುವಿನಿಂದ ಆವೃತವಾದ ಜಗತ್ತಿನ ವಿಕಾಸ ಸ್ವರೂಪವು ವರ್ಣಿತತ್ತದೆ. ಯಾವ ಮೃತ್ಯುವು ಜಗತ್ತನ್ನು ವ್ಯಾಪಿಸಿರುವುದೋ ಅದೂ ಸಹ ಪ್ರಜಾಪತಿಯಿಂದಲೇ ಸೃಷ್ಟವಾಗಿದೆ.

ಪ್ರಜಾಪತಿಯು ಪ್ರಜೆಗಳನ್ನು ಸೃಜಿಸಿದನು. ಊರ್ಧ್ವಭಾಗದ ಪ್ರಾಣಗಳಿಂದ ದೇವತೆಗಳನ್ನೂ, ಅಧೋಭಾಗದ ಪ್ರಾಣಗಳಿಂದ ಮಾನವರನ್ನೂ ನಿರ್ಮಿಸಿದನು. ಅನಂತರ ತನ್ನಿಂದ ಸೃಷ್ಟವಾದ ಪ್ರಜೆಗಳನ್ನು ಕಬಳಿಸಲು ಕೂಡಲೇ ಮೃತ್ಯುವನ್ನೂ ಉತ್ಪನ್ನ ಮಾಡಿದನು. ಹೀಗೆ ಸೃಷ್ಟಿ ಮತ್ತು ಲಯಗಳು ಪರ್ಯಾಯ ರೂಪವಾಯೂ ಅವಿಚ್ಛಿನ್ನ ರೂಪವಾಗಿ ನಡೆಯುತ್ತಿವೆ.[39] ಈ ಪ್ರಳಯವನ್ನೆ ಆಹುತಿರೂಪವಾದ ಯಜ್ಞವೆಂದು ಪ್ರಕೃತದಲ್ಲಿ ವರ್ಣಿಸಿದೆ. ಇದನ್ನೇ ಸಾಯಣರು ವಿವರಿಸುತ್ತಾ ವಿಶ್ವಕರ್ಮಾಖ್ಯನಾದ ಪರಮೇಶ್ವರನು ತನ್ನಿಂದ ಸೃಷ್ಟವಾದ ಈ ಸಕಲಜಗತ್ತನ್ನೂ (ಪೃಥಿವ್ಯಾದಿ ಸಪ್ತಲೋಕಗಳನ್ನೂ) ಆಹುತಿ ರೂಪದಿಂದ ತನ್ನಲ್ಲೇ ಅರ್ಪಿಸಿ ಸಂಹಾರ ರೂಪವಾದ ಹೋಮದ ಕರ್ತೃವಾಗಿಯೂ ಸರ್ವಜ್ಞನಾಗಿಯೂ ಅದ್ವಿತೀಯನಾಗಿಯೂ ಇರುತ್ತಾನೆ ಎಂಬುದೇ ಈ ವಾಕ್ಯದ ತಾತ್ಪರ್ಯವು[40] ಎಂದು ತಿಳಿಸಿದ್ದಾರೆ.

---

37 ಬೃ. ಉ. ೧-೨-೪

38 ಸ ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ್
(ಬೃ. ಉ. ೧-೨-೫)

39 ಶ. ಬ್ರಾ. ೧೦-೧-೬-೧

40 ಯೋ ವಿಶ್ವಕರ್ಮಾ ಪರಮೇಶ್ವರ ಇಮಾ ವಿಶ್ವಾ ಭುವನಾನಿ ಜುಹ್ವತ್ ಪ್ರಳಯಕಾಲೇ ಪೃಥಿವ್ಯಾದೀನಿಮಾನ್ ಸಪ್ತಲೋಕಾನ್ ಸ್ವಾತ್ಮನ್ಯಾಹುತಿ ಪ್ರಕ್ಷೇಪಮತ್ಸಂಹರನ್ನ್ಯಷಿರಾಸೀದತೀಂದ್ರಿಯದ್ರಷ್ಟಾ ಹೋತಾ ಸಂಹಾರ ರೂಪಸ್ಯ ಹೋಮಸ್ಯ ಕರ್ತಾ । (ಸಾಯಣ ಭಾಷ್ಯ)

೨

ಅದ್ವಿತೀಯನಾದ ವಿಶ್ವಕರ್ಮನು ನಿತ್ಯವಾಗಿ ಈ ರೀತಿಯಲ್ಲಿರಲು ಸಾಧ್ಯವಿಲ್ಲ. ಸದ್ವಿತೀಯನಾಗಲು ಅವನಲ್ಲೂ ಕಾಮವು ಉದ್ಭವಿಸುತ್ತದೆ. ಅದನ್ನೇ ಪ್ರಕೃತ ಋಕ್ಕಿನಲ್ಲಿ ಮತ್ತೆ ಜಗತ್ತಿನ ಭೋಗವನ್ನು ಆಶಿಸಿ ಸೃಷ್ಟಿಗೆ ಆರಂಭಿಸಲಿಚ್ಛಿಸುತ್ತಾನೆಂದೂ[41] ಮತ್ತು ತನ್ನಿಂದ ಸೃಷ್ಟನಾದ ಸಕಲ ವಸ್ತುಗಳಲ್ಲೂ ತಾನೂ ಪ್ರವೇಶಿಸುತ್ತಾನೆ[42] ಎಂದೂ ತಿಳಿಸಿದೆ.

ವಿಶ್ವಕರ್ಮನು ಸದ್ವಿತೀಯನಾಗಲು ಅವನು ಬಯಸಿದ (ಕಾಮ) ಕ್ರಮ, ಜಗತ್ತನ್ನು ವಿಸ್ತರಿಸಿ ಅದರಲ್ಲಿ ತಾನೂ ಅದರೊಂದಿಗೆ ವಿಸ್ತೃತಿಯನ್ನು ಹೊಂದಿ ಸರ್ವಾಂತರ್ಯಾಮಿಯಾದುದರ ಕ್ರಮ, ಇವುಗಳನ್ನು ತೈತ್ತಿರೀಯಾರಣ್ಯಕದಲ್ಲಿ ಸೃಷ್ಟಿಗಿಂತಲೂ ಪೂರ್ವದಲ್ಲಿ ವಿಶ್ವವೆಲ್ಲವೂ ಉದಕದಿಂದ ಆವೃತ್ತವಾಗಿದ್ದಿತು. ಆ ಉದಕದ ಮೇಲೆ ಪುಷ್ಕರಪರ್ಣದಲ್ಲಿ ಪ್ರಜಾಪತಿಯೊಬ್ಬನೇ ಸ್ಥಿತನಾಗಿದ್ದನು. ಆಗ ಅವನ ಮನಸ್ಸಿನಲ್ಲಿ ವಿಶ್ವವನ್ನು ಸೃಜಿಸಬೇಕು ಎಂಬ ಕಾಮವುಂಟಾಯಿತು ಇದು ಲೌಕಿಕವಾದ ಕ್ರಮವನ್ನೇ ಅನುಸರಿಸಿತು. ಪುರುಷನಿಗೆ ಕಾಮ (ಇಚ್ಛೆ) ಉಂಟಾದಾಗ ಅವನು ಇಚ್ಛೆಯನ್ನು ಮಾತಿನಿಂದ ಪ್ರಕಟಿಸುತ್ತಾನೆ. ಮತ್ತು ತನ್ನ ಕಾರ್ಯದಲ್ಲಿ ಆ ಇಚ್ಛೆಯನ್ನು ಪರ್ಯವಸಾನಗೊಳಿಸುತ್ತಾನೆ. ಪ್ರಜಾಪತಿಯೂ ಸಹ ಇದೇ ಲೌಕಿಕವಾದ ಕ್ರಮವನ್ನನುಸರಿಸಿದನು. ಪ್ರಜಾಪತಿಗೆ ಪ್ರಥಮತಃ

---

41 ಅಶಿಷಾ ಪ್ರವಿಣವಿಂಚ್ಛಮಾನಃ | ಪುನಃ ಪುನಃ ಸಿಸೃಕ್ಷಯಾ ಜಗದ್ಭೋಗಮಾ ಕಾಂಕ್ಷಮಾಣಃ| (ಸಾಯಾಣ ಭಾಷ್ಯ)

42 ಪ್ರಥಮಮುಮ್ಮೃಚ್ಛತ್ | ಅವರಾನ್ ಅವಿವೇಶ (ಸಾಯಣ ಭಾಷ್ಯ)

ಕಾಮವುಂಟಾಯಿತು (ಜಗತ್ಸೃಷ್ಟಿಯ ಇಚ್ಛೆ). ಅದು ಮನಸ್ಸಿನ ಪ್ರಥಮ ರೇತಸ್ಸಾಯಿತು. ಮೇಧಾವಿಗಳಾದ ಕವಿಗಳು (ಪ್ರಜಾಪತಿಯ ಪ್ರಾಣಗಳು) ಈ ರೇತಸ್ಸಿನ ರಹಸ್ಯವನ್ನು ತಮ್ಮ ಅಂತಶ್ಶಕ್ತಿಯಿಂದ ತಿಳಿಯಲು ಪ್ರಯತ್ನಿಸಿ ಕಾಮರೂಪವಾದ ಈ ರೇತಸ್ಸೇ ಸತ್ತಿಗೂ ಅಸತ್ತಿಗೂ ಇರುವ ಬಂಧಕ ಸಾಮಗ್ರಿಯೆಂದು ತಿಳಿದರು. ಈ ರೀತಿ ತಿಳಿಯಲಿಚ್ಛೆಯುಳ್ಳವರೆಲ್ಲರೂ ಇಂತಹ ತತ್ತ್ವರಹಸ್ಯವನ್ನರಿತವರಲ್ಲಿಗೆ ಹೋಗಿ ಆಶ್ರಯಿಸುತ್ತಾರೆ. ಆಗ ಆ ಇಚ್ಛೆಯು ಉದ್ಭವಿಸಿದೊಡನೆಯೇ ಪ್ರಜಾಪತಿಯು ಗಂಭೀರವಾದ ತಪಸ್ಸನ್ನಾಚರಿಸಿದನು. ಅನಂತರ ತನ್ನ ಶರೀರವನ್ನು ಅಲುಗಾಡಿಸಿದನು. ಆಗ ಪ್ರಜಾಪತಿಯ ದೇಹದಿಂದ ಅರುಣ, ಕೇತು ಮತ್ತು ವಾತರಶನ ಸಂಜ್ಞಕರಾದ ಋಷಿಗಳ ಮೂರು ರೋಮಗುಂಪುಗಳು ಉದ್ಭವಿಸಿದವು. ಅವನ ನಖಗಳೇ ವೈಖಾನಸ ಋಷಿಗಳೆಂದೂ, ಗಳು ವಾಲಖಿಲ್ಯಋಷಿಗಳೆಂದೂ ಪ್ರಸಿದ್ಧವಾದವು. ಅವನ ದೇಹದ ಮತ್ತು ರಸವು ಉದಕಾಂತರ್ವರ್ತಿಯಾಗಿ ಸಂಚರಿಸುವ ಕೂರ್ಮರೂಪವನ್ನು ಹೊಂದಿತು. ನೀರಿನೊಳಗೆ ಓಡಾಡುತ್ತಿದ್ದ ಆ ಕೂರ್ಮವನ್ನು ಕುರಿತು ಪ್ರಜಾಪತಿಯು "ನೀನು ನನ್ನ ಚರ್ಮದಿಂದಲೂ ಮತ್ತು ಮಾಂಸದಿಂದಲೂ ಉದ್ಭೂತನಾಗಿದ್ದೀಯೆ" ಎಂದು ಹೇಳಿದನು. ಅದಕ್ಕೆ ಉತ್ತರವಾಗಿ ಕೂರ್ಮವು "ನಾನು ಹೊಸದಾಗಿ ಉದ್ಭೂತನಾಗಿಲ್ಲ. ನಾನು ಅನಾದಿಕಾಲದಿಂದಲೂ ಇಲ್ಲಿಯೇ ಇದ್ದೇನೆ" ಎಂದಿತು. ಅದು ಪೂರ್ವದಿಂದಲೂ ಇದ್ದುದರಿಂದಲೇ ಅದು ಪುರುಷ ಸಂಜ್ಞಕವಾಯಿತು. ಆಗ ಸಹಸ್ರ ಸಂಖ್ಯಾತವಾದ ಶಿರಸ್ಸುಳ್ಳ, ಸಹಸ್ರ ಸಂಖ್ಯಾತವಾದ ಚಕ್ಷುಸ್ಸುಳ್ಳ ಮತ್ತು ಸಹಸ್ರ ಸಂಖ್ಯಾಕವಾದ ಪಾದಗಳುಳ್ಳ ಪುರುಷನು ಆವಿರ್ಭೂತನಾಗಿ ಎದ್ದು ನಿಂತನು.

ಎಲೈ ಪುರುಷನೇ, ನೀನು ನನಗಿಂತಲೂ ಪೂರ್ವದಲ್ಲಿಯೇ ಉತ್ಪನ್ನನಾಗಿದ್ದರೆ, ನೀನೇ ನನಗೂ ಈಶ್ವರನು. ನೀನೇ ಈ ಸೃಷ್ಟಿಕರ್ಮವನ್ನು ಮಾಡು ಎಂದು ಹೇಳಿ ತನ್ನ ಬೊಗಸೆಯಿಂದ ಉದಕವನ್ನು ತೆಗೆದುಕೊಂಡು ಮುಂಭಾಗದಲ್ಲಿ ಅರ್ಪಿಸಿದನು. (**ಏನಾ ಹೀದೇವಾ** ಎಂಬಲ್ಲಿ ಮೊದಲನೆಯ

---

೧ ತೈ. ಆ., ೧-೨೩-೪ ರಿಂದ ।

[redacted] ಶಬ್ದಕ್ಕೆ ಇಷ್ಟಾರ್ಥ–ಕಾಮ–ಎಂದೂ ಎರಡನೆಯ **ಏವ** ಶಬ್ದಕ್ಕೆ ಆದಿತ್ಯನೆಂದೂ ತಾತ್ಪರ್ಯವೆಂಬುದಾಗಿ ಭಾಷ್ಯಕಾರರ ಮತವಾಗಿದೆ) ಅನಂತರ **ಏವಾಹ್ಯೇವ** ಎಂಬ ಮಂತ್ರವನ್ನು ಪಠಿಸಿದೊಡನೆಯೇ ಆದಿತ್ಯನು ಉದ್ಭವಿಸಿದನು. ಅದೇ ಪೂರ್ವದಿಕ್ಕಾಯಿತು. ಅನಂತರ ಅರುಣಕೇತುವು ಉದಕವನ್ನು ಅಂಜಲಿಯಿಂದ ತೆಗೆದು ದಕ್ಷಿಣ ಭಾಗದಲ್ಲಿ ಸ್ಥಾಪಿಸಿದನು. **ಏವಾಹ್ಯಗ್ನೇ** ಎಂಬ ಮಂತ್ರವನ್ನು ಉಚ್ಚರಿಸಿದೊಡನೆಯೇ ಅಗ್ನಿಯು ಆವಿರ್ಭವಿಸಿದನು. ಅದೇ ದಕ್ಷಿಣ ದಿಕ್ಕಾಯಿತು. ಅನಂತರ ಅರುಣಕೇತುವು ಉದಕವನ್ನು ಅಂಜಲಿಯಿಂದ ತೆಗೆದ ಪಶ್ಚಿಮಭಾಗದಲ್ಲಿ ಸ್ಥಾಪಿಸಿದನು. [redacted] **ಹಿ ವಾಯೋ** ಎಂಬ ಮಂತ್ರವನ್ನು ಪಠಿಸಿದೊಡನೆಯೇ ವಾಯುವು ಉದ್ಭವಿಸಿದನು. ಅದೇ ಪಶ್ಚಿಮ ದಿಕ್ಕಾಯಿತು. ಅನಂತರ ಅರುಣಕೇತುವು ಉದಕವನ್ನು ತೆಗೆದು ಉತ್ತರ ಭಾಗದಲ್ಲಿ ಸ್ಥಾಪಿಸಿ **ಏವಾಹೀಂದ್ರ** ಎಂದುಚ್ಚರಿಸಿದೊಡನೆಯೇ ಇಂದ್ರನು ಆವಿರ್ಭವಿಸಿದನು. ಇದೇ ಉತ್ತರ ದಿಕ್ಕಾಯಿತು. ಮಧ್ಯಭಾಗದಲ್ಲಿ ಉದಕವನ್ನು ಸ್ಥಾಪಿಸಿ [redacted] **ಹಿ ಪೂಷನ್** ಎಂದು ಪಠಿಸಿದಾಗ ಪೂಷನ್ ಆವಿರ್ಭವಿಸಿದನು. ಅನಂತರ ಊರ್ಧ್ವಭಾಗದಲ್ಲಿ ಉದಕವನ್ನು ಸ್ಥಾಪಿಸಿ **ಏವಾ ಹಿ ದೇವಾ** ಎಂದು ಉಚ್ಚರಿಸಿದಾಗ ಅದರಿಂದ ದೇವತೆಗಳೂ ಮಾನವರೂ ಪಿತೃಗಳೂ ಉದ್ಭವಿಸಿದರು. ಅದರೊಡನೆ ಗಂಧರ್ವರೂ, ಅಪ್ಸರಸ್ಸುಗಳೂ ಉದ್ಭವಿಸಿದರು. ಅದೇ ಊರ್ಧ್ವ ದಿಕ್ಕಾಯಿತು. ಈ ಸಂದರ್ಭಗಳಲ್ಲಿ ಬಿಂದು ರೂಪದಲ್ಲಿ ಬಿದ್ದ ಉದಕರಾಶಿಗಳಿಂದ ರಾಕ್ಷಸರೂ ಪಿಶಾಚಿಗಳೂ ಆವಿರ್ಭವಿಸಿದರು.[44] ಧಾರಾ ರೂಪವಲ್ಲದ ಬಿಂದುಗಳಿಂದ ಉತ್ಪನ್ನರಾದುದರಿಂದ ಇವರು ಶಾಶ್ವತ ಸ್ಥಿತಿಯನ್ನು ಹೊಂದಲಿಲ್ಲ. ಪರಾಜಿತರಾದರು. ವಿಷಯದಲ್ಲಿ ಶೃತಿಯು [redacted] ರೀತಿ ಪಠಿಸಿದೆ—

ಬೃಹತ್ಸ್ವರೂಪವನ್ನು ಹೊಂದಿದ ಉದಕಗಳು ಪ್ರವೃದ್ಧವಾದ ಶಕ್ತಿಯನ್ನು ಹೊಂದಿ ಉತ್ತಮವಾದ ಗರ್ಭವನ್ನು ಧರಿಸಿ, ಸ್ವಯಂಭುವನ್ನು ಉತ್ಪನ ಮಾಡಿದಾಗ (**ತಮಿದ್ಗರ್ಭಂ ಪ್ರಥಮಂ ದಧ್ರ ಆಪಃ ಯತ್ರ**

---

[redacted] ಶ್ರೈ. [redacted] ೧–೨೪–೪ ರಿಂದ ೬

**ದೇವಾಃ ಸಮಗಚ್ಛಂತ ವಿಶ್ವೇ** **೧೦–೮೨–೬)** ಸಕಲ ಸೃಷ್ಟಿಯೂ ಅಲ್ಲಿಂದಲೇ ಪ್ರಾದುರ್ಭೂತವಾಯಿತು. ಯಾವ ಒಂದೇ ಮೂಲದಿಂದ ಇವೆಲ್ಲವೂ ಸ್ವಯಂಭುಸಂಜ್ಞಕನಾದ ಬ್ರಹ್ಮನ ರೂಪವುಳ್ಳವೇ ಆದವು. ಲೋಕದಲ್ಲಿ ಉದಕಗಳು ಶಿಥಿಲವೂ ಆ ಧ್ರುವವೂ ಆದುದರಿಂದ ಅವುಗಳಿಂದ ಉತ್ಪನ್ನವಾದ ಸಕಲ ಭೂತಗಳೂ ಅಶಿಥಿಲವೂ ಆ ಧ್ರುವಗಳೂ ಆದವು. ಪ್ರಜಾಪತಿಯೂ ಇದೇ ರೂಪವನ್ನು ಹೊಂದಿದನು. ತನ್ನಿಂದಲೇ ಉತ್ಪನ್ನವಾದ ಲೋಕಗಳನ್ನೆಲ್ಲಾ ಪ್ರವೇಶಿಸಿದನು **ಅಪರಾ ಆವಿವೇಶ** (೧೦–೮೧–೧). ಕಾರಣದಿಂದಲೇ ಶ್ರುತಿವಾಕ್ಯವು **ವಿಧಾಯ ಲೋಕಾನ್** ಇತ್ಯಾದಿಯಾಗಿರುತ್ತದೆ. ಇದರ ತಾತ್ಪರ್ಯವು ಪ್ರಜಾಪತಿಯು ಸಕಲ ಲೋಕಗಳನ್ನೂ ಸಕಲ ದಿಗ್ದಿಗಂತರಗಳನ್ನೂ ಸೃಜಿಸಿದನು. ಉದಕೋತ್ಪನ್ನನಾದ ಈ ಪ್ರಜಾಪತಿಯು ಜಗದ್ರೂಪವಾದ ತನ್ನ ಶರೀರವನ್ನೇ ಪ್ರವೇಶಿಸಿ ತದಾತ್ಮನಾದನು[45] ಎಂದಿರುತ್ತದೆ.

ಯಾವ ವಿಶ್ವಕರ್ಮಾಖ್ಯವಾದ ತತ್ತ್ವವು ತಾನು ಸಂಹಾರ ರೂಪಾದ ಹೋಮವನ್ನು ಸಂಪಾದಿಸಿ, ಪ್ರಳಯದ ನಂತರ ಅದ್ವಿತೀಯವಾಗಿದ್ದಿತೆಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿದೆಯೋ ಅದರ ಅದ್ವಿತೀಯತ್ವ, ಸೃಷ್ಟಿಯಲ್ಲಿ ಅದರ ಇಚ್ಛೆ, ತನ್ನ ತಪಃ ಫಲವಾದ ಸೃಷ್ಟಿ ಮತ್ತು ಸೃಷ್ಟವಾದ ಜಗತಿನೊಡನೆ ಅದರ ತಾದಾತ್ಮ್ಯ ಇವೆಲ್ಲವೂ ಬೃಹದಾರಣ್ಯಕೋಪನಿಷತ್ತಿನಲ್ಲಿ ಈ ರೀತಿ ಸ್ತುತಿಸಿದೆ. ಸೃಷ್ಟಿಗಿಂತಲೂ ಪೂರ್ವಭಾವಿಯಾಗಿದ್ದು ಯಾವ ಕೂರ್ಮವು ತನ್ನ ಪೂರ್ವಭಾವಿತ್ವದಿಂದ ಪುರುಷ ಶಬ್ದವಾಚ್ಯವಾದುದೆಂದು ಮೇಲೆ ಉದಾಹೃತವಾದ ತೈತ್ತಿರೀಯಾರಣ್ಯಕದ ವಾಕ್ಯಗಳಿಂದ ಪ್ರಶಂಸಿಸಿದೆಯೊ, ಅದೇ ಅಭಿಪ್ರಾಯವು ಈ ವಿವರಣೆಯಲ್ಲಿಯೂ ಇರುತ್ತದೆ.

ಜಗತ್ತಿನಲ್ಲಿ ಸೃಷ್ಟಿಗೆ ಪೂರ್ವದಲ್ಲಿ ಕೇವಲ ಶುದ್ಧ ಚೈತನ್ಯರೂಪಿಯಾದ ಆತ್ಮತತ್ತ್ವವು ಮಾತ್ರವಿದ್ದಿತು. ಸುತ್ತಲೂ ನೋಡಿದಾಗ ತನ್ನನ್ನು ಬಿಟ್ಟು

---

45 ತೈ. ಅ. ೧-೨೩-೮ ಮತ್ತು ೯

ಇತರ ಯಾವ ತತ್ತ್ವವೂ ಕಾಣಲಿಲ್ಲ. ಆಗ ಅದಕ್ಕೆ ನಾನು ಮಾತ್ರ ಇದ್ದೇನೆ ಎಂಬ ಅಹಂ ಶಬ್ದವಾಚ್ಯವಾದ ಸ್ವಾತ್ಮಾಸ್ತಿತ್ವವು ಗೋಚರವಾಯಿತು.[redacted] **ಅಹಂ** ಶಬ್ದವಾಚ್ಯವಾದ ಈ ಪರಮಾತ್ಮನು ಸಕಲವಾದ ದೋಷಗಳನ್ನೂ ದಹಿಸಿದುದರಿಂದ (**ಪಾಪ್ಮಾನಂ ಔಷತ್—ಪೂರ್ವಃ ಔಷದಿತಿ ಪುರುಷಃ**- ಶ. ಬಾ.) ಇದು ಪುರುಷಶಬ್ದವಾಚ್ಯವಾಯಿತು. ಜೊತೆಯಲ್ಲಿ ಯಾವುದೂ ಇಲ್ಲದೆ ತಾನು ಮಾತ್ರ ಒಂದೇ ಇರುವುದೋ ಅದಕ್ಕೆ ಭಯವು ಖಂಡಿತ. ಆದುದರಿಂದ ಏಕಮಾತ್ರವಾದ ಈ ಆತ್ಮವು ನನಗೆ ಭೀತಿಯನ್ನುಂಟುಮಾಡುವ ವಸ್ತುವು ಬೇರೊಂದಾವುದೂ ಇಲ್ಲ. ನಾನು ಯಾವುದನ್ನು ನೋಡಿ ಭಯಪಡಬೇಕು ಎಂದು ಯೋಚಿಸಿತು. ಆದರೆ ಭೀತಿಯೂ ತಪ್ಪಿದರೂ ಇನ್ನೊಂದು ವಿಧವಾದ ಚಿಂತೆಗೆ ಅವಕಾಶವಾಯಿತು. ಜೊತೆಗೆ ಯಾರೂ ಇಲ್ಲದೆ, ಕೇವಲ ಒಬ್ಬನೇ ಇದ್ದರೆ ಅದರಲ್ಲಿ ಹರ್ಷವಿರುವುದಿಲ್ಲ. ಅದರಂತೆ ಈ ಆತ್ಮನಿಗೂ ಸಹ ತನ್ನ ಜೊತೆಗೆ ಯಾರೂ ಇಲ್ಲದುದರಿಂದ ಹರ್ಷವಿಲ್ಲದಾಯಿತು ತನ್ನ ಜೊತೆಗೆ ಒಂದು ವ್ಯಕ್ತಿಯನ್ನು ಹೊಂದ ಬೇಕೆಂದಿಚ್ಛಿಸಿ ಸ್ತ್ರೀ ಪುರುಷ ಸಂಯೋಗ ರೂಪವಾದ ವಿಸ್ತೃತಿಯನ್ನು ಹೊಂದಿತು. ಆಗ [redacted] ಪ್ರಮಾಣದಿಂದ [redacted] ಆತ್ಮವು ಎರಡು ಭಾಗವಾಗಿ ವಿಭಕ್ತವಾಯಿತು. ಅದೇ ಸ್ತ್ರೀ, ಪುಮಾನ್ ಎಂಬ ಎರಡು ರೂಪವನ್ನು ತಾಳಿತು. ಇದರಿಂದ ಮಾನವಾದಿ ಸಕಲಪ್ರಾಣಿ ಸಮೂಹವು ಉತ್ಪನ್ನವಾಯಿತು. ಸ್ತ್ರೀ–ಪುರುಷ ರೂಪದ ದ್ವಂದ್ವಗಳನ್ನು ಈ ರೀತಿ ಮಾನವ ಮಿಥುನವೇ ಆದಿಯಾಗಿ ಪಿಪೀಲಿಕಾದಿ ಸಕಲ ಜೀವಜಂತುಗಳನ್ನೂ ನಿರ್ಮಿಸಿತು. "ನಾನೇ ನನ್ನ ಸ್ವಂತ ಸೃಷ್ಟಿಯಿಂದಲೇ [redacted] ರೂಪಗಳನ್ನೂ ಹೊಂದಿದ್ದೇನೆ." ಎಂದು ಈ ಆತ್ಮನಿಗೆ ಗೋಚರವಾಯಿತು. ಸೃಷ್ಟವಾದ ಯಾವ ಯಾವ ಭೂತಗಳಿವೆಯೋ ಅವೆಲ್ಲವೂ ಇದರ ವಿಕಾರ ರೂಪವೇ ಎಂಬ ಅರಿವೂ ಉಂಟಾಯಿತು. ಇದನ್ನರಿತವನು ಈ ಶಕ್ತಿಯನ್ನು ಹೊಂದುತ್ತಾನೆ[47] (ತನ್ನಿಂದ ಸೃಷ್ಟವಾದ ವಸ್ತುವಿನಲ್ಲಿ ತನ್ನ ಪ್ರತಿಬಿಂಬವನ್ನೆ

---

[redacted] ಬೃ. ಉ., ೧-೪-೧

47 ಬೃ. ಉ., ೧-೪-೧ ರಿಂದ ೫

ನೋಡುತ್ತಾನೆ.) ಇತ್ಯಾದಿ ವರ್ಣನೆಗಳಲ್ಲಿ ಪ್ರಕೃತವಾದ ಋಕ್ಕಿನಲ್ಲಿ ವಿವೃತವಾಗಿರುವ **ಆಶಿಷಾ ಇಚ್ಛಮಾನಃ ಆವರಾನ್ ಆವಿವೇಶ** ಎಂಬ ವಿಶ್ವಕರ್ಮನ ಕ್ರಿಯಾವಿಶೇಷಗಳಲ್ಲಿ ವರ್ಣಿತವಾಗಿವೆ.

ಅದ್ವಿತೀಯನಾಗಿದ್ದ ಪ್ರಜಾಪತಿಯು ಸದ್ವಿತೀಯನಾಗಲು ಜಗತ್ ಸೃಷ್ಟಿಯನ್ನಿಚ್ಛಿಸಿದನ್ನೆಂದು ಸ್ಪಷ್ಟವಾದ ತತ್ತ್ವದಿಂದಲೇ ಘಟಿತವಾದ ಪ್ರಕರಣವೂ ಕೆಲವೆಡೆಗಳಲ್ಲಿ ವರ್ಣಿತವಾಗಿದೆ. ಉದಾಹರಣೆಗೆ–ಸೃಷ್ಟಿಗೆ ಪೂರ್ವಭಾವಿಯಾಗಿ ಪ್ರಜಾಪತಿಯೊಬ್ಬನೇ ಇದ್ದನು. ಆಗ ತನ್ನ ಸೃಷ್ಟಿಯಿಂದಲೇ ತನ್ನನ್ನು ವೃದ್ಧಿಪಡಿಸಿಕೊಳ್ಳಬಯಸಿ ಆತನು ತಪಸ್ಸನ್ನಾಚರಿಸಿದನು. ಆ ತಪಃ ಫಲವಾಗಿ ಅವನ ಮುಖದಿಂದ ಅಗ್ನಿಯು ಉತ್ಪನ್ನನಾದನು. ಮುಖದಲ್ಲಿ ಉತ್ಪನ್ನನಾದುದರಿಂದ ಅಗ್ನಿಯು ಅನ್ನಭಕ್ಷಕನಾದನು.[48] ಆ ಅಗ್ನಿಗೆ ಪ್ರಜಾಪತಿಯಿಲ್ಲದೆ ಬೇರೆ ಯಾವ ವಸ್ತುವೂ ಭಕ್ಷಣಕ್ಕೆ ಸಿಕ್ಕಲಿಲ್ಲ. ಆಗ ಪ್ರಜಾಪತಿಯನ್ನೇ ನುಂಗಲು ಯತ್ನಿಸಿದನು. ಪ್ರಜಾಪತಿಯು ಇದಕ್ಕೆ ಬೆದರಿ ಓಷಧ್ಯಾದಿಗಳನ್ನು ಒಡನೆಯೇ ಉತ್ಪನ್ನ ಮಾಡಿ ಅಗ್ನಿಗೆ ಆಹುತಿ ರೂಪದಲ್ಲಿ ಅರ್ಪಿಸಿದನು. ಈ ತತ್ತ್ವವನ್ನರಿತವನು ಅಗ್ನಿಹೋತ್ರ ಮೃತ್ಯುರೂಪನಾದ ಅಗ್ನಿಯಿಂದ ಪ್ರಜಾಪತಿಯು ಪಾರಾದಂತೆ ತಾನೂ ಪಾರಾಗುತ್ತಾನೆ[49] ಇತ್ಯಾದಿಯಾಗಿ ಇತಿಹಾಸ ರೂಪವಾದ ಸನ್ನಿವೇಶವೂ ವಿವೃತವಾಗಿದೆ. ಈ ಸಂದರ್ಭವು ಅಗ್ನಿಹೋತ್ರದ ಮಹಿಮೆಯನ್ನು ತಿಳಿಸುವುದಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ವಿವೃತವಾಗಿರುವ **ಋಷಿರ್ಹೋತಾ ನ್ಯಸೀದತ್ ಪಿತಾ ನಃ** ಇತ್ಯಾದಿ ವಿವರಗಳು ಐತರೇಯೋಪನಿಷತ್ತಿನಲ್ಲಿ ವಿಶದವಾಗಿ ತಿಳಿಸಲ್ಪಟ್ಟಿವೆ.

**ಓಂ ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ನಾನ್ಯತ್ಕಿಂಚನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ [50]॥**

---

48 ಶ. ಬ್ರಾ., ೨-೨-೪-೧

49 ಶ. ಬ್ರಾ., ೨-೨-೪-೫

50 ಐ. ಉ., ೧-೧

ಆದಿಯಲ್ಲಿ ಕೇವಲ ಶುದ್ಧರೂಪವಾದ ಆತ್ಮತತ್ತ್ವವೊಂದು ಮಾತ್ರ ವಿದ್ದಿತು. ಇದನ್ನುಳಿದು ಇನ್ನಾವ ತತ್ತ್ವವೂ ಇರಲಿಲ್ಲ. ಆಗ ಈ ವಿಶ್ವಾತ್ಮವು ನಾನು ನಾಮರೂಪಗಳಿಂದ ಯುಕ್ತವಾದ ಜಗತ್ತನ್ನು ನಿರ್ಮಿಸಬೇಕು ಎಂದು ಇಚ್ಛಿಸಿತು. ಆಗ ತದಿಚ್ಛಾನುಸಾರವಾಗಿ ಈ ಲೋಕಗಳನ್ನು ಸೃಜಿಸಿದನು. ಇವುಗಳೊಂದಿಗೆ, ತೇಜಸ್ಸು, ಸಲಿಲ, ಮೃತ್ಯು ಇವುಗಳನ್ನೂ ಉತ್ಪನ್ನ ಮಾಡಿದನು. ಇದರಿಂದ ಸ್ಪಷ್ಟವಾದ ಸಲಿಲವು ದ್ಯುಲೋಕದ ಮೇಲಿರುತ್ತದೆ. ದ್ಯುಲೋಕವೇ ಇದರ ಆಧಾರ. ತೇಜೋರಶ್ಮಿಗಳೇ ಅಂತರಿಕ್ಷವು. ಪೃಥ್ವಿಯೇ ಮೃತ್ಯುರೂಪವು. ಇದಕ್ಕಿಂತಲೂ ಕೆಳಭಾಗದಲ್ಲಿರುವುದೂ ಉದಕವೇ ಆಗಿದೆ[51] [redacted] ಮೂರು ಲೋಕಗಳನ್ನು ಈಗ ನಿರ್ಮಿಸಿದ್ದಾಯಿತು. ಇನ್ನು ಈ ಲೋಕಗಳನ್ನು ರಕ್ಷಿಸುವ ಲೋಕಪಾಲಕರನ್ನು ನಿರ್ಮಿಸಬೇಕು ಎಂದು ಇಚ್ಛಿಸಿ ತನ್ನಿಂದ ಸೃಷ್ಟವಾದ ಉದಕದಿಂದಲೇ ಒಂದು ಪುರುಷ ರೂಪವನ್ನು ನಿರ್ಮಿಸಿ ಅದಕ್ಕೆ ಒಂದು ಆಕಾರವನ್ನು ಕೊಟ್ಟಿತು.[52] ಈ ಆತ್ಮನಿಂದ ಸೃಷ್ಟರಾದ ಸಕಲದೇವತೆಗಳೂ ಮಹಾಸಾಗರದಲ್ಲಿ ಬಿದ್ದರು. ಆಗ ಅವರನ್ನು ಕ್ಷುದ್ಬಾಧೆಯು ಆವರಿಸಿತು ದೇವತೆಗಳು ಈ ಆತ್ಮನನ್ನು ಕುರಿತು ನಮಗೆ ಒಂದು ವಸತಿಯನ್ನು ಕಲ್ಪಿಸು. ನಾವು ಅಲ್ಲಿ ಸುಖವಾಗಿದ್ದು ಅನ್ನವನ್ನು ಭುಜಿಸುವ ಸೌಕರ್ಯವನ್ನು ಕಲ್ಪಿಸು ಎಂದು ಯಾಚಿಸಿದರು.[53] ದೇವತೆಗಳು ಪ್ರಾರ್ಥಿಸಿದಂತೆಯೇ ಅವರಿಗೆ ಅನ್ನ

---

51 ಸ ಇಮಾಲ್ಲೋಕಾನಸೃಜತ । ಅಂಭೋ ಮರೀಚೀರ್ಮರಮಾಪೋಽದೋಽಂಭಃ ಪರೇಣ ದಿವಂ ದ್ಯೌಃ ಪ್ರತಿಷ್ಠಾಽಂತರಿಕ್ಷಂ, ಮರೀಚಯಃ ಪೃಥಿವೀ ಮರೋ ಯಾ ಅಧಸ್ತಾತ್ತಾ [redacted] (ಐ.ಉ.೧-೪)

52 [redacted] ಈಕ್ಷತೇಮೇ ನು ಲೋಕಾ ಲೋಕಪಾಲಾನ್ನು ಸೃಜಾ ಇತಿ । ಸೋಽದ್ಭ್ಯ [redacted] ಪುರುಷಂ ಸಮುದ್ಧೃತ್ಯಾ ಮೂರ್ಛಯತ್॥ (ಐ. ಉ. ೧-೩)

[redacted] ತಾ ಏತಾ ದೇವತಾಃ ಸೃಷ್ಟಾ ಅಸ್ಮಿನ್ಮಹತ್ಯರ್ಣವೇ ಪ್ರಾಪತನ್ । ತಮಶನಾಪಿಪಾಸಾಭ್ಯಾಮನ್ವವಾರ್ಜತ್ । [redacted] ಮಬ್ರುವನಾಯತನಂ [redacted] ಪ್ರಜಾನೀಹಿಯಸ್ಮಿನ್ಪ್ರತಿಷ್ಠಿತಾ ಅನ್ನಮದಾಮೇತಿ । (ಐ. ಉ. ೨-೧)

ವನ್ನು ಕಲ್ಪಿಸಲು ಹಸಿವು ಮತ್ತು ದಾಹ ಇವೆರಡೂ ಸಹ ಈ ಪರಮಾತ್ಮನನ್ನು ಸಮೀಪಿಸಿ "ನಮಗೂ ಉತ್ತಮವಾದ ವಸತಿಯನ್ನು ಕಲ್ಪಿಸು" ಎಂದು ಪ್ರಾರ್ಥಿಸಿದವು. ಆಗ ಆತ್ಮನು ಇವನನ್ನು ಕುರಿತು "ನಿಮಗೂ ಈ ದೇವತೆಗಳಲ್ಲಿಯೇ ವಸತಿಯನ್ನು ಕಲ್ಪಿಸುತ್ತೇನೆ. ದೇವತೆಗಳಿಗೆ ಯಾವ ಆಹುತಿಯು ಅರ್ಪಿತವಾಗುತ್ತದೆಯೋ, ಹಸಿವು ಮತ್ತು ದಾಹ ಇವೆರಡಕ್ಕೂ ಇದರಲ್ಲಿ ಭಾಗವಿರುತ್ತದೆ ಎಂದಿತು"[54]

ಈ ಪ್ರಕರಣದ ಮುಖ್ಯ ತಾತ್ಪರ್ಯವೇನೆಂದರೆ, ಎಲ್ಲಿ ಅನ್ನ ಸಮೃದ್ಧಿಯಿರುವುದೋ, ಅಲ್ಲಿ ಕ್ಷುತ್ತು (ಹಸಿವು) ಮತ್ತು ಬಾಯಾರಿಕೆ ಇವು ಇರುತ್ತವೆ ಎಲ್ಲಿ ಸೃಷ್ಟಿಯಿದೆಯೋ ಅಲ್ಲಿ ಮೃತ್ಯುವಿರುತ್ತದೆ. ಎಲ್ಲಿ ಲೋಕದ ವಿಸ್ತೃತಿಯೂ ವ್ಯಾಪ್ತಿಯೂ ಇರುವುದೋ, ಅಲ್ಲಿ ಸಂಕೋಚವೂ ಇರುತ್ತದೆ. ಸಮೃದ್ಧಿ–ಅಭಾವ, ಸೃಷ್ಟಿ. ಲಯ–ವಿಕಾಸ ಮತ್ತು ಸಂಕೋಚ ಇವು ಈಶ್ವರನ ಲೀಲೆಯಲ್ಲಿ ನಿತ್ಯವಾಗಿರುವ ದ್ವಂದ್ವಗಳು. ಇವೆಲ್ಲವೂ ಈಶ್ವರನ ಅಧೀನ. ಒಟ್ಟಿನಲ್ಲಿ **ಅಸ್ಯ ವಾಮಸ್ಯ ಪಲಿತಸ್ಯ ಹೋತುಃ** ಎಂಬ (೧–೧೬೪–೧) ಋಕ್ಕಿನಲ್ಲಿ ಯಾವ ಸೃಷ್ಟಿ-ಸ್ಥಿತಿ–ಲಯಕಾರಕನಾದ ವಿಶ್ವಕರ್ಮನ ತ್ರಿವಿಧವಾದ ಶಕ್ತಿಯ ವರ್ಣಿತವಾಗಿದೆಯೋ, ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಶಕ್ತಿತ್ರಯವು ವರ್ಣಿತವಾಗಿದೆ. ಇದನ್ನೇ ತೈತ್ತಿರೀಯೋಪನಿಷತ್ತಿನಲ್ಲಿ 'ಅದ್ವಿತೀಯನಾದ ನಾನು ಅನೇಕ ರೂಪಗಳನ್ನು ಹೊಂದಬೇಕು. ಆದುದರಿಂದ ಅಜನಾದರೂ ನಾನು ಜಗದ್ರೂಪದಲ್ಲಿ ಉತ್ಪನ್ನವಾಗಬೇಕು ಎಂದು ಪರಮಾತ್ಮನು ಆಶಿಸಿ ತಪಸ್ಸನ್ನಾಚರಿಸಿದನು. ಅದರ ಫಲವಾಗಿ ಈ ಜಗತ್ತನ್ನೆಲ್ಲ ನಿರ್ಮಿಸಿದನು. ಅನಂತರ ತಾನು ನಿರ್ಮಿಸಿದ ಸಕಲಭೂತಗಳಲ್ಲಿ ಪ್ರವೇಶಿಸಿದನು. ಅನಂತರ ತಾನು

---

54 ತಮಶನಾಪಿಪಾಸೇ ಅಬ್ರೂತಾಮಾವಾಭ್ಯಾಮಭಿಪ್ರಜಾನೀಹೀತಿ । ತೇ ಅಬ್ರವೀ ದೇತಾಸ್ವೇವವಾಂ ದೇವತಾಸ್ವಾಭಜಾಮ್ಯೇತಾಸು ಭಾಗಿನ್ಯೌ ಕರೋಮೀತಿ । ತಸ್ಮಾದ್ಯಸ್ಯೈ ಕಸ್ಯೈ ಚ ದೇವತಾಯೈ ಹವಿರ್ಗೃಹ್ಯತೇ ಭಾಗಿನ್ಯಾವೇವಾಸ್ಯಾ ಮಶನಾಪಿಪಾಸೇ ಭವತಃ ॥

(ಐ. [illegible] ೨-೫)

ಅಪರಿಚ್ಛಿನ್ನವಾದ ತತ್ತ್ವ(ವಸ್ತು)ವೆನಿಸಿದರೂ (ಪ್ರಾಣಿಗಳ ಶರೀರಗಳಲ್ಲಿ ಪ್ರವೇಶಿಸಿದ್ದರಿಂದ) ಪರಿಚ್ಛಿನ್ನನಾದನು. ಎಂದರೆ, ಒಂದೇ ವಸ್ತುವಾಗಿದ್ದ ಆತ್ಮನು ನಾನಾ ರೂಪಗಳಲ್ಲಿ ಗೋಚರಿಸಿದನು. ಅಪರಿಮಿತ, ಅನಂತ ಎಂಬ ಗುಣ ವಿಶಿಷ್ಟನಾಗಿದ್ದರೂ ಪರಿಮಿತಿಗೆ ಒಳಪಟ್ಟನು. ಅನಿರ್ವಾಚ್ಯನಾಗಿದ್ದರೂ ವರ್ಣನೆಗೊಳಪಟ್ಟನು. ನಿರಾಧಾರನಾಗಿದ್ದರೂ ಆಧಾರ ಅಥವಾ ಆಶ್ರಯಕ್ಕೊಳಗಾದನು. ಅಚೇತನನಾದರೂ ಚೈತನ್ಯವುಳ್ಳವನಾದವನು (ಅಹಂಭಾವಯುಕ್ತನಾದನು) ಸತ್ಯಾತ್ಮಕನಾದರೂ ಅಸತ್ಯರೂಪನಾದನು ಎಂದರೆ ನಿತ್ಯಸ್ವರೂಪನಾದರೂ ಲಯವನ್ನು ಹೊಂದುವ ಅನಿತ್ಯ ವಸ್ತುವಾದನು. ಎಲ್ಲಕ್ಕಿಂತ ಅತಿರಿಕ್ತನಾಗಿದ್ದರೂ ಸಕಲ ಪ್ರಾಣಿಗಳಲ್ಲಿಯೂ ಪ್ರವೇಶಿಸಿದ್ದನು.[55] ಇತ್ಯಾದಿ ವಿವರಣೆಗಳಿವೆ. ಈ ರೀತಿಯಾದ ಪರಸ್ಪರ ವಿರುದ್ಧ ಸ್ವರೂಪವು ಹೇಗೆಂದರೆ ಅವ್ಯಕ್ತನೂ, ನಿರ್ಗುಣನೂ, ಸರ್ವವ್ಯಾಪಕನೂ, ನಿತ್ಯನೂ ಆದ ಆತ್ಮನು (ಪರಮಾತ್ಮನು) ಒಂದು ವಿಧವಾದ ವಸ್ತುವು. ಈ ಪರಮಾತ್ಮನು ತಾನು ಸೃಷ್ಟಿಮಾಡಿದ ಚರಾಚರವಸ್ತುಗಳಲ್ಲಿ ಪ್ರವೇಶ ಮಾಡಿದ ಮೇಲೆ ಅವನಿಗಿದ್ದ ಅವ್ಯಕ್ತತ್ವ, ನಿರ್ಗುಣತ್ವ, ಸರ್ವವ್ಯಾಪಕತ್ವ ನಿತ್ಯತ್ವ ಎಂಬ ಗುಣಗಳೆಲ್ಲವೂ ತಾತ್ಕಾಲಿಕವಾಗಿ ಕಣ್ಮರೆಯಾಗಿ ಅವುಗಳ ಸ್ಥಾನದಲ್ಲಿ ಸಾಧಾರಣ ಪ್ರಾಣಿಗಳಲ್ಲಿರುವ ಪರಿಮಿತಿ, ಅನಿತ್ಯತ್ವ ಇತ್ಯಾದಿ ಗುಣಗಳು ಗೋಚರಿಸಿದವು ಎಂದು ಸ್ಪಷ್ಟವಾಗಿ ತಿಳಿಯಬೇಕು.

೩

[redacted] ಸೂಕ್ತಕ್ಕೂ ಮುಂದಿನ ಸೂಕ್ತಕ್ಕೂ ದ್ರಷ್ಟಾರ ಋಷಿ ಭುವನ ಪುತ್ರನಾದ ಭೌವನ ವಿಶ್ವಕರ್ಮಾ. ದೇವತೆಯೂ ವಿಶ್ವಕರ್ಮಾ. [redacted] ಸೂಕ್ತಗಳಲ್ಲಿರುವ ಗಹನವಾದ ವೇದಾಂತ ತತ್ತ್ವಗಳನ್ನು ಗಮನಿಸಿ, ಈ ಋಕ್ಕಿನ ವಿಷಯದಲ್ಲಿ ಸಾಯಣರು ಶತಪಥಬ್ರಾಹ್ಮಣ ವಾಕ್ಯವನ್ನು—ಬ್ರಹ್ಮ ವೈ

---

[redacted] ಸೋऽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । [redacted] ತಪೋऽತಪ್ಯತ । ಸ ತಪಸ್ತಪ್ತ್ವಾ । ಇದಗ್ಂ [redacted] ಮಸೃಜತ । ಯದಿದಂ ಕಿಂಚ ।

**ಸ್ವಯಂಭು ತಪೋಽತಪ್ಯತ । ತದೈಕ್ಷತ ನ ವೈ ತಪಸ್ಯಾನಂತ್ಯಮಸ್ತಿ ಹಂತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನಿ ಚಾತ್ಮನೀತಿ ತತ್ಸರ್ವೇಷು ಭೂತೇಷ್ವಾತ್ಮಾನಂ ಹುತ್ವಾ**[56] ಎಂದು ಉದಾಹರಿಸಿದ್ದಾರೆ. ಪೂರ್ವದಲ್ಲಿ ಸ್ವಯಂಭು ವಿಶ್ವಕರ್ಮ ಪ್ರಜಾಪತಿಯು ತಪಸ್ಸನ್ನು ಮಾಡಿದನು. ಈ ತಪಸ್ಸಿಗೆ ಕೊನೆ ಮೊದಲಿಲ್ಲ. ಎಷ್ಟು ಮಾಡಿದರೂ ಮುಗಿಯುವಂತಿಲ್ಲ. ಇದು ಅನಂತವಾಗಿದೆ. ಈ ತಪಸ್ಸನ್ನು ಮುಗಿಸಿ ಅದರಿಂದ ಅಭೀಷ್ಟವನ್ನು ಹೊಂದಲಾಗುವುದಿಲ್ಲ. ಆದ್ದರಿಂದ ಸರ್ವಮೇಧವೆಂಬ ಯಾಗವನ್ನು ಮಾಡುವೆನು. ಸಮಸ್ತಭೂತಗಳಲ್ಲಿಯೂ ತನ್ನನ್ನು ಆಹುತಿಯಾಗಿ ಅರ್ಪಿಸುವುದೂ, ಎಲ್ಲಾ ಭೂತಜಾತಗಳನ್ನು ತನ್ನಲ್ಲಿಯೇ ಅರ್ಪಿಸುವುದೂ ಈ ಯಾಗದ ವೈಶಿಷ್ಟ್ಯವು ಎಂದು ಯೋಚಿಸಿ ಅದರಂತೆ ಮಾಡಿದನು ಎಂದು ಬ್ರಾಹ್ಮಣ ವಾಕ್ಯದ ತಾತ್ಪರ್ಯವು.

ಈ ವಿಷಯವನ್ನು ಇನ್ನೂ ಸ್ಪಷ್ಟವಾಗುವಂತೆ ವಿವರಿಸುವುದಕ್ಕಾಗಿ ಭಾಷ್ಯಕಾರರು ಯಾಸ್ಕರ ನಿರುಕ್ತವನ್ನು ಇಲ್ಲಿ ವಿವರಿಸಿದ್ದಾರೆ: 'ವಿಶ್ವಕರ್ಮಾ ಎಂಬ ಋಷಿಯು ಸರ್ವಮೇಧವೆಂಬ ಯಾಗವನ್ನು ಮಾಡಲುಪಕ್ರಮಿಸಿ ಅದರಲ್ಲಿ ಸರ್ವಭೂತಗಳನ್ನೂ ಹೋಮಮಾಡಿ ಕಡೆಗೇ ತನ್ನನ್ನೇ ಅಗ್ನಿಯಲ್ಲಿ ಆಹುತಿಯನ್ನಾಗಿ ಅರ್ಪಿಸಿಕೊಂಡನು. ಈ ವಿಷಯವೇ **ಯ ಇಮಾ ವಿಶ್ವಾ ಭುವನಾನಿ ಜುಹ್ವತ್** ಎಂಬ ಋಕ್ಕಿನಲ್ಲಿ ಪ್ರತಿಪಾದಿತವಾಗಿದೆ[57] ಎಂದು ನಿರ್ವಚನದ ಅಭಿಪ್ರಾಯ.

---

ತತ್ಸೃಷ್ಟ್ವಾ | ತದೇವಾನು ಪ್ರಾವಿಶತ್ | ತದನು ಪ್ರವಿಶ್ಯ | ಸಚ್ಚತ್ಯಚ್ಚಾಭವತ್ | ನಿರುಕ್ತಂ ಚಾನಿರುಕ್ತಂ ಚ | ನಿಲಯನಂ ಚಾನಿಲಯನಂ ಚ | ವಿಜ್ಞಾನಂ ಚಾವಿಜ್ಞಾನಂ ಚ | ಸತ್ಯಂ ಚಾನೃತಂ ಚ ಸತ್ಯಮಭವತ್ | ಯದಿದಂ ಕಿಂಚ | ತತ್ಸತ್ಯಮಿತ್ಯಾಚಕ್ಷತೇ | ತದಪ್ಯೇಷ ಶ್ಲೋಕೋ ಭವತಿ | (ತೈ. ಉ. ೨-೬)

56 ಶ. ಬ್ರಾ. ೧೩-೭-೧

57 ವಿಶ್ವಕರ್ಮಾ ಸರ್ವಮೇಧೇ ಸರ್ವಾಣಿ ಭೂತಾನಿ ಜುಹವಾಂಚಕಾರ | ಆತ್ಮಾನಮಪ್ಯಂತತೋ ಜುಹವಾಂಚಕಾರ | ತದಭಿವಾದಿನ್ಯೇಷರ್ಗ್ಭವತಿ ಯ ಇಮಾ ವಿಶ್ವಾ ಭುವನಾನಿ ಜುಹ್ವದಿತಿ ॥ (ನಿ. ೧೦-೨೬)

ಈ ಸೂಕ್ತದಲ್ಲಿ ಸರ್ವೇಶ್ವರನು ಮಾಡುವ ಸೃಷ್ಟಿ–ಸ್ಥಿತಿ–ಲಯಗಳ ವರ್ಣನೆ ಇದೆ. ಪ್ರಾರಂಭದ ಈ ಮೊದಲನೆಯ ಋಕ್ಕಿನಲ್ಲಿ ಲಯದ ವಿವರಣೆ ಇದೆ. ಸೃಷ್ಟಿ ಸ್ಥಿತಿ ಲಯಗಳು ಒಂದರನಂತರ ಇನ್ನೊಂದರಂತೆ ಪರ್ಯಾಯ ಕ್ರಮದಲ್ಲಿ ಎಡೆ ಬಿಡದೆ ನಡೆಯುತ್ತಲೇ ಇರುವುದರಿಂದ ಈ ಸೃಷ್ಟಿ ಸ್ಥಿತಿ ಲಯ ಗಳಲ್ಲಿ ಯಾವುದು ಮೊದಲು ಹೇಳಬಹುದು.?! ಆದ್ದರಿಂದ ಇಲ್ಲಿ ಲಯದ ವಿಷಯವನ್ನ ಮೊದಲು ಪ್ರಸ್ತಾಪ ಮಾಡಲಾಗಿದೆ.

**ಯ ಇಮಾ ವಿಶ್ವಾಭುವನಾನಿ ಜುಹ್ವತ್....ಸ ಅವರಾನ್ ಆ ವಿವೇಶ**— ಈ ಸೂಕ್ತಕ್ಕೆ ವಿಶ್ವಕರ್ಮನೇ ದೇವತೆಯೆಂದು ಹೇಳಿದೆಯಷ್ಟೆ ಈ ವಿಶ್ವಕರ್ಮನೆಂಬುವನು ಯಾರು ? ಅವನ ಸ್ವರೂಪವೇನು ? ಎಂದು ಸೂಕ್ಷ್ಮವಾಗಿ ವಿಮರ್ಶೆಮಾಡುವುದು ಅವಶ್ಯಕವಾಗಿದೆ. ಯಾಸ್ಕರು ಹೇಳಿರು ವಂತೆ **ವಿಶ್ವಕರ್ಮಾ–ವಿಶ್ವಸ್ಯ ಕರ್ತಾ** ಎಂದರೆ ವಿಶ್ವವನ್ನೇ ನಿರ್ಮಾಣ ಮಾಡಿದವನು ಎಂದು. ವಿಶ್ವವೆಂದರೆ ನಾವು ವಾಸಿಸುತ್ತಿರುವ ಜಗತ್ತೇ ಮೊದ ಲಾದ ಅಖಿಲಾಂಡಕೋಟಿ ಬ್ರಹ್ಮಾಂಡಗಳು ಎಂದರ್ಥ. ಈ ವಿಶ್ವವು ಅನಂತ ವಾಗಿರುವುದರಿಂದ ಇದಕ್ಕೆ ಪರಿಮಿತಿಯೇ ಇಲ್ಲ. ಇವುಗಳನ್ನೆಲ್ಲಾ ತನ್ನ ಅದ್ಭುತ ವಾದ ಮಹಾಶಕ್ತಿಯಿಂದ ಸೃಷ್ಟಿ ಮಾಡಿದವನೇ ವಿಶ್ವಕರ್ಮನು. ಇವನನ್ನು ಪರಬ್ರಹ್ಮ, ಸರ್ವೇಶ್ವರ, ಪರಮಾತ್ಮಾ ಎಂದು ಮೊದಲಾದ ಯಾವ ಶಬ್ದ ದಿಂದಲಾದರೂ ಕರೆಯಬಹುದು. ಏಕೆಂದರೆ **ವಿಶ್ವನಿರ್ಮಾಣ ಮಾಡುವ ಶಕ್ತಿ ಇತರ ದೇವತೆಗಳಿಗಿರುವುದಿಲ್ಲ. ಎಲ್ಲರಿಗಿಂತಲೂ ಶ್ರೇಷ್ಠನಾದ ಮತ್ತು ಸರ್ವವ್ಯಾಪಕನಾದವನೇ ಸಮರ್ಥನಾದ್ದರಿಂದ ಅವನೇ ವಿಶ್ವಕರ್ಮನೆಂಬ ವಿಷಯದಲ್ಲಿ ಯಾವ ಸಂಶಯವೂ ಇರಕೂಡದು.** ಈ ದೃಷ್ಟಿಯಿಂದಲೇ ಈ ಸೂಕ್ತ ಮತ್ತು ಮುಂದಿನ ಸೂಕ್ತಗಳನ್ನು ವಿಮರ್ಶೆಮಾಡಿ ಅರ್ಥಾನುಸಂಧಾನ ಮಾಡಬೇಕು. ಪ್ರಕೃತ **ಯ ಇಮಾ ವಿಶ್ವಾ ಭುವನಾನಿ ಜುಹ್ವತ್ ಋಷಿರ್ಹೋತಾ** ಎಂಬ ವಾಕ್ಯದಲ್ಲಿ ಸಮಸ್ತವಾದ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಸರ್ವೇಶ್ವರನು ಹೋಮ ಮಾಡಿದನು ಅಥವಾ ಆಹುತಿ ರೂಪದಲ್ಲಿ ಅರ್ಪಿಸಿದನು ಎಂದಿದೆ. **ಜುಹ್ವತ್**–ಹೋಮ ಮಾಡಿದನು ಎಂದರೆ,ಇಲ್ಲಿ ನಾಶಮಾಡಿದನು ಎಂದಭಿಪ್ರಾಯವು. ಅಗ್ನಿಯಲ್ಲಿ ಹೋಮ

ಮಾಡುವ ಆಜ್ಯಾದಿದ್ರವ್ಯವು ಯಾವ ರೀತಿ ಅಗ್ನಿಯಲ್ಲಿಯೇ ಸೇರಿ ಹೋಗಿ ಪುನಃ ಅದರ ಅಸ್ತಿತ್ವವಿರುವುದಿಲ್ಲವೋ ಅದರಂತೆ ಹೋಮ ಮಾಡಿದ ವಸ್ತುವು ಹಿಂದಕ್ಕೆ ಬರುವುದಿಲ್ಲ. ಎಂದರೆ ಆ ವಸ್ತುವು ತನ್ನ ಪೂರ್ವ ಸ್ಥಿತಿಯನ್ನು ಕಳೆದುಕೊಂಡು ಬೇರೆ ವಿಧವಾದ ಸ್ಥಿತಿಯನ್ನು ಹೊಂದುವುದು. ಎಂದರೆ ವಸ್ತುವು ವ್ಯತ್ಯಸ್ತವಾದ ಪರಿಸ್ಥಿತಿಯನ್ನು ಹೊಂದುವುದು. ಅಗ್ನಿಯಲ್ಲಿ ಹೋಮ ಮಾಡಿದ ಅಜ್ಯವು ನಾಶವಾಗುವುದಿಲ್ಲ. ಅದು ತೇಜೋ ರೂಪದಲ್ಲಿ ಪರಿವರ್ತಿತವಾಗುವುದು, ನಮ್ಮ ಕಣ್ಣಿಗೆ ಕಾಣುತ್ತಿದ್ದ ಅಜ್ಯವು ಜ್ಯೋತಿ ಅಥವಾ ಔಷ್ಣ್ಯವೆಂದು ಹೇಳಲಾಗುವ ರೂಪಾಂತರ ಸ್ಥಿತಿಯನ್ನು ಹೊಂದುವುದು. ಅದರಂತೆಯೇ, ವಿಶ್ವಕರ್ಮನು ಈ ವಿಶ್ವವನ್ನು ಅದರಲ್ಲಿ ಇರುವ ಸಕಲ ಚರಾಚರವಸ್ತುಗಳನ್ನೂ ಹೋಮ ಮಾಡಿದನು ಎಂದು ಹೇಳುವಾಗ ಆ ಭುವನಗಳೆಲ್ಲವೂ ರೂಪಾಂತರವನು ಹೊಂದುವವು. ಎಂದರೆ ಸೂಕ್ಷ್ಮರೂಪ ದಿಂದ ಆತನಲ್ಲಿಯೇ ಐಕ್ಯವಾಗಿರುವವು. ಏಕೆಂದರೆ ಪರಮಾತ್ಮನಿಂದಲೇ ಉತ್ಪನ್ನವಾಗುವ ಸಕಲ ಲೋಕಗಳೂ ಪರಮಾತ್ಮನಲ್ಲಿಯೇ ಲಯವನ್ನು ಹೊಂದುವವು. ಪುನಃ ಸೃಷ್ಟಿ ಕಾಲದಲ್ಲಿ [illegible] ಪರಮಾತ್ಮನಿಂದಲೇ ಉತ್ಪನ್ನವಾಗುವವು.

**ನಿ ಅಸೀದತ್ ಪಿತಾ ನಃ — ಪಿತಾ ನಃ** ಎಂಬ ಶಬ್ದಗಳು ನಮಗೆ ಪಾಲಕನೂ, ಉತ್ಪತ್ತಿಗೆ ಕಾರಣನೂ ಆದ ವಿಶ್ವಕರ್ಮಾ ಅಥವಾ ಸರ್ವೇಶ್ವರ ನೆಂಬರ್ಥವನ್ನು ಸೂಚಿಸುವವು. ಮೇಲಿನ ವಾಕ್ಯದಲ್ಲಿ ಹೇಳಿದಂತೆ ಸಕಲ ಭುವನಗಳನ್ನು **ಹೋಮ**ಮಾಡಿದ ನಂತರ ಎಂದರೆ ಲಯ(ಸಂಹಾರ) ಮಾಡಿದ ನಂತರ ಆ ಸರ್ವೇಶ್ವರನು **ನಿ ಅಸೀದತ್** ತಾನೂ ಯಾರಿಗೂ ಗೋಚರವಿಲ್ಲ ದವನಾಗಿ ಗೂಢನಾಗಿದ್ದನು. ಎಂದರೆ ಲೋಕಗಳನ್ನು ಅರ್ಪಿಸಿದಂತೆ ತಾನೂ ತನ್ನನ್ನರ್ಪಿಸಿಕೊಂಡನು. ಪ್ರತ್ಯಕ್ಷಗೋಚರತ್ವವನ್ನು ತ್ಯಜಿಸಿ ನಿರಾಕಾರನಾಗಿ ಸೂಕ್ಷ್ಮಾವಸ್ಥೆಯಲ್ಲಿದ್ದನು. [illegible] ಕಾಲದಲ್ಲಿ ಪರಮಾತ್ಮನು ಯಾರು, ಲೋಕಗಳು ಯಾವುವು ಎಂಬ ಯಾವ ವಿಧವಾದ ಭೇದಗಳೂ ಇರಲಿಲ್ಲ. ಸರ್ವವೂ ನಾಮರೂಪರಹಿತವಾಗಿ ಬ್ರಹ್ಮ ಸ್ವರೂಪವೊಂದೇ ಆಗಿದ್ದಿತು. ಪರಬ್ರಹ್ಮದ ಈ ಸ್ಥಿತಿಯನ್ನು **ಅಸತ್** ಎಂದು ಕರೆಯಬಹುದು. ಅಸತ್ ಎಂದರೆ ಏನೂ

ಇಲ್ಲದ ಶೂನ್ಯವೆಂದರ್ಥವಲ್ಲ. ನಾಮರೂಪರಹಿತವಾದ ಎಂದರೆ ನಿರ್ವಿಕಾರ ವಾದ, ಸರ್ವತ್ರ ವ್ಯಾಪ್ತವಾದ ಆತ್ಮನ (ಪರಮಾತ್ಮನ) ಸೂಕ್ಷ್ಮಾವಸ್ಥೆಯು, ಪುನಃ ಸೃಷ್ಟಿ ಕಾಲದಲ್ಲಿ [redacted] **ಅಸತ್** ಎಂಬ ನಿರ್ವಿಕಾರ ಬ್ರಹ್ಮನಿಂದಲೇ **ಸತ್** ಎಂದು ಹೇಳಲ್ಪಡುವ ನಾಮರೂಪಸಹಿತವಾದ ಜಗತ್ತುಗಳು ಆವಿರ್ಭವಿಸುವವು.

ಇಲ್ಲಿ ಭಾಷ್ಯಕಾರರು—**ಆತ್ಮಕೃತೇನ ಕರ್ಮಣಾ ದೇವೋತ್ಪತೇ** [redacted] **ಚೈಕಸ್ಯ ಜನ್ಯಜನಕಭಾವೋ ವಿರುಧ್ಯತೇ ತಪೋಬಲೇನ ಶರೀರದ್ವಯ ಸ್ವೀಕಾರಾತ್** । ಎಂದು ಹೇಳಿದ್ದಾರೆ. ಎಂದರೆ ತಾನು ಮಾಡುವ ಕರ್ಮಗಳಿಗೆ ಅನುಸಾರವಾಗಿ ಆಯಾ ಪ್ರಾಣಿಗಳಿಗೆ ಅವರವರ ಶರೀರೋತ್ಪತ್ತಿಯು ಉಂಟಾ ಗುವುದು. ಇಲ್ಲಿ ಸರ್ವೇಶ್ವರನು ಸೃಷ್ಟಿ ಮಾಡುವನು, ಅವನೇ ನಾಶಮಾಡು ವನು. ತಾನೇ ಒಂದು ವಸ್ತುವಿನ ಉತ್ಪತ್ತಿಗೆ ಕಾರಣನೂ, ಉತ್ಪತ್ತಿ ಯಾದ ವಸ್ತುವೂ ಈ ಎರಡೂ ಆಗುವುದು ಹೇಗೆ? ಇದು ಪರಸ್ಪರ ವಿರುದ್ಧ ವಲ್ಲವೇ ಎಂದರೆ ತಪೋಬಲದಿಂದ ಜನ್ಯ ಜನಕಭಾವವು ಸಾಧ್ಯವೆಂದೂ ಎರಡು ಶರೀರಗಳನ್ನು ಏಕಕಾಲದಲ್ಲಿ ತಪೋಬಲದಿಂದ ಹೊಂದುವುದು ಸಾಧ್ಯ ವೆಂದೂ ಹೇಳಿದ್ದಾರೆ. ಛಾಂದೋಗ್ಯೋಪನಿಷತ್ತಿನಲ್ಲಿ **ಸ ಏಕಧಾ ಭವತಿ** (ಛಾ. ಉ. ೭–೨೬–೨) ಬಹುವಿಧ ರೂಪಗಳಿಂದಿದ್ದ [redacted] ಪರಮಾತ್ಮನು ಒಂದೆ ರೂಪವುಳ್ಳವನಾಗುವನು ಎಂದಿದೆ. ಮತ್ತು ತೈತ್ತಿರೀಯೋಪನಿಷತ್ತಿನಲ್ಲಿ **ಬಹು ಸ್ಯಾಂ ಪ್ರಜಾಯೇಯೇತಿ** ನಾನು ಅನೇಕ ರೂಪಗಳಾಗಿ ಆಗ ಬೇಕೆಂದು ಬಯಸುತ್ತೇನೆ ಎಂಬ ಪರಮಾತ್ಮನ ವಚನವಿದೆ. ಎಂದರೆ ಸೃಷ್ಟಿ ಕಾಲದಲ್ಲಿ [redacted] ಪರಮಾತ್ಮನೇ ಅನೇಕ ಬಗೆಯ ರೂಪಗಳಿಂದಿದ್ದು ಲಯಕಾಲ ದಲ್ಲಿ ಒಂದೇ ಆಗುವನೆಂಬ ಅರ್ಥವು ಈ ಉಪನಿಷದ್ವಾಕ್ಯಗಳಲ್ಲಿ ಅಡಕವಾಗಿದೆ ಏಕೆಂದರೆ, ಲೋಕದಲ್ಲಿ ಕಾಣುವ ಸಮಸ್ತ ಚರಾಚರ ವಸ್ತುಗಳೂ ಪ್ರಾಣಿಗಳೂ ಎಲ್ಲವೂ ವಿಶ್ವಕರ್ಮ ಪರಬ್ರಹ್ಮನ ರೂಪಗಳೇ ಆಗಿವೆ. ಆ ಬ್ರಹ್ಮವನ್ನು ಬಿಟ್ಟು ಬೇರೆ ವಸ್ತುವೇ ಇಲ್ಲ. ಆದ್ದರಿಂದ [redacted] ಬ್ರಹ್ಮವೇ ಸೃಷ್ಟಿಕಾಲದಲ್ಲಿ ಅನೇಕ ರೂಪಗಳಿಂದಲೂ' ಲಯ ಕಾಲದಲ್ಲಿ ಒಂದೇ ಸ್ವರೂಪದಿಂದಲೂ ಇರುವುದು. ಈ ಲಯಾವಸ್ಥೆಯಲ್ಲಿರುವ ಬ್ರಹ್ಮವನ್ನೇ [redacted] **ನಿ ಆಸೀದತ್** [redacted] **ನಃ**

ಎಂಬ ವಾಕ್ಯವು ವಿವರಿಸುವುದು. ಈ ವಾಕ್ಯದಲ್ಲಿ ಪ್ರಳಯಾನಂತರ ಸೃಷ್ಟಿಗೆ ಪೂರ್ವದಲ್ಲಿ ಇರುವ ಸ್ಥಿತಿಯ ವರ್ಣನೆ ಇದೆ. [redacted] ಕಾಲದಲ್ಲಿ ಇದ್ದ ಸ್ಥಿತಿಯನ್ನು ಋ. ಸಂ. ೧೦ನೇ ಮಂಡಲದ ೧೨೯ನೇ ಸೂಕ್ತವು[58] ಚೆನ್ನಾಗಿ ವಿವರಿಸುತ್ತದೆ—

ಸೃಷ್ಟಿಗೆ ಪೂರ್ವಗಲ್ಲಿ ಸತ್, ಅಸತ್ಎಂದು ಹೇಳಲ್ಪಡುವ ವ್ಯಕ್ತಾವ್ಯಕ್ತ ವಸ್ತುಗಳೊಂದೂ ಇರಲಿಲ್ಲ. ಲೋಕಗಳಾಗಲಿ ಅಂತರಿಕ್ಷವಾಗಲಿ, ಬೇರೆ ಗುರುತಿಸಬಹುದಾದ ಯಾವ ವಸ್ತುವೂ ಇರಲಿಲ್ಲ. ಆವರಕವಾದ ಮತ್ತಾವ ವಸ್ತುವೂ ಇರಲಿಲ್ಲ. ಸುಖದುಃಖಾದಿಗಳಾಗಲಿ ಅವುಗಳನ್ನು ಅನುಭವಿಸಲು ಅರ್ಹವಾದ ಪ್ರಾಣಿಗಳಾಗಲಿ ಇರಲಿಲ್ಲ. ಇನ್ನೇನಿತ್ತು ? ಅಗಾಧವಾದ ಎಲ್ಲೆಲ್ಲಿಯೂ ವ್ಯಾಪಿಸಬಹುದಾದ ಸಮುದ್ರದಂತಿರುವ ನೀರು ತುಂಬಿತ್ತೇ ? ಎಂದರೆ ಅದೂ ಇರಲಿಲ್ಲ. ಪ್ರಾಣಿಗಳೇ ಇರಲಿಲ್ಲವೆಂದ ಮೇಲೆ ಮೃತ್ಯುವೂ ಇರಲಿಲ್ಲ. ಅಮೃತವೆಂದು ಹೇಳಲ್ಪಡುವ ಭೋಗ್ಯ ವಸ್ತುವೂ ಇರಲಿಲ್ಲ. ಹಗಲಾಗಲಿ, ರಾತ್ರಿಯಾಗಲಿ ಇರಲಿಲ್ಲ. ಸೂರ್ಯ ಚಂದ್ರರೇ ಇಲ್ಲದಿರುವಾಗ ರಾತ್ರಿ ಹಗಲುಗಳೆಲ್ಲಿ ಬಂತು ? ಆದ್ದರಿಂದ ರಾತ್ರಿ ಹಗಲುಗಳಾಗಲಿ, [redacted] ವಿಭಾಗವಾಗಲಿ, ಯಾವುದೂ ಇರಲಿಲ್ಲ. ಹಾಗಾದರೆ ಮತ್ತೇನಿದ್ದಿತು ? ವಿಶ್ವಕರ್ಮತತ್ತ್ವ ಮಾತ್ರ ಇದ್ದಿತು; ಅದರ ವಿನಾ ಬೇರೆ ಯಾವುದೂ ಇರಲಿಲ್ಲ. ಅದು ವ್ಯಕ್ತರೂಪದಲ್ಲಿರಲಿಲ್ಲ. ಕತ್ತಲೆಯು ಹೇಗೆ ಕಾಣಿಸುವುದಿಲ್ಲವೋ ಹಾಗೆ [redacted] ವಿಶ್ವಕರ್ಮ ತತ್ತ್ವವು ದೃಷ್ಟಿಗೆ ಅಗೋಚರವಾಗಿಯೂ, ನೀರಿನಂತೆ ಸರ್ವತ್ರ ವ್ಯಾಪಕವಾಗಿಯೂ ಇದ್ದಿತು.

---

[redacted] ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋವ್ಯೋಮಾ ಪರೋ ಯತ್ ।
ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಂ ।
[redacted] ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ [redacted] ಕಿಂಚನಾಸ ।
[redacted] ಆಸೀತ್ತಮಸಾ ಗೂಳ್ಹಮಗ್ರೇಽಪ್ರಕೇತಂ [redacted] ಇದಂ ॥
(ಋ. ಸಂ. ೧೦–೧೨೯-೧,೨,೩)

[redacted] **ಆಶಿಷಾ ದ್ರವಿಣಂ ಇಚ್ಛಮಾನಃ ಪ್ರಥಮಚ್ಛ** [redacted] **ಅವರಾನ್** [redacted] **ವಿವೇಶ**—ಹಿಂದೆ ವಿವರಿಸಿದಂತೆ ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯು ಯಾವಾಗಲೂ ಇರುವುದೇ ? ಹಾಗಿಲ್ಲದಿದ್ದರೆ ಈಗ ಕಾಣುತ್ತಿರುವ ಈ ಜಗದಾದಿಗಳ ಸೃಷ್ಟಿಯು ಹೇಗಾಯಿತು? ಎಂಬ ವಿಷಯವು ಈ ಋಕ್ಕಿನ ಉತ್ತರಾರ್ಧವಾದ [redacted] **ಆಶಿಷಾ** ಎಂಬ ವಾಕ್ಯದಿಂದ ವಿವರಿಸಲಾಗಿದೆ. ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯಲ್ಲಿ ಅವ್ಯಕ್ತ ಸ್ವರೂಪದಿಂದಿದ್ದ ಪರಬ್ರಹ್ಮಮಾತ್ರವಿದ್ದಿತೆಂದೂ ಬೇರೆ ಏನೂ ಇರಲಿಲ್ಲವೆಂದೂ ಹಿಂದೆ ಹೇಳಿದೆಯಷ್ಟೆ ? **ಆತ್ಮಾವಾ ಇದಮೇಕ ಏವಾಗ್ರ ಆಸೀತ್ । ಸದೇವ ಸೋಮ್ಯೇದಮಗ್ರ ಆಸೀತ್ ।** ಇತ್ಯಾದಿ ಶ್ರುತಿವಾಕ್ಯಗಳಲ್ಲಿ ವಿವರಿಸಿರುವಂತೆ ಆ ಕಾಲದಲ್ಲಿ ವಿಶ್ವಕರ್ಮ ಅಥವಾ ಆತ್ಮವೆಂಬ ವಸ್ತು ಮಾತ್ರವೇ ಇದ್ದಿತು. ಬೇರೇನೂ ಇರಲಿಲ್ಲ. ಕೆಲವು ಕಾಲದ ಮೇಲೆ ಆ ವಿಶ್ವಕರ್ಮನಲ್ಲಿ ಸೃಷ್ಟಿಯನ್ನು ಮಾಡಬೇಕೆಂಬ ಇಚ್ಛೆಯುಂಟಾಯಿತು. ಆಗ ಆ ವಿಶ್ವಕರ್ಮನು [redacted] **ಸ್ಯಾಂ ಪ್ರಜಾಯೇಯ**—ಅನೇಕ ರೂಪಗಳನ್ನು ತಾಳಬೇಕೆಂದು ಬಯಸಿದನು. ಎಂದರೆ ಅನೇಕ ವಿಧವಾದ ಜಗದಾದಿಗಳನ್ನು ಸೃಷ್ಟಿಸಬೇಕೆಂದು ಇಚ್ಛಿಸಿದನು. ಇದನ್ನು ತೈತ್ತಿರೀಯ ಉಪನಿಷತ್ತಿನಲ್ಲಿ [redacted] ರೀತಿ ವಿವರಿಸಿದೆ: ಆಗ ವಿಶ್ವಕರ್ಮ ಬಹುರೂಪಗಳನ್ನು ಹೊಂದಬೇಕೆಂದು ಇಚ್ಛಿಸಿದನು. ಅದಕ್ಕಾಗಿ ಅವನು ತಪಸ್ಸನ್ನು ಮಾಡಿ [redacted] ಜಗತ್ತನ್ನು ಸೃಷ್ಟಿಸಿದನು. ಸೃಷ್ಟಿ ಮಾಡಿದ ನಂತರ ಜಗತ್ತಿನ ಸಮಸ್ತ ಚರಾಚರ ವಸ್ತು ಪ್ರಾಣಿಗಳಲ್ಲಿಯೂ ಪ್ರವೇಶಿಸಿದನು ಎಂದರೆ ವಿಶ್ವಕರ್ಮನೇ ನಾನಾ ರೂಪಗಳಲ್ಲಿ ವ್ಯಕ್ತನಾದನು ಅಥವಾ ಪರಿವರ್ತಿತನಾದನು. ಸೃಷ್ಟಿ ಮಾಡಿದ ವಸ್ತುಗಳಲ್ಲಿ ಪ್ರವೇಶಿಸಿದನು[39] ಎಂದರೆ ಸಮಸ್ತಗಳಲ್ಲಿಯೂ ಚೈತನ್ಯವನ್ನು ತುಂಬಿದನು. ವಿಶ್ವಕರ್ಮನ ಅಂಶವಾದ ಚೈತನ್ಯವಿಲ್ಲದಿರುವ ಯಾವ ವಸ್ತುವೂ ಈ ಜಗತ್ತಿನಲ್ಲಿಲ್ಲ. ಇರುವುದಕ್ಕೆ ಸಾಧ್ಯವೂ ಇಲ್ಲ. ವಿಶ್ವಕರ್ಮನೇ ಅನೇಕ

---

[redacted] **ಸೋಽಕಾಮಯತ। ಬಹು ಸ್ಯಾಂ ಪ್ರಜಾಯೇಯೇತಿ।** [redacted] **ತಪೋಽತಪ್ಯತ। ಸ ತಪಸ್ತಪ್ತ್ವಾ। ಇದಗ್ಂ ಸರ್ವಮಸೃಜತ। ಇದಗ್ಂ ಸರ್ವಮಸೃಜತ। ಯದಿದಂ ಕಿಂಚ। ತತ್ಸೃಷ್ಟ್ವಾ। ತದೇವಾನುಪ್ರಾವಿಶತ್।**
(ತೈ. ಉ. ೨, ೬)

ರೂಪಗಳಲ್ಲಿ ವ್ಯಕ್ತನಾದಾಗ (ಎಂದರೆ ಜಗತ್ತು ಸೃಷ್ಟಿಸಲ್ಪಟ್ಟಾಗ) ಪರಮಾತ್ಮನ ಅಂಶಗಳೇ ಆದ [redacted] ಸಮಸ್ತ ಜಗತ್ತೂ [redacted] ಆತ್ಮನ ಚೈತನ್ಯದಿಂದ ಕೂಡಿರುವುದು ಸಹಜವೇ ಆಗಿದೆ.

ಮುಖ್ಯ ಸಾರಾಂಶವೇನೆಂದರೆ- ಈ ಋಕ್ಕಿನಲ್ಲಿ ವಿಶ್ವಕರ್ಮ ಪರಮೇಶ್ವರನು ದೃಷ್ಟಿಗೆ ಗೋಚರವಾಗುವ ಈ ಸಮಸ್ತ ಜಗತ್ತುಗಳನ್ನು ಉಪಸಂಹರಿಸಿದನು (ನಾಶ ಮಾಡಿದನು). ಇದೇ ಪ್ರಳಯವು ಅನಂತರ ಬಹುಕಾಲದವರೆಗೆ ಅವ್ಯಕ್ತ ಸ್ವರೂಪದಿಂದಿದ್ದ ಆತನೇ ಇದ್ದನು. ಬೇರೆ ಏನೂ ಇರಲಿಲ್ಲ. ಆಗ ವಿಶ್ವಕರ್ಮನಲ್ಲಿ ಸೃಷ್ಟಿ ಮಾಡಬೇಕೆಂಬ ಎಂದರೆ ತಾನೇ ಅನೇಕ ರೂಪಗಳಲ್ಲಿ ವ್ಯಕ್ತನಾಗಬೇಕೆಂಬ ಇಚ್ಛೆಯುಂಟಾಯಿತು. ಅದರಂತೆ ಜಗತ್ತನ್ನೂ ಅದರಲ್ಲಿರುವ ನಾನಾ ವಿಧವಾದ ಚರಾಚರಾತ್ಮಕ ವಸ್ತುಗಳನ್ನೂ, ಪ್ರಾಣಿಗಳನ್ನೂ, ಸೃಷ್ಟಿಸಿ ಅವುಗಳಲ್ಲಿ ತಾನು ಅಂತರ್ಯಾಮಿರೂಪವಾಗಿ ಪ್ರವೇಶಿಸಿದನು ಎಂಬ ವಿಷಯವು ಈ ಋಕ್ಕಿನಲ್ಲಿ ವಿವೃತವಾಗಿದೆ.]

**ಯಃ ಋಷಿಃ ಜಾನನ್ ತತ್ತತ್ಕರ್ಮಾನುಗುಣ ಜೀವ ಭೋಗ್ಯ ಫಲ ಜಾತಿಮಿತಿ ಜ್ಞಾನಕರ್ಮಾ । ನಃ [redacted] -ಪಾತೇ ಡಿ ತೃಚ್ ಪ್ರತ್ಯಯಾಂತ ಶಬ್ದಸ್ಯಾತ್ಮಾತೇತ್ಯರ್ಥಃ । ತೇನ ಚೋತ್ಪತ್ತಿ ಪ್ರಲಯಾವಪ್ಯುಪಲಕ್ಷಣೀಯೌ । ಇಮಾನಿ ವಿಶ್ವಾನಿ ಭುವನಾನಿ ಜುಹ್ವತ್ -ಆದದಾನಃ ಗೃಹ್ಣಾನಃ ಅನುಗ್ರಹ್ಣಾನಃ । ನಿಷಸಾದ -ಪ್ರಾಣಿಕರ್ಮಚೋದಿತಃ ಸನ್ ಜಗತ್ಸರ್ಜನಾಯ ಸ್ವಸ್ವರೂಪಾನು ಸಂಧಾನಾದ್ವಿರಮ್ಯ ಅವಾಸ್ಥಿತ । ಸ ಸರ್ವಂ ಜಗತ್ಸೃಷ್ಟ್ವಾ ತೇಷು ಪ್ರಾಣಿಷು ಮಧ್ಯೇ ಭಕ್ತತಮೈರ್ದೀಯಮಾನಂ ದ್ರವಿಣಂ ಹವಿರಾದಿ ಕಮಿಚ್ಛಮಾನಃ ಪರಮಸ್ಯ ಸ್ವಸ್ವರೂಪಸ್ಯ ನಿರುಪಾಧಿಕಸ್ಯ ಛದಃ ಛಾದಕಂ ಆಚ್ಛಾದಕಂ ಉಪಾಧಿಮಾವಿವೇಶ । ಕೇನ ಕಾರಣೇನ ? ತದಾಹ [redacted] । ಭಕ್ತಾನುಗ್ರಹ ಕಾಮನಯೇತಿ ತದರ್ಥಃ ।**

ಆಯಾ ಕರ್ಮಗಳಿಗೆ ಅನುಗುಣವಾಗಿ ಜೀವ ಭೋಗ್ಯವಾದ ಫಲ ಸಮೂಹವು ಜ್ಞಾನಕರ್ಮಗಳಾಗಿರುತ್ತವೆ. ಪಾಲನಾರ್ಥಕವಾದ **ಪಾ** ಧಾತು

ವಿಗೆ ಡಿತ್ರಜ್ ಪ್ರತ್ಯಯವು ಬಂದಿರುವುದರಿಂದ ಪಾತಾ ಎಂಬ ಶಬ್ದರೂಪ ವಾಗುತ್ತದೆ. [redacted] ಶಬ್ದದಿಂದ ಪಾಲಕನು ಎಂದು ಅರ್ಥವಾಗುತ್ತದೆ. ಪಾಲಕ ನೆಂಬ ಅರ್ಥದ ಜೊತೆಯಲ್ಲಿ ಉಪಲಕ್ಷಣದ ರೀತಿಯಿಂದ ಉತ್ಪತ್ತಿ ಪ್ರಲಯ ಗಳು ಗ್ರಹಿಸಲ್ಪಡುತ್ತದೆ. ಜಗತ್ತಿನ ಉತ್ಪತ್ತಿ, ಸ್ಥಿತಿ, ಪ್ರಲಯಗಳನ್ನು ನಡೆ ಸುವ (ಅಂಬಾ ಸಮೇತನಾದ) ಸಾಂಬಮೂರ್ತಿಯು ಆಯಾ ಪ್ರಾಣಿಗಳು ಅನುಭವಿಸ ಬೇಕಾಗಿರುವ ಕರ್ಮಫಲವನ್ನು ಅಪರವರಿಗೆ ಅನುಗ್ರಹಿಸುತ್ತಾನೆ. ಆಯಾಯ ಪ್ರಾಣಿಗಳ ಜ್ಞಾನಕರ್ಮಗಳಿಗೆ ಅನುಸಾರವಾಗಿ ಪ್ರಪಂಚದಲ್ಲಿ ಸೃಷ್ಟಿಯಾಗಬೇಕಾಗಿರುವ ಪ್ರಾಣಿಗಳ ಜ್ಞಾನಕರ್ಮಗಳನ್ನು ಜಗತ್ತಿನ ಸೃಷ್ಟಿ ಗೋಸ್ಕರವಾಗಿ ಸ್ವೀಕರಿಸುತ್ತಾನೆ ತಾನು ಮಾತ್ರ ತನ್ನ ಸ್ವಸ್ವರೂಪದ ಅನು ಸಂಧಾನದಿಂದ ವಿಶ್ರಾಂತಿಯನ್ನು ಹೊಂದಿ ಆಯಾಯಪ್ರಾಣಿಗಳ ಜ್ಞಾನಕರ್ಮಗಳ ಮೂಲಕವಾಗಿ ಅವರವರನ್ನು ಸೃಷ್ಟಿ ಮಾಡುತ್ತಾನೆ. ಹೀಗೆಯೇ ಪ್ರಪಂಚ ವೆಲ್ಲವನ್ನೂ ನಿರ್ಮಿಸುತ್ತಾನೆ. ಜಗತ್ತೆಲ್ಲವನ್ನೂ ಸೃಷ್ಟಿ ಮಾಡಿದ [redacted] ಸಾಂಬ ಮೂರ್ತಿಯು ಆಯಾಯ ಪ್ರಾಣಿಗಳಲ್ಲಿ ತನ್ನ ಭಕ್ತರಾದವರು ಭಕ್ತಿಯಿಂದ ತನಗೆ ಒಪ್ಪಿಸುವ ಹವಿಸ್ಸು ಮೊದಲಾದುವನ್ನು ಸ್ವೀಕರಿಸುತ್ತಾನೆ. ಈ ದೇವನು ಸೃಷ್ಟಿ ಮಾಡುವ ಕಾಲದಲ್ಲಿ [redacted] ಸೃಷ್ಟಿಕಾರ್ಯವನ್ನು ಆಚರಿಸುವುದಕ್ಕಾಗಿಯೇ ತನ್ನ ಸ್ವಸ್ವರೂಪವಾದ ನಿರುಪಾಧಿಕವಾದ ಆಕಾರವನ್ನು ಮುಸುಕಿನಲ್ಲಿ ಮುಚ್ಚು ವಂತಹ ಉಪಾಧಿಯನ್ನು ಹೊಂದಿರುವನು. ಭಕ್ತರಿಗೆ ಅನುಗ್ರಹವನ್ನು ಮಾಡಬೇಕೆಂಬ ಇಚ್ಛೆಯಿಂದಲೇ ಈ ಪ್ರಕಾರವಾದ ಉಪಾಧಿಯನ್ನು ಅಂಗೀ ಕರಿಸಿರುತ್ತಾನೆ.

**ನನು ವರ ಇತಿ, ಹೋತೇತಿ ಕಃ ಪದಾರ್ಥಃ ? ಪ್ರಿಯಮಾಣಃ ಸ್ಪರ್ಧಮಾನಶ್ಚೇತಿ। ಕಥಂ ಕೃತ್ವಾ ? ಪ್ರಾರ್ಥನಾರೂಪವರಣಾರ್ಥಸ್ಯ ವೃಧಾತೋರಚ್ ಪ್ರತ್ಯಯಸ್ಯ ಕರ್ಮಾರ್ಥ ಸ್ಯಾವಗಮಾದಿತಿ ।ಹ್ವೇ ಞ್ ಧಾತೋಃ ಸ್ಪರ್ಧಾರ್ಥಸ್ಯ ತೃಚ್ ಪ್ರತ್ಯಯಾಂತಸ್ಯ ಛಾಂದಸಂ ರೂಪಂ [redacted] ಚ ಕೃತ್ವೇತಿ ಬ್ರೂಮಃ । ನೈವಂ ಸಂಭವತಿ ಸ್ಪರ್ಧಮಾನ ಇತಿ । ಕಿಂ ಕಾರಣಂ ? ನಿರ್ಮಲಃ ಸಾಂಬ ಇತಿ । ಮಲಂ [redacted] ಸ್ಪರ್ಧಾ ನಾವೇತಿ । ಸಂಭವತ್ಯೇವೇತಿ ಬ್ರೂಮಃ । ಕಥಮಿದಮುವ**

**ಗಮ್ಯತಾಂ? ವರ [redacted] ವಿಶೇಷಣಂ ವಿಮೃತ್ಯ । [redacted] ಸ್ತಾತಃ ಸ್ಪರ್ಧತೇ ಸಾಂಬಃ । ಅಪಿ ತರ್ಹಿ ಭಕ್ತೈರ್ವ್ರಿಯಮಾಣಃ ಅರ್ಥ್ಯಮಾನಃ ಸನ್ನಿತಿ ವಿಮರ್ಶಾತ್ । ಇದಮತ್ರಕೂತಂ-ನ ಸ್ವಮನೀಷಯಾ ವೇದಾರ್ಥೋಽವಗಂತವ್ಯಃ। ಅಪಿ ತರ್ಹಿ ಇತಿಹಾಸ ಪುರಾಣಾದ್ಯುಪಬೃಂಹಣಾತ್ ।**

ಈ ಶ್ರುತಿಯಲ್ಲಿ **ವರ** ಮತ್ತು **ಹೋತಾ** ಎಂಬ ಶಬ್ದಗಳು ಇರುವುವು. ವರ ಎಂಬ ಶಬ್ದಕ್ಕೆ **ವ್ರಿಯಮಾಣಃ** (ಈ ಶಬ್ದಕ್ಕೆ ಪ್ರಾರ್ಥನೆ ಎಂಬ ಅರ್ಥವಿದೆ) ಎಂದು ಅರ್ಥವಿದ್ದು, ಹೋತಾ ಶಬ್ದಕ್ಕೆ **ಸ್ಪರ್ಧಮಾನಃ** ಎಂದು ಅರ್ಥವಿದೆ. **ವೃಞ್** ಧಾತುವು ಪ್ರಾರ್ಥನೆ ಎಂಬ ಅರ್ಥವನ್ನು ಹೊಂದಿದ್ದು, ಇದಕ್ಕೆ ಕರ್ಮಾರ್ಥದಲ್ಲಿ **ಅಚ್** ಪ್ರತ್ಯಯವು ಒಂದು **ವ್ರಿಯಮಾಣಃ** ಎಂಬ ರೂಪವು ಸಿದ್ಧವಾಗುತ್ತದೆ. **ಹೋ [redacted] ಞ್** ಧಾತುವಿಗೆ ಸ್ಪರ್ಧೆ ಎಂಬ ಅರ್ಥವು ಇದ್ದು (**ಹೋ ಞ್ ಸ್ಪರ್ಧಯಾಂವಾಚಿ**) ಇದಕ್ಕೆ ತೃಚ್ ಪ್ರತ್ಯಯವು ಇರುವುದರಿಂದ ಹೋತಾ ಎಂಬ ರೂಪವು ನಿಷ್ಪನ್ನವಾಗಿರುವುದು. ಇದು ವೈದಿಕ ಕ್ರಿಯೆಯಿಂದ ಛಾಂದಸವಾದ ರೂಪವಾಗಿರುತ್ತದೆ. **ಹೋತಾ** ಎಂಬುದರಿಂದ ಸ್ಪರ್ಧಮಾನಃ ಎಂದು ಅರ್ಥವಾಗುತ್ತದೆ. ಸ್ಪರ್ಧೆ ಎಂಬುದು ಮನಸ್ಸಿನ ದೋಷವಾಗಿರುವುದರ ಕಾರಣ ಈ ದೇವನಿಗೆ ಸ್ಪರ್ಧೆಯು ಸ್ವಭಾವದಿಂದ ಇರುವುದಿಲ್ಲವೆಂದು ಹೇಳಬೇಕು. ಎಲ್ಲರಿಗೂ ಅನುಗ್ರಹ ಮಾಡುವ ಕಾರಣದಿಂದ ಈತನು ವರ ಎನಿಸಿಕೊಳ್ಳುತ್ತಾನೆ. ಆದರೆ ಭಕ್ತರ ಇಚ್ಛಾನುಸಾರವಾಗಿ ವರನಾಗಿರುವನಾದರೂ ಸ್ಪರ್ಧೆಯನ್ನು ಮಾಡುವನು ಎಂದು ವಿಮರ್ಶೆಯಿಂದ ತಿಳಿಯಬೇಕು. ವೇದಾರ್ಥವನ್ನು ತಿಳಿಯಲು ಇಚ್ಛಿಸುವವನು ತನ್ನ ಬುದ್ಧಿ ನೈಪುಣ್ಯದಿಂದ ಮಾತ್ರವೇ ತಿಳಿಯಬಾರದು. ಇತಿಹಾಸ ಮತ್ತು ಪುರಾಣಗಳ ಉಪಬೃಂಹಣೆಯಿಂದಲೇ ವೇದಾರ್ಥವನ್ನು ನಿಶ್ಚಯ ಮಾಡಬೇಕು.

**ತಥಾ [redacted] ಯದಾ ಯದಾ ತ್ರಿಪುರಾದಯಃ ಬಾಧ್ಯಂತೇ, ಬಾಧ್ಯಮಾನಾಶ್ಚ ಸಾಂಬಮೇವೈಕಂ ಶರಣೀಕೃತ್ಯ ಯಾಚಂತೇ, ಕಾಲಕೂಟ ವಿಷಾದಯೋ ವಾ ತದನು ತಾನನುಗೃಹ್ಣಾನಃ ತಚ್ಛತ್ರುಭಿಃ**

**ಸ್ಪರ್ಧತೇ [redacted] ಇತಿ । ನನು ಸರ್ವಭಕ್ತಾನುಗ್ರಹಾಯ ವೇದಃ ಪ್ರವೃತ್ತಃ। ಯೋ ಪುನರ್ಭಕ್ತಾ ನ ಬಾಹ್ಯಶತ್ರುಭಿರ್ಬಾಧ್ಯಂತೇ ತದನು ಗ್ರಹಾರ್ಥ ಕಾನ್ಯೆವಮರ್ಥಾಂಗೀಕಾರೇ ಸ್ಯಾದಿತಿ ಚೇನ್ನ । ತೇಷ್ವಾಪಿ ಕಾಮಾದಿ ಶತ್ರುಭಿರ್ಬಾಧ್ಯಮಾನೇಷು ಸಾಂಬಾನುಗ್ರಹ ಸಂಭವಾತ್। ಅಸಂಭವೋsನ್ಯೋನ್ಯ ಸಂಶ್ರಯಾತ್ । ಈ ದೃಶೋsನುಗ್ರಹೋ ನ ಸಂಭವತೀತಿ ಬ್ರೂಮಃ। ಕಿಂ ಕಾರಣಂ ? ಅನ್ಯೋನ್ಯ ಸಂಶ್ರಯಃ ।**

ಭಕ್ತರಾದವರು ತ್ರಿಪುರರೇ ಮೊದಲಾದ ರಾಕ್ಷಸರ ಬಾಧೆಗೆ ಒಳಗಾಗಿ ಅವರ ಬಾಧೆಯನ್ನು ತಡೆಯಲಾರದೆ ಈ ದೇವನನ್ನು ಶರಣು ಹೋದುವರು, ಅದರಂತೆಯೇ ಕಾಲಕೂಟ ವಿಷ ಮುಂತಾದುವುಗಳ ಬಾಧೆಯಿಂದಲೂ ತನ್ನನ್ನು ಶರಣು ಹೊಂದಿರುವ ಭಕ್ತರನ್ನು ಅನುಗ್ರಹಿಸುವ್ವದಕ್ಕಾಗಿ ಈ ದೇವನು ಭಕ್ತರಿಗೆ ತೊಂದರೆಯನ್ನುಂಟು ಮಾಡುವ ತ್ರಿಪುರಾದಿಗಳ ಸಂಗಡ ಸ್ಪರ್ಧೆ ಮಾಡುತ್ತಾನೆ. ಭಕ್ತರಾದವರೆಲ್ಲರ ಅನುಗ್ರಹಕ್ಕಾಗಿ ವೇದವು ಪ್ರವೃತ್ತವಾಗಿದೆ ಮತ್ತು ಭಕ್ತರಾದವರನ್ನು ಬಾಹ್ಯ ಶತೃಗಳು ಬಾಧಿಸಲಾರರು. ಆದಕಾರಣ ಭಕ್ತರನ್ನು [redacted] ದೇವನು ಅನುಗ್ರಹಿಸಬೇಕಾಗಿಲ್ಲ ಎಂದು ಅರ್ಥೈಸಬಾರದು ಭಕ್ತರಾದವರಿಗೂ ಕೂಡ ಕಾಮಾದಿ ಶತೃ ಬಾಧೆಯು ಉಂಟಾಗುತ್ತಿದ್ದು ಅದನ್ನು ಸಾಂಬಮೂರ್ತಿಯೇ ಪರಿಹರಿಸುತ್ತಿದ್ದಾನೆ. ಹೀಗೆ ಈ ದೋಷಗಳ ಪರಿಹಾರವೇ ಭಕ್ತರ ಬಗ್ಗೆ ಈತನು ತೋರುತ್ತಿರುವ ಅನುಗ್ರಹವು.

**ಕಾಮಾದಿ ಮಲಾಪಾಕರಣ ನಿರತ ಇತಿ ಉಪನಿಷತ್ಪದ ಘಟಿತ ನಿಪದಾರ್ಥೋ ವರ್ಣಿತಃ ಸ ನ ಪ್ರಸ್ಮರ್ತವ್ಯಃ । ತತಶ್ಚ ನಿರ್ಮಲ ಸ್ವಾಂತಾಯೋಪದಿಶತಿ ಆಚಾರ್ಯ ಮೂರ್ತಿಸ್ಥಃ ಸಾಂಬ ಇತ್ಯವಗತಂ। ಭವತಾ ತು ಪ್ರಿಯಮಾಣಃ ಮಲಂ ಕಾಮದಿಕಂ ಸ್ಪರ್ಧಮಾನೋ ಬಾಧತೇ [redacted] ವರ್ಣಿತಂ। ತತಶ್ಚ ಕಾಮದಿ ರಾಹಿತ್ಯೇ ಸಾಂಬಾನುಗ್ರಹಃ ತದನುಗ್ರಹೇ ಚ ತದ್ರಾಹಿತ್ಯಮಿತಿ ಅನ್ಯೋನ್ಯ ಸಂಶ್ರಯಾನ್ನಾಯಮರ್ಥಃ ಸಂಭವತೀತಿ ಚೇನ್ನ ಅನ್ಯತಃ ಪರಿಚ್ಛೇದಾತ್ ।**

ಕಾಮವೇ ಮೊದಲಾದ ಚಿತ್ತದೋಷಗಳನ್ನು ಪರಿಹಾರ ಮಾಡುವುದರಲ್ಲಿ ಸಾಂಬಮೂರ್ತಿಯಾದ ಈ ದೇವನು ನಿರತನಾಗಿರುವನು ಎಂದು ಉಪನಿಷತ್ ಎಂಬ ಪದದಲ್ಲಿರುವ ನಿ ಎಂಬ ಪದಕ್ಕೆ ಅರ್ಥವನ್ನು ವರ್ಣಿಸಲಾಗಿದೆ. ಇದರಿಂದ ನಿರ್ಮಲವಾದ ಮನಸ್ಸುಳ್ಳವನಿಗೆ ಗುರುಮೂರ್ತಿಯು ಆಕಾರಗತನಾಗಿ ಉಪದೇಶವನ್ನು ಮಾಡುತ್ತಿರುವನು ಎಂದು ಶ್ರುತಿಯು ಬೋಧಿಸುವುದು ಇದರಿಂದ ಕಾಮವೇ ಮೊದಲಾದ ಚಿತ್ತದೋಷಗಳು ಸಾಂಬಮೂರ್ತಿಯು ಸ್ಪರ್ಶ ಮಾಡುವ ವಿಷಯವಾಗಿರುವುದು. ಈ ಕಾಮಾದಿ ಮಲಗಳನ್ನು ಬಾದಿಸುವುದೇ ಸಾಂಬಮೂರ್ತಿಯ ಪರವಾಗಿರುವುದರಿಂದ, ಕಾಮಾದಿಗಳು ಇಲ್ಲದಿರುವುದೇ ಸಾಂಬಮೂರ್ತಿಯ ಅನುಗ್ರಹವು. ಸಾಂಬಮೂರ್ತಿಯ ಅನುಗ್ರಹವೇ ಕಾಮಾದಿಗಳು ಇಲ್ಲದಿರುವುದು ಎಂದು ಅನ್ಯೋನ್ಯಾಶ್ರಯ ದೋಷವು ಪ್ರಸಕ್ತವಾಗಿರುವುದು. ಆದ್ದರಿಂದ ಹೀಗೆ ಅರ್ಥವನ್ನು ಹೇಳುವುದು ಉಚಿತವಲ್ಲವೆಂದು ಹೇಳಬಾರದು.

**ಯಾವದ್ಯಾವಲ್ಲೇಶಶಲೇತಃ ಪ್ರಾಕ್ಕರ್ಮಾನುಗಣಂ ಮಲಮಪಗಚ್ಛೇತ್ತಾವತ್ತಾವದ್ಭಗವಂತಮರ್ಥಯೇತ, ತತೋಽನುಗ್ರಹಃ ತತೋಽಧಿಕಂ ಮಲಾಮಪಗಮಃ, ತತಸ್ತದರ್ಶನಾ, ತತೋಽಪಿ ಅಧಿಕಂ ಮಲಾಪಗಮ ಇತಿ ಅನ್ಯತಃ = ಪ್ರಕಾರಾಂತರೇಣ, ಪರಿಚ್ಛೇದಾತ್ = ನಿತದಾಶಂಕಾ ಸಮಾಧಾನಾತ್। [illegible] ಭಗವಾನ್ ದ್ವೈಪಾಯನಃ। ಧರ್ಮ ಮೇಘಮಿಮಂ ಪ್ರಾಹುಃ ಸಮಾಧಿಂ ಯೋಗವಿತ್ತಮಾಃ। ವರ್ಷತ್ಯೇಷ ಯತೋ ಧರ್ಮಾಮೃತಧಾರಾಃ ಸಹಸ್ರಶ ಇತಿ। ತದಿದಮುಕ್ತಂ ಸಂಗ್ರಹಸೂಕ್ತೌ। ಭವತಿ ಜನಿತಾನೇಕ ಕರ್ಮಾನುರೂಪಂ ವಿಜ್ಞಾನಂ ದಿತ್ಸುರೇಭ್ಯ ಇತಿ ನಿರ್ದೇಶೇನ ಇತಿ। ಉಪಪದ್ಯತೇ ಚ। ಯದಿ ಅತಿ ಸ್ವಚ್ಛಚಿತ್ತಾಯ್ಯ ವೋಪದಿಶತೀತ್ಯಭಿಮನ್ಯೇಥಾಸ್ತರ್ಹಿ ಉಪದೇಶಾನುಪದಮೇವ ಜ್ಞಾನಂ ಲಭೇತೇತಿ ಪ್ರಾಪ್ನೋತಿ ಮೋಕ್ಷಂ, ಚ ತತೋ ಬಹುಕಾಲ ಸಮಾಧಿಃ ಸ್ಯಾತ್। ಕೀರ್ತಯಂತಿ ಚ ದ್ವೈಪಾಯನಾದಾಯಃ ಬಹುಕಾಲ ಸಮಾಧಿಮಿತಿ। ತನ್ನ ಕಥಮಪಿ ಅನುಪಪತ್ತಿಃ ಸಂಭಾವ್ಯಾ ಶ್ರುತಿ ನಿರ್ದಿಷ್ಟಾರ್ಥೇ ಇತಿ ಸುಷ್ಠೂಕ್ತಂ ವರ ಇತಿ ಹೋತೇತಿ ಚ ಸಾಂಬಸ್ಯ ವಿಶೇಷಣ ಮಿತಿ।**

ಜನ್ಮಾಂತರ ಕರ್ಮಗಳ ಅನುಗುಣವಾಗಿ ಕ್ರಮವಾಗಿ ಚಿತ್ತಮಲವು ನಾಶವಾಗುತ್ತಾ ಬರುವುದು. ಅದನ್ನು ಅನುಸರಿಸಿಯೇ ಭಗವಂತನನ್ನು ಪ್ರಾರ್ಥಿಸುವುದೂ ನಡೆಯುತ್ತದೆ. ಪ್ರಾರ್ಥನೆಯ ಫಲವಾಗಿ ಭಗವಂತನ ಅನುಗ್ರಹವು ಉಂಟಾಗುತ್ತದೆ. ಅನುಗ್ರಹದ ಫಲವಾಗಿ ಚಿತ್ತ ಮಲವು ಬಹುವಾಗಿ ನಾಶವಾಗುತ್ತದೆ. ಅನಂತರ ಅವರವರ ಇಚ್ಛೆಗೆ ಅನುಗುಣವಾಗಿ ಭಗವಂತನನ್ನು ಪ್ರಾರ್ಥಿಸಿದಾಗ ಅತಿಶಯವಾದ ಚಿತ್ತ ದೋಷವು ನಾಶವಾಗುತ್ತದೆ. ಈ ಕ್ರಮದಲ್ಲಿ ಈ ಅನ್ಯೋನ್ಯಾಶ್ರಯ ದೋಷವು ಪ್ರಕಾರಾಂತವಾಗಿ ಪರಿಹೃತವಾಗುತ್ತದೆ. ಈ ಅಭಿಪ್ರಾಯವನ್ನು ಪೂಜ್ಯರಾದ ವ್ಯಾಸ ಮಹರ್ಷಿಗಳು (ದ್ವೈಪಾಯನ ಮಹರ್ಷಿಗಳು) ಸಮಾಧಿಯನ್ನು ಧರ್ಮ ಮೇಘವೆಂದು ಬೋಧಿಸಿದ್ದಾರೆ—

ಧರ್ಮ ಮೇಘ ಮಿಮಂ ಪ್ರಾಹುಸ್ಸಮಾಧಿಂ ಯೋಗವಿತ್ತಮಾಃ ।
ವರ್ಷತ್ಯೇಷ ಯಶೋ ಧರ್ಮಾ ಮೃತ ಧಾರಾಸ್ಸಹಸ್ರಶಃ ॥

(ಮೇಘವು ಹೇಗೆ ಮಳೆಯ ನೀರನ್ನು ಸುರಿಸುವುದೋ ಅದೇ ರೀತಿಯಾಗಿ ಈ ಸಮಾಧಿ ಧರ್ಮವು ಎಲ್ಲರಿಗೂ ಹಿತಕರವಾಗಿರುವ ಹಾಗೆ ಆಚರಿಸುವ ಚಿತ್ತ ಸ್ಥೈರ್ಯವನ್ನು ಕೊಡುವುದು. ಆದ್ದರಿಂದಲೇ ಯೋಗಾಭ್ಯಾಸ ಮಾಡುವುದರಲ್ಲಿ ನಿಪುಣರಾದವರು ಈ ಸಮಾಧಿ ಧರ್ಮವನ್ನು ಧರ್ಮ ಮೇಘವೆಂದು ಕರೆಯುತ್ತಾರೆ.)

ಈ ವಚನದ ಅನುಸಾರವಾಗಿಯೇ ಸಂಗ್ರಹಸೂಕ್ತಿಯಲ್ಲಿಯೂ ಭಕ್ತರನ್ನು ಈ ಧರ್ಮ ಮೇಘವೆಂಬ ಸಮಾಧಿಯಿಂದಲೇ ಭಗವಂತನು ಅನುಗ್ರಹಿಸುತ್ತಿದ್ದಾನೆ ಎಂದು ಹೇಳಲು **ಭವತಿ ಜನಿತಾನೇಕ ಕರ್ಮಾನುರೂಪಂ ವಿಜ್ಞಾನಂ ದಿತ್ಸುರೀಭ್ಯಃ** ಎಂದು ನಿರ್ದೇಶಿಸಲಾಗಿದೆ. ಅತಿ ನಿರ್ಮಲವಾದ ಮನಸ್ಸನ್ನು ಪಡೆದವರಿಗೆ ಮಾತ್ರವೇ ಜ್ಞಾನವನ್ನು ಉಪದೇಶ ಮಾಡುವನೆಂದು ಅಭಿಪ್ರಾಯ ಪಡುವುದಾದರೆ, ಉಪದೇಶವಾದ ನಂತರದಲ್ಲಿಯೇ ಜ್ಞಾನ ಉಂಟಾಗುತ್ತದೆ. ಮೋಕ್ಷವು ಪ್ರಾಪ್ತವಾಗದೆ ಬಹುಕಾಲದವರೆವಿಗೂ ಸಮಾಧಿ ಸ್ಥಿತಿಯುಂಟಾಗುತ್ತದೆ. ವ್ಯಾಸ ಮಹರ್ಷಿ ಮುಂತಾದವರು ಬಹುಕಾಲದ ವರೆವಿಗೂ ಸಮಾಧಿ ಸ್ಥಿತಿಯು ಜ್ಞಾನಿಯಾದವನಿಗೆ ಉಂಟಾಗುತ್ತದೆ ಎಂದು

ಹೇಳಿದ್ದಾರೆ. ಇದರ ಅನುಸಾರವಾಗಿ ಶ್ರುತಿಯಲ್ಲಿ ನಿರ್ದೇಶಿತವಾಗಿರು ವರ ಮತ್ತು ಹೋತಾ ಎಂಬ ವಿಶೇಷಣಗಳು ವಿಶ್ವಕರ್ಮನಿಗೆ ಸೂಕ್ತವಾದುದೇ ಆಗಿದೆ. [redacted] ವಿಷಯದಲ್ಲಿ ಯಾವುದೇ ಬಗೆಯಾದ ಅನುಪಪತ್ತಿಯೂ ಇರುವುದಿಲ್ಲ.

**ವಿಶಾದೃಶೋ ಯೋ ಮಂತ್ರೋಕ್ತಃ ಸ ವಿಶ್ವಕರ್ಮೇತಿ ವಾಕ್ಯ ಶೇಷಃ। ಗಂಭೀರೋಽಯಂ ಮಂತ್ರ [redacted] ತದರ್ಥ ಸಂಗ್ರಹಮಾಹ ಪ್ರಕೃ[redacted] ಶ್ರು[redacted] ।**

ಈ ಮಂತ್ರದಿಂದ ಈ ಮೊದಲು ಅಂಬ ಸಹಿತನಾದ ಮೂರ್ತಿಯು (ಸಾಂಬಮೂರ್ತಿ) ವಿಶ್ವಕರ್ಮ ಪರಮೇಶ್ವರನೇ ಆಗಿದ್ದಾನೆಂದು ಅರಿಯಬೇಕು. ಶೃತಿಯ ಅರ್ಥವು ನಿಚ್ಚಳವಾಗಿ ಅವಗಾಹನೆಯಾಗಲೆಂದು ಸಂಗ್ರಹವಾಗಿ ವಿವರಿಸಿದೆ. ಗಂಭೀರವಾದ ಈ ಅರ್ಥವನ್ನು ಗ್ರಹಿಸಿದರೆ ತತ್ತ್ವಗ್ರಹಣವು ಸುಲಭವಾಗುತ್ತದೆ.

**ವಿಶ್ವಾನಿ ಸೃಷ್ಟ್ಯವನ ಪ್ರಳಯ ರೂಪಾಣಿ ಕರ್ಮಾಣಿ ಯಸ್ಯಾಸೌ ವಿಶ್ವಕರ್ಮಾ ಭವತಿ । ೧೫**

**ವಿಶ್ವಾನಿ ಸೃಷ್ಟ್ಯವನ ಪ್ರಲಯ ರೂಪಾಣಿ ಕರ್ಮಾಣಿ ಯಸ್ಯಾಸೌ ವಿಶ್ವಕರ್ಮಾ ಭವತೀತಿ । ಇಯಂ [redacted] ನಿಮಿತ್ತಕಾರಣತಾ ಸ್ಫುಟಿತಾ । ಅಥ ವಿವರ್ತೋಪಾದಾನಕಾರಣತಾಮುಸ್ಕ್ಯಹ।**

ವಿಶ್ವಕರ್ಮ ಶಬ್ದದಿಂದ ಸಮಸ್ತವಾದ ಸೃಷ್ಟಿಸ್ಥಿತಿ ಲಯಾದಿರೂಪ ಇತ್ಯಾದಿ ಕರ್ಮಗಳು ಬೋಧಿಸಲ್ಪಡುವುವು. **ವಿಶ್ವಾನಿ ಕರ್ಮಾಣಿ ಯಸ್ಯಸಃ** ಎಂಬ ಸಮಾಸದಿಂದ [redacted] ಅರ್ಥವು ಸ್ಪಷ್ಟವಾಗುತ್ತದೆ. ಆದ್ದರಿಂದ ಈತನೇ ಜಗತ್ತಿನ ಸೃಷ್ಟಿ ಸ್ಥಿತಿ ಲಯ ತಿರೋಧಾನ, ಅನುಗ್ರಹ ಕಾರ್ಯಗಳಿಗೆ ನಿಮಿತ್ತನಾಗಿರುವ ಪರಮೇಶ್ವರನೆಂದು ಗ್ರಹಿಸಬೇಕು.

[ಸಕಲ ಸೃಷ್ಟಿಯು ವಿಶ್ವಕರ್ಮನಿಂದಲೇ ನಡೆದಿದೆ ಎಂಬುದನ್ನು ಯಜುರ್ವೇದವು (ಕಾಂ೪, [redacted] ೧. ಅ ೫) ಇಂತು ಸ್ಪಷ್ಟಪಡಿಸುತ್ತದೆ—

ಅಥೋ ವಾ ಇದಮಗ್ರೇ ಸಲಿಲಮಾಸೀತ್ತಸ್ಮಿನ್ ಪ್ರಜಾಪತಿರ್ವಾಯುರ್ಭೂತ್ವಾ ಚರತ್ಸ ಇಮಾಮಪಶ್ಯತ್ತಾಂ ವರಾಹೋ ಭೂತ್ವಾ ಹರತ್ತಾಂ ವಿಶ್ವಕರ್ಮಾಭೂತ್ವಾ ವ್ಯವಮಾರ್ಷ್ಟ್‌ ಸಾಪ್ರಥತ ಸಾ ಪೃಥಿವ್ಯ ಭವತ್ತತ್ಪೃಥಿವ್ಯೈ ಪೃಥಿವಿತ್ವಂ ತಸ್ಯಾಮ ಶ್ರಾಮ್ಯತ್ಪ್ರಜಾಪತಿಸ್ಸದೇವಾ ನ ಸೃಜತ ವಸೂನ್ ರುದ್ರಾನಾದಿತ್ಯಾನ್ ತೇದೇವಾಃ ಪ್ರಜಾಪತಿ ಮಬ್ರುವನ್ ಪ್ರಜಾಯಾ ಮಹಾ ಇತಿ ಸೋಽಬ್ರವೀತ್ ।

ಯಥಾಹಂ ಯುಷ್ಮಾಗ್ಂ ಸ್ತಪಸಾಸ್ಸಕ್ಷ್ಯೇವಂತಪಸಿ ಪ್ರಜನನಯಿಚ್ಛಧ್ವ ಮಿತಿ ತೇಭ್ಯೋಽಗ್ನಿ ಮಾಯತನಂ ಪ್ರಾಯಚ್ಛತ್ ।

ಈ ಮಂತ್ರಕ್ಕೆ ಸಾಯಣಾಚಾರ್ಯರ ಭಾಷ್ಯದ ಅನುಸಾರ ಹೀಗೆ ಅರ್ಥ ಮಾಡಲಾಗುತ್ತದೆ :

ಕಣ್ಣಿಗೆ ಕಾಣಸುವಂತಹ ಗಿರಿ, ನದಿ, ಸಮುದ್ರಾದಿ ಸಕಲ ಚರಾಚರಗಳು ಜಗತ್ ಸೃಷ್ಟಿಯ ಪೂರ್ವದಲ್ಲಿ ಜಲರೂಪದಲ್ಲಿತ್ತು. ಜಲ ಭೂತದಲ್ಲಿ ಪ್ರಜಾಪತಿಯು ತನ್ನ ಸ್ವ ಶರೀರವನ್ನು ಇರಿಸಲು ವಾಯು ರೂಪನಾಗಿ ಅದರಲ್ಲಿ ಪ್ರವೇಶಿಸಿದನು. ಅಲ್ಲಿ ಜಲನಿಮಗ್ನವಾದ್ದ ಭೂಮಿಯನ್ನು ನೋಡಿ ತಾನು ವರಾಹ ಮೂರ್ತಿಯಾಗಿ ತನ್ನ ಕೋರೆಯ ಹಲ್ಲುಗಳ ಕೊನೆಯಿಂದ ಭೂಮಿಯನ್ನು ಮೇಲೆತ್ತಿ ತಂದನು. ತರುವಾಯ ವರಾಹ ರೂಪವನ್ನು ಬಿಟ್ಟು, ವಿಶ್ವಕರ್ಮರೂಪವನ್ನು ಧರಿಸಿ, ಭೂದೇವತೆಯ ದೇಹದಲ್ಲಿದ್ದ ಜಲವನ್ನು ಒರೆಸಿ ವಿಸ್ತರಿಸಿದನು. ನಂತರ ಕಾಣುತ್ತಿದ್ದ ಭೂಮಿಯು ಸರ್ವಪ್ರಾಣಿಗಳಿಗೂ ಆಧಾರವಾದ ಭೂಮಿಯಾಯಿತು. ಜಲದಿಂದ ಬೇರ್ಪಡಿಸಿ ತೆಗೆದುದರಿಂದ ಭೂಮಿಗೆ ಪೃಥ್ವಿ ಎಂಬ ಹೆಸರು ರೂಢಿಗೆ ಬಂತು. ವಿಶ್ವಕರ್ಮ ಪ್ರಜಾಪತಿಯು ಪೃಥಿವಿ ಭೂತದಲ್ಲಿ ವಾಸಿಸುತ್ತಾ ತಪಸ್ಸು ನಡೆಸಿದ್ದರಿಂದ ವಸು, ರುದ್ರ, ಆದಿತ್ಯ ಗಣಗಳನ್ನು, ದೇವತೆಗಳನ್ನು ಸೃಷ್ಟಿಸಿದ. ಹೀಗೆ ಸೃಷ್ಟಿಯಾದ ವಸು, ರುದ್ರ, ಆದಿತ್ಯ ಮತ್ತು ದೇವಗಣಗಳು "ಮಹಾನು ಭಾವಾ, ಪ್ರಜಾ ಸೃಷ್ಟಿ ಕೌಶಲವನ್ನು ಉಪದೇಶಿಸಿ" ಎಂದು ಆ ವಿಶ್ವಕರ್ಮ ಭಗವಾನನನ್ನು ಬಹು ವಿಧ ಗಳಾಗಿ ಪ್ರಾರ್ಥಿಸಿದರು. ಆಗ ವಿಶ್ವಕರ್ಮ ಭಗವಂತನು "ನಾನು ಯಾವ ರೀತಿ ಯಲ್ಲಿ ತಪಸ್ ಸಾಮರ್ಥ್ಯದಿಂದ ನಿಮ್ಮೆಲ್ಲರನ್ನು ಹೇಗೆ ಸೃಷ್ಟಿ ಮಾಡಿದನೋ ಅದೇ ರೀತಿಯಾಗಿಯೇ ನೀವೂ ಕೂಡ ನಿಮ್ಮ ತಪೋಬಲದಿಂದ ಪ್ರಜೋತ್ಸರ್ಗ

ವನ್ನು ನಡೆಸಲು, ತಪೋವ್ರತವನ್ನು ಕೈಗೊಂಡು, ಅದಕ್ಕೆ ಆಧಾರವಾಗಿ ಅಗ್ನಿಹೋತ್ರವನ್ನು ಆಚರಿಸಲು ಹೋಮ ಲಕ್ಷಣವನ್ನು ಉಪದೇಶಿಸುತ್ತೇನೆ" ಎಂದು ಹೇಳಿ ವಸುರುದ್ರಾದಿತ್ಯಾದಿಗಳನ್ನು ನಿಯಮಿಸಿದನು. ಈ ರೀತಿಯಾಗಿ ನಿಯಮವಿರುವುದರಿಂದ ವಸುರುದ್ರಾದಿತ್ಯಾದಿಗಳು ವಿಶ್ವಕರ್ಮ ಪ್ರಜಾಪತಿಯಂತೆ ತಾವೇ ತಪಸ್ಸನ್ನು ನಡೆಸಿ ಸೃಷ್ಟಿಸಿದ ಪ್ರಜಾವರ್ಗವಾದುದರಿಂದ ಅವರಿಗೆಲ್ಲಾ ತಪೋ ಮಾರ್ಗವನ್ನು ಉಪದೇಶಿಸಿದರು. ಹೀಗೆ ವಸುರುದ್ರಾದಿತ್ಯಾದಿಗಳಿಂದ ಲೋಕಗಳನ್ನು, ಪ್ರಜಾವರ್ಗಗಳನ್ನು, ಇತರ ಚರಾಚರಗಳನ್ನು ಸೃಷ್ಟಿಸಿದನೆಂಬುದು ಸ್ಪಷ್ಟವಾಗುತ್ತದೆ ಆದ್ದರಿಂದ ಪ್ರಪಂಚದಲ್ಲಿ ಸಕಲಬ್ರಾಹ್ಮಣ ವರ್ಗಗಳಿಗೂ ಪಿತೃ, ಪಿತಾಮಹ, ಪ್ರಪಿತಾಮಹರಾಗಿ ವಸ್ತುರುದ್ರ ಆದಿತ್ಯರು ಇಂದೂ ಪೂಜಿಸಲ್ಪಡುತ್ತಾರೆ.

ಪ್ರಜಾಪತಿ, ವಿಶ್ವಕರ್ಮ, ಪರಮೇಷ್ಠಿ ಈಮುವ್ವರಿಗೂ ಅಭೇದವೆಂದು ಈಗಾಗಲೇ ಶ್ರುತವಾಗಿರಬಹುದು. [redacted] ಸಂಗತಿಯನ್ನು ಇಂತು ಹೇಳಲಾಗಿದೆ—

ಸಪರಮೇಷ್ಠೀ ಪ್ರಜಾಪತಿಮಬ್ರವೀದ್ ಪತ್ವಾಯಾ ನೀತಿ ನೇಹಲೋಕೋಸ್ತೀತ್ಯ ಬ್ರವೀತ್ಸ ವಿಶ್ವಕರ್ಮಾಣಂಚ ಯಜ್ಞಂಚಾ ಬ್ರವೀದುಪವಾ ಮಾಯ ನೀತಿ ನೇಹಲೋಕೋಸ್ತೀತ್ಯ ಬ್ರೂತಾಗ್ ಸ ಏತಾಂ ತೃತೀಯಾಂಚಿತಿ ಮಪಶ್ಯತ್ತಾ ಮುಪಾಧ ತತ್ತ್ರದ ಸಾವ ಭವತ್ ।

ಪ್ರಜಾಪತಿ, ವಿಶ್ವಕರ್ಮ ಮತ್ತು ಪರಮೇಷ್ಠಿ ಇವು ಒಂದೇ ಶಕ್ತಿಯ ನಾಮಾಂತರಗಳು ಮಾತ್ರವೇ ಆದುದರಿಂದ ಕೇವಲ ಮೂರ್ತಿ ಬೇಧ ಮಾತ್ರವೆ ಇಲ್ಲಿ [redacted] ಬರುತ್ತದೆ. ಪ್ರಜಾಪತಿಯು ಭೂಮಿಯನ್ನೆಲ್ಲಾ ಆವರಿಸಿದ್ದು ಆತನನ್ನು ಪರಮೇಷ್ಠಿಯು ಗಮನಿಸಿದ. ವಿಶ್ವಕರ್ಮ ಮತ್ತು ಯಜ್ಞೇಶ್ವರನು ಅಂತರಿಕ್ಷವನ್ನು ಮತ್ತು ಸಕಲದಿಕ್ಕುಗಳನ್ನು ಆಕ್ರಮಿಸಿ ಬೇರೆ ಯಾರಿಗೂ ಅವಕಾಶವೇ ಇಲ್ಲದಂತೆ ಮಾಡಿದ್ದರು. ಆದ್ದರಿಂದ ಪರಮೇಷ್ಠಿಯು ಯೋಚಿಸಿ ಮೂರನೆಯ [redacted] (ತೃತೀಯಾಂಚಿತಿ–ಅಗ್ನಿ)ಯನ್ನು ಸ್ಥಾಪಿಸಿ, ಆ ಅಗ್ನಿಯಲ್ಲಿ ಪರಮೇಷ್ಠಿಯು ತಾನೇ ವಾಸಿಸತೊಡಗಿದ]

## ಯಸ್ಮಿನ್ನಿದಗ್ಂ ಸರ್ವಂ ಭುವನಂ ಜಜಾನ । ೧೬

**ಯಸ್ಮಿ...ಜಜಾನೇತಿ । ಪ್ರಾದುರ್ಭೂತಮಿತ್ಯರ್ಥಃ । ಜನೀಪ್ರಾದುರ್ಭಾವ ಇತಿ ಧಾತೋಃ । ಉಕ್ತದ್ವಿವಿಧಕಾರಣ ತಾಮೇಕ ಹೇಲಯೈವ ದೃಢಂ ಪ್ರತಿಪತ್ತುಮನುಕೀರ್ತಯತಿ ।**

ಯಸ್ಮಿನ್ ಇದಗ್ಂ ಸರ್ವಂ ಭುವನಂ ಜಜಾನ ಎಂಬ ವಚನದಿಂದ ಈ ದೇವನು ವಿವರ್ತೋಪಾದಾನ ಕಾರಣನಾಗಿದ್ದಾನೆ ಎಂದು ತಿಳಿಯಬೇಕು. ಕಾರಣವಾದ ಪದಾರ್ಥವು ಕಾರ್ಯರೂಪದಿಂದ ಇರುವುದು ವಿವರ್ತವೆನಿಸುತ್ತದೆ. ಮೃತ್ತಿಕೆಯು ಘಟಾದಿ ರೂಪದಿಂದ ಇರುವುದೂ, ಚಿನ್ನವು ಹಲವು ವಿಧವಾದ ಆಭರಣಗಳ ರೂಪದಿಂದ ಇರುವುದೂ ವಿವರ್ತವೆನಿಸುತ್ತದೆ. ಈ ವಿವರ್ತವಾದದಲ್ಲಿ ಮೂಲ ಸಾಮಾಗ್ರಿಯು ಎಲ್ಲಕ್ಕಿಂತಲೂ ಮೂಲಕಾರಣವಾಗಿ ಉಪಾದಾನವೆನಿಸಿರುತ್ತದೆ. ವಿಶ್ವಕರ್ಮನು ಪ್ರಪಂಚದ ಸೃಷ್ಟಿಗೆ ವಿವರ್ತೋಪಾದಾನ ಕಾರಣನಾಗಿರುವನು ಎಂಬುದು, ಈ ದೇವನಲ್ಲಿಯೇ ಸಮಸ್ತವಾದ ಪ್ರಪಂಚಗಳು ಉತ್ಪನ್ನಗೊಂಡಿವೆ ಎಂದು ಅರ್ಥವುಳ್ಳ 'ಯಸ್ಮಿನ್....' ಎಂಬ ಸೂತ್ರ ನಿರ್ದೇಶನದಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ. ಜನೀ ಪ್ರಾದುರ್ಭಾವೇ ಎಂಬ ಧಾತುವಿನಿಂದ ಎಂದಾಗಿದೆ ಆದ್ದರಿಂದ ಜಜಾನ ಎಂಬ ಕ್ರಿಯಾ ಪದಕ್ಕೆ ಪ್ರಾದುರ್ಭೂತಂ ಎಂದು ಅರ್ಥವಾಗುತ್ತದೆ.

## ಯಸ್ಮಾದಿದಗ್ಂ ಸಮಸ್ತಗ್ಂ ಸಂಕಲ್ಪ ರೂಪಗ್ಂ ಶಿಲ್ಪಂ ಪ್ರಕಲ್ಪ್ಯತೇ । ಸ ವಿಶ್ವಕರ್ಮಾ ಪರಮಾತ್ಮಾ ಭವತಿ । ೧೭

**ಯಸ್ಮಾದಿದಂ....ಮಾತ್ಮಾ ಭವತೀತಿ । ಇದ ಮತ್ರಾ ಕೂತಂ। ಕೇನೇಯಂ ಕಾರಣದ್ವಯಾವ ಗತಿಃ । ಯಸ್ಮಾದಿತಿ ಪಂಚಮ್ಯಾ । ಕಂತಸ್ತ್ರೈ ಯಮರ್ಥಾವಗತಿ [redacted] ಲೋಕತ [redacted] ಪದಾವುಃ।**

**ಸುವರ್ಣಾತ್ಕುಂಡಲಂ ಭವತೀತಿ ವ್ಯವಹರತಿ ಲೋಕಃ। ಕುಂಡಲಾತ್ಮನಾ ಸುವರ್ಣಂ ಪರಿಣಮತ [redacted] ತದರ್ಥಃ। ತದಿಹ [redacted] ಮುಪಾದಾನಂ ಪ್ರತೀಮಃ। ರಜ್ಜೋಃ ಸರ್ಪೋ ಭವತೀತಿ ಚ ವ್ಯವಹರತಿ ಲೋಕಃ। ಸರ್ಪಭಾವೇ ರಜ್ಜುಃ ಕಾರಣಮಿತಿ ತತಃ ಪ್ರತೀಮಃ। ಪ್ರತೀಮಶ್ಚ ಸರ್ಪಸ್ಯ ವಿವರ್ತೋಪಾದಾನಂ ರಜ್ಜುರಿತಿ। ಏವಮೇವ ಕುಲಾಲಾದ್ಘಟಾ ಭವಂತೀತಿ। ಇಹ [redacted] ಕುಲಾಲಂ ನಿಮಿತ್ತಕಾರಣಂ ಪ್ರತೀಮಃ। ಹೇತ್ವರ್ಥಕತ್ವಾತ್ ಪಂಚಮ್ಯಾಃ। [redacted] ಪುನರ್ನ ಪರಿಣಾಮ್ಯುಪಾದಾನಂ। ಸಾವಯವಸ್ಯೈವ ಹಿ ಪರಿಣಾಮಃ। ಸಾವಯವತ್ವೇ ಚ ಘಟಾದಿವದನಿತ್ಯತ್ವಂ ಪ್ರಸಜ್ಯೇತ। ತತಶ್ಚ ಶ್ರುತ ಪೂರ್ವಂ ನಿತ್ಯತ್ವಂ ಭಾಧ್ಯೇತೇತಿ ಅಭಿಪ್ರಯಂತೀ, ಯಸ್ಮಾದಿತ್ಯಾದಿರೂಪಾ ಉಪದಿಷತ್ಪ್ರವರ್ತತ ಇತಿ।**

ಯಸ್ಮಾದಿದಗ್ಂ ಸಮುಹ್ಯಗ್ಂ ಸಜ್ಯಲ್ಪರೂಪಗ್ಂ ಶಿಲ್ಪಂ ಪ್ರಕಲ್ಪ್ಯತೇ।
ಸವಿಶ್ವಕರ್ಮಾ ಪರಮಾತ್ಮಾ ಭವತಿ॥

--ಎಂಬ ವಚನವು ಈ ಎರಡು ವಿಧವಾದ ಕಾರಣಗಳೂ [redacted] ದೇವನೊಬ್ಬನಿಗೇ ಆತನ ಲೀಲೆಯಿಂದಲೇ ಅನ್ವಯವಾಗುವುದು ಎಂದು ಬೋಧಿಸುತ್ತದೆ. ಯಸ್ಮಾತ್ ಎಂಬ ಪಂಚಮಿಾ ವಿಭಕ್ತಿಯಿಂದ ಈ ಅರ್ಥವನ್ನು ತಿಳಿಯಬಹುದಾಗಿದೆ. ಸುವರ್ಣದಿಂದ ಕುಂಡಲವು ಸಿದ್ಧವಾಗುವುದು ಲೋಕದಲ್ಲಿರುವ ವ್ಯವಹಾರಿಕ ಸತ್ಯ. ಆದ್ದರಿಂದ ಸುವರ್ಣವೇ ಕುಂಡಲ ರೂಪವನ್ನು ಹೊಂದುವುದು ಗೊತ್ತಾಗುತ್ತದೆ. ಇದರಿಂದ ಸುವರ್ಣವು (ಕುಂಡಲಕ್ಕೆ ಪರಿಣಾಮ್ಯುಪಾದನವಾಗಿರುವುದು) ಕುಂಡಲವಾಗಿ ಪರಿಣಮಿಸುವುದು ಉಪಾದಾನವಾಗಿರುವುದು. ಹಗ್ಗವು (ರಜ್ಜು) ಹಾವೆಂಬ ಭ್ರಮೆಯನ್ನು ಮೂಡಿಸಲು ಕಾರಣವಾಗಿರುತ್ತದೆ ಎಂಬುದು ಲೋಕದಲ್ಲಿಯ ವ್ಯವಹಾರಿಕ ಸತ್ಯ. ಹಗ್ಗವು ಸರ್ಪಭಾವಕ್ಕೆ ಕಾರಣವಾಗುವುದನ್ನು ವಿವರ್ತವೆಂದು ಹೇಳಲಾಗುತ್ತದೆ. ಈ ವಿವರ್ತದಲ್ಲಿ ಸರ್ಪಭಾವಕ್ಕೆ ರಜ್ಜುವು (ಹಗ್ಗವು) ವಿವರ್ತೋಪಾದಾನವಾಗಿರುತ್ತದೆ. ಕುಂಬಾರನಿಂದ ಮಡಿಕೆಗಳು (ಘಟಗಳು) ತಯಾರಾಗುತ್ತವೆ

ಎಂಬ ವ್ಯಾವಹಾರಿಕ ಸತ್ಯದಲ್ಲಿ [redacted] ಕುಂಬಾರನು ನಿಮಿತ್ತ ಕಾರಣನಾಗಿರುವನು. ಪಂಚಮೀ ವಿಭಕ್ತಿಯು ಸದಾ ಕಾರಣ ವಾಚಕವಾಗಿರುತ್ತದೆ. ಆದರೆ ಲೋಕದ ಉತ್ಪತ್ತಿಯ ಸಂದರ್ಭದಲ್ಲಿ ಶಕ್ತಿ ಸಮಾಯುತನಾದ ವಿಶ್ವಕರ್ಮನು (ಸಾಂಬನು) ಪರಿಣಾಮ್ಯುಪಾದಾನವಾಗಿರುವುದಿಲ್ಲ. ಅವಯವ ಉಳ್ಳ ಪದಾರ್ಥವು ಪರಿಣಾಮವನ್ನು ಹೊಂದುವುದು. ಮಡಿಕೆ ಮುಂತಾದ ಪದಾರ್ಥಗಳು ಸಾವಯವಗಳಾಗಿರುತ್ತವೆ. ಇವುಗಳು ಮಣ್ಣಿನ (ಮೃತಿಕೆಯ) ಪರಿಣಾಮವಾಗಿರುತ್ತವೆ. ಅದ್ದರಿಂದಲೇ ಇವುಗಳು ಅನಿತ್ಯ ಪದಾರ್ಥಗಳೆಂದು ನಿರ್ದಿಷ್ಟವಾಗಿರುತ್ತದೆ. ಶಕ್ತಿ ಸಮಾಯುಕ್ತನಾದ ವಿಶ್ವಕರ್ಮನು (ಸಾಂಬನು) ಪ್ರಪಂಚದ ಉತ್ಪತ್ತಿ ವಿಷಯದಲ್ಲಿ ಪರಿಣಾಮ್ಯುಪಾದನವಾದರೆ [redacted] ಗಳಂತೆಯೇ (ಘಟಾದಿಗಳಂತೆಯೇ) ಅನಿತ್ಯ ವಸ್ತುವಾಗುತ್ತಾನೆ. ಹಿಂದಿನಿಂದಲೂ ನಿರ್ದಿಷ್ಟವಾದ ಈ ನಿತ್ಯತ್ವವು ಇದರಿಂದ ಬಾಧಿತವಾಗುತ್ತದೆ ಎಂಬ ಅರ್ಥವು ಇಲ್ಲಿ ಬಳಸಲಾಗಿರುವ **ಯಸ್ಮಾತ್** ಎಂಬ ಪಂಚಮಿ ವಿಭಕ್ತಿಯಿಂದಲೇ ಅಭಿವ್ಯಕ್ತವಾಗುತ್ತದೆ.

## ಆದಿ ಶಿಲ್ಪಕೃತ್ತತಃ [redacted] ಭವತಿ | ೧೯

**ನನು ಸಂತಿ ಭವಿಷ್ಯಂತಿ ಅಭೂವಂಶ್ಚಾನೇಕೇ ಶಿಲ್ಪಿನಃ ಸ್ವಸ್ವಶಕ್ತ್ಯಾನು ಗುಣಶಿಲ್ಪಾಃ । ಕಃ ಪುನರಸ್ಯಾತಿಶಯಃ ? ತದಾಹ । ಆದಿ ಶಿಲ್ಪಕೃತ್ತತಃ ಸ ಭವತೀತಿ । ಸ ಏವ ಶಿಲ್ಪಿನಾಂ ಶಿಲ್ಪಮಾರ್ಗ ಪ್ರದರ್ಶಕಃ [redacted] ಏವ ಪರಮಾತ್ಮೇತಿ ಸೋsಸಾವತಿಶಯ ಇತ್ಯಾಶಯಃ। ಸುಗಮೋsತೋsನ್ಯೋsಕ್ಷರಾರ್ಥ ಇತಿ । ನ ತದ್ವಿವರಣಾಯ ಪ್ರಯತ್ನಃ । ನನ್ವಿದಮ ಸಂಬದ್ಧ ಮುಪನ್ಯಸ್ತಂ । ಸ ವಿಶ್ವಕರ್ಮೇತಿ ಆದಿ ಶಿಲ್ಪಕೃದಿತಿ [redacted] ಯಾವತಾ ಸಂಕಲ್ಪ ಏವ ತಸ್ಯೋಕ್ತಃ ನ ವಿಶ್ವಕರ್ತೃತ್ವಂ ಕರ್ಮಕರಾಣಾಮಿವ ನ ಚ ಲೋಕೇ ಸಂಕಲ್ಪ [redacted]–ಮಾಚರತಃ ಕರ್ಮಕೃತ್ತ್ವಂ ವ್ಯವಹರಂತೀತಿ ಹಾಸ್ಯಮೇತತ್ ಸಾಂಬಸ್ಯ ಶಿಲ್ಪಿ ವಚನಮಿತಿ ಚೇತ್ ನ । ವೇದವಾದಾತ್ ।**

ಅನೇಕ ಶಿಲ್ಪಿಗಳು ಆಗಿಹೋಗಿದ್ದಾರೆ. ಈಗಲೂ ಅನೇಕ ಶಿಲ್ಪಿಗಳು ಇದ್ದಾರೆ. ಇನ್ನು ಮುಂದೆಯೂ ಅನೇಕ ಶಿಲ್ಪಿಗಳು ಬರಲಿದ್ದಾರೆ. ಇವರೆಲ್ಲರೂ ತಮ್ಮ ತಮ್ಮ ಸಂಸ್ಕಾರಜನ್ಯ ಜ್ಞಾನಕ್ಕೆ ಅನುಗುಣವಾಗಿ ಶಿಲ್ಪ ವಿದ್ಯೆಯನ್ನು ಅಭ್ಯಸಿಸಿ, ಗಳಿಸಿರುವ ಸಿದ್ಧಿಗೆ ಅನುಗುಣವಾದ ಸ್ತರದ ಶಿಲ್ಪಿಗಳಾಗಿದ್ದಾರೆ. ಇಂತಹ ಸಂದರ್ಭದಲ್ಲ ಶಿಲ್ಪಶಾಸ್ತ್ರದ ಜ್ಞಾನವು ಯಾವ ರೀತಿಯಲ್ಲಿ ಅತಿಶಯ ವಾದುದಾಗಿರುತ್ತದೆ ಎಂಬ ಸಂಶಯವು ತಲೆದೋರುತ್ತದೆ. ಈ ಸಂಶಯದ ಪರಿಹಾರಾರ್ಥವಾಗಿಯೇ 'ಆದಿ ಶಿಲ್ಪಕೃತ್ತಃ ಸ ಭವತಿ' ಎಂಬ ಸೂತ್ರವು ಪ್ರವೃತ್ತವಾಗಿರುವುದು. ಆದಿಶಿಲ್ಪಿಯಾದ ವಿಶ್ವಕರ್ಮನು ಶಿಲ್ಪಿಗಳಿಗೆ ಶಿಲ್ಪ ಶಾಸ್ತ್ರದ ಜ್ಞಾನವು ಉಂಟಾಗುವಂತೆ ಅನುಗ್ರಹಿಸುತ್ತಾನೆ ಮತ್ತು ಆತನೇ ಪರಮಾತ್ಮನಾಗಿರುವನು ಎಂಬುದೇ ಇತರ ಶಿಲ್ಪಿಗಳಿಗಿಂತಲೂ [illegible] ಶಿಲ್ಪಿಗಳು ಅತಿಶಯವಾಗಿದ್ದಾರೆ ಎಂಬುದು ಅರ್ಥವಾಗುತ್ತದೆ. ಈ ಸೂತ್ರದಲ್ಲಿ ಅಡಗಿರುವ ಇತರ ಪದಗಳ ಅಭಿಪ್ರಾಯವನ್ನು ಸುಲಭವಾಗಿ ತಿಳಿಯಲು ಸಾಧ್ಯವಾಗಿರು ವುದರಿಂದ ಇದರ ವಿವರಣೆಯನ್ನು ಹೇಳಿಲ್ಲ.

ವಿಶ್ವಕರ್ಮನೇ ಆದಿಶಿಲ್ಪಕರ್ತೃವೆಂಬುದಾಗಿ ಈ ಉಪನಿಷತ್ತಿನಲ್ಲಿ ಹೇಳಲಾಗಿದೆ. ಈತನ ಸಂಕಲ್ಪವೇ ವಿಶ್ವಸೃಷ್ಟಿಗೆ ಮೂಲ ಕಾರಣವಾಗಿರು ತ್ತದೆ. ಸಾಧಾರಣ ಕೆಲಸಗಳನ್ನು ಮಾಡುವಂತೆ ಈತನ ಸೃಷ್ಟಿಕಾರ್ಯಕ್ಕೆ ಕರ್ಮಕರ್ತೃತ್ವವು ಇರುವುದಿಲ್ಲ. ಲೋಕದಲ್ಲಿ ಸಂಕಲ್ಪವನ್ನು ಮಾತ್ರವೇ ಆಚರಿಸುವವರಿಗೆ ಕರ್ಮಕರ್ತೃತ್ವದ ವ್ಯವಹಾರವು ಇರುವುದಿಲ್ಲ. ಆದ್ದರಿಂದ ಸಂಕಲ್ಪ ಮಾತ್ರವನ್ನು ಆಚರಿಸುತ್ತಿರುವ ಈ ವಿಶ್ವಕರ್ಮ ಪರಮೇಶ್ವರನಿಗೆ **ಆದಿಶಿಲ್ಪಕೃತ್** ಎಂಬುದಾಗಿ ವ್ಯವಹರಿಸುವುದು ಯುಕ್ತವಲ್ಲ ಎಂದು ಆಕ್ಷೇಪ ಉಂಟಾಗುತ್ತದೆ. ವೇದವಾದದಿಂದ [illegible] ಆಕ್ಷೇಪಕ್ಕೆ ದೊರೆಯುವ ಸಮಾ ಧಾನವು ಉತ್ತರವಾಗಿರುವುದು.

**ಮನ ಸಾ ಯತ್ಸೃಜ್ಯತೇ ವಿಶ್ವಕೃದಸ್ತತ್ಸರ್ವಗ್ಂ ಶಿಲ್ಪಮೇವ ಭವತಿ ।   ೧೯**

**ಯಥ ಸ್ವಪ್ನೇ ರಥಾದಯಃ ನ ಸಂತಿ [redacted] ತಾನ್ ಸೃಜತ ಇತಿ। ಅಂತಸ್ಸೃಷ್ಟಿಂ ವದತಿ ವೇದಃ। ತದ್ವದೇವೇಹ ಸೃಷ್ಟಿಃ ಕೀರ್ತ್ಯತೇ। ಸ ಹಿ ಕರ್ತೇತಿ। ತಸ್ಯ ಸ್ವಪತಃ ಕರ್ತೃತ್ವಮಪಿ ವದತಿ ವೇದಃ। ತದ್ವದೇವೇಹ ಕರ್ತೃತ್ವಂ ಕೀರ್ತ್ಯತ ಇತಿ ನ ಲೇಶತೋ ಹಾಸೋऽವ ಕಾಶೇತೇತಿ। [redacted] ಮಾಹ। ಮನಸಾ ಯತ್ಸೃಜ್ಯತೇ ವಿಶ್ವಕೃತ್ [redacted] ತತ್ಸರ್ವಂ ಶಿಲ್ಪಮೇವ ಭವತೀತಿ।**

ರಥ ಮುಂತಾದವುಗಳನ್ನು ಸ್ವಪ್ನದಲ್ಲಿ ಹೇಗೆ ಸೃಷ್ಟಿಮಾಡಿ ಓಡಿಸಲು ಸಾಧ್ಯವೋ ಅದೇ ರೀತಿಯಾಗಿ ಸೃಷ್ಟಿಯು ನಡೆಯುವುದು ಎಂದು ವಿಶ್ವಕರ್ಮ ಪರಮೇಶ್ವನ ಅಂತಸ್ಸೃಷ್ಟಿಯನ್ನು ವೇದವು ಬೋಧಿಸುತ್ತದೆ. ಇದೇ ರೀತಿಯಾಗಿಯೇ ಪ್ರಪಂಚ ಸೃಷ್ಟಿಯು ನಡೆದಿದೆ. ಅದರ ಕರ್ತೃವು ವಿಶ್ವಕರ್ಮ ಎಂದು ನಿರ್ದೇಶಿಸಲಾಗಿದೆ. ಸ್ವಪ್ನವೆಂಬುದು ನಿದ್ರಾಕಾಲದಲ್ಲಿಯ ಸ್ವಪ್ನಾವಸ್ಥೆಯಲ್ಲಿ ಉಂಟಾಗುತ್ತದೆ. ಇದನ್ನು ಸ್ವಾಪಕಾಲ ಎಂದು ಕರೆಯುತ್ತಾರೆ. ಸ್ವಾಪಕಾಲದಲ್ಲಿ ಉಂಟಾಗುವ ರಥಾದಿಗಳ ಕರ್ತೃತ್ವವನ್ನು ಬೋಧಿಸುವ ವೇದವು ಪ್ರಪಂಚದ ಸೃಷ್ಟಿಕರ್ತೃತ್ವವನ್ನು ಬೋಧಿಸುವುರಲ್ಲಿ ಕೊಂಚವೂ ಆಕ್ಷೇಪ ಉಂಟಾಗುವುದಕ್ಕೆ ಅವಕಾಶವನ್ನು ಕೊಡುವುದಿಲ್ಲ.

ಈ ಅಭಿಪ್ರಾಯದಿಂದಲೇ **ಮನಸಾ ಯತ್ ಸೃಜ್ಯತೇ ವಿಶ್ವಕೃತ್ ಅಂತಃ ತತ್ಸರ್ವಂ ಶಿಲ್ಪಮೇವ ಭವತಿ** ಎಂಬ ಸೂತ್ರವು ಪ್ರವೃತವಾಗಿರುತ್ತದೆ.

**ಸಂಸೃಜ್ಯತ ಇತಿ ದ್ವೈವಾದಿ ಕೋऽಯಮವು ಕರ್ಮಕೋ ಧಾತುಃ। ತತಶ್ಚ ಯತ್ತದಿತಿ [redacted] ಕರ್ಮಾರ್ಥ ಕೌ ಶಬ್ದೌ। ಅಪಿ ತರ್ಹಿ ಯದಾ ತದೇತಿ ಕಾಲಾರ್ಥಕೌ। ನನ್ವೇವಂ ತರ್ಹಿ ನಾಸ್ಮಾದ್ವಚನಾತ್ ಸ್ರಷ್ಟೃತ್ವಂ ಸಿಧ್ಯೇತ್ ಸಂಬಂಧವಾದಾದಿತಿ ಚೇತ್ ಸಿಧ್ಯೇದಿತಿ ಬ್ರೂಮಃ। ಮನೋऽಂತರಸ್ತಿ ಸಾಂಬೋऽಂತರಸ್ತಿ ವ್ಯಾಪೀ [redacted] ನಿತ್ಯಸಂಗಸರ್ಗಃ ಪ್ರಮಿತಃ। ಅತೋ ಯದಾ ತದೇತಿ ಕಾದಾಚಿತ್ಕತಾವಾದಃ ನೋಪಪದ್ಯತೇ। ನ ಚೈಷ ಉನ್ಮತ್ತಸ್ಯ ವಾದಃ।**

**ತದ್ಯಥಾ ಯಥೋಪಪದ್ಯೇತ ತಥಾ ತಥಾ ಯತಿತವ್ಯಂ। ವೃತ್ತಿ ವಿಶೇಷೋ ಯದಿ ಮನೋ ವಿಶಿಂಷ್ಯಾತ್ಕಾದಾಚಿತ್ಕಃ । ತರ್ಹಿ ಕಾದ್ಯಶೀ ಅನುಪಪತ್ತಿಃ। ವೃತ್ತಿ ವಿಶೇಷ ವಿಶೇಷಿತ ಮನಸಃ ಕಾದಾಚಿತ್ಕಾತ್ಕಾತ್ತತ್ಕೃತಿ ಯೋಗಿಕಸ್ಯ ಸಂಸರ್ಗಸ್ಯಾಪಿ ಕಾದಾಚಿತ್ಕ ಕಾಸಿದ್ಧೇಃ।**

ಸೃಜ್ಯತೇ ಎಂಬುದು ದಿವಾದಿ ಗಣಪಾಠದ ಅಕರ್ಮಕ ಧಾತುವಿನಿಂದ ಉಂಟಾಗಿರುವ ರೂಪವಾಗಿರುತ್ತದೆ. ಸೂತ್ರದಲ್ಲಿರುವ ಯತ್ ತತ್ ಎಂಬ ಎರಡು ಶಬ್ದಗಳೂ ಕರ್ಮಾರ್ಥ ಬೋಧಕಗಳಾಗಿರುವುದಿಲ್ಲ. ಇವುಗಳು ಯದಾ, ತದಾ ಎಂಬುದಾಗಿ ಕಾಲವನ್ನು ಬೋಧಿಸುತ್ತವೆ. ಆದ್ದರಿಂದ ಈ ವಚನದಿಂದ ಸೃಷ್ಟಿಯ ಕರ್ತೃತ್ವವು ಸಿದ್ಧವಾಗುವುದಿಲ್ಲ. ಈ ಪದದಿಂದ ಸಂಬಂಧವನ್ನು ಬೋಧಿಸುವುದಾದರೆ ಮನಸ್ಸು ಅಂತಃ ಸ್ಥಿತಿಯುಳ್ಳದ್ದಾಗಿರುವುದು. ಮನಸ್ಸಿನಲ್ಲಿ ಸಾಂಬನು ವ್ಯಾಪಿಯಾಗಿರುವನು. ಇದರಿಂದ ಮನಸ್ಸಿಗೂ ಸಾಂಬನಿಗೂ ನಿತ್ಯವಾದ ಸಂಸರ್ಗವು ಪ್ರಮಾಣೀಕೃತವಾಗಿರುವುದು. ಈ ಕಾರಣದಿಂದಲೇ ಯದಾ, ತದಾ ಎಂಬುದಾಗಿ ಕಾಲವಾಚಕ ಶಬ್ದಗಳಿಂದ ಕಾದಾಚಿತ್ಕತಾ ವಾದವನ್ನು ಹೇಳಬಾರದು. ಮನಸ್ಸಿಗೂ ಸಾಂಬನಿಗೂ ಇರುವ ಸಂಬಂಧವು ಕದಾಚಿತ್ ಉಂಟಾಗಿರುವುದಲ್ಲ ಎಂದು ಕಾದಾಚಿತ್ಕತಾ ವಾದವನ್ನು ನಿರಸಗೊಳಿಸಬೇಕು. ಮನಸ್ಸಿಗೂ ಸಾಂಬನಿಗೂ ಸಂಸರ್ಗವು ನಿತ್ಯವಾಗಿರುವ ಸತ್ಯವನ್ನು ತಿಳಿದುಕೊಳ್ಳಬೇಕು. ವೃತ್ತಿ ವಿಶೇಷವು ಮನಸ್ಸಿಗೆ ವಿಶೇಷಣವಾಗುವಾಗ ಸಂಸರ್ಗವು ಕಾದಾಚಿತ್ಕವಾಗುವುದು. ವೃತ್ತಿ ವಿಶೇಷ ವಿಶೇಷಿತವಾದ ಮನಸ್ಸು ಕಾದಾಚಿತ್ಕವೆಂದು ಸಿದ್ಧವಾಗಿರುವುದು. ಇದರಿಂದ ಈ ಪ್ರಕಾರವಾದ ವೃತ್ತಿ ವಿಶೇಷಿತವಾದ ಮನಸ್ಸಿನ ಕಾದಾಚಿತ್ಕ ಸ್ಥಿತಿಯೂ ಅನಿತ್ಯವಾಗಿರುವುದು.

**ನನು ಮನಸಾ ಬಹಿಃ ಸಂಸರ್ಗೋ ಸಂಭವೀ ಅತೋಽಂತರಿತಿ ನಿರ್ದೇಶೋಽನರ್ಥಕಃ ಪ್ರಾಪ್ನೋತಿ। ನ ಪ್ರಾಪ್ನೋತಿ। ಕಥಂ ಕೃತ್ವಾ। ಲೋಕಾನುಭವಂ ಪ್ರಮಾಣೀಕೃತ್ಯ। ಕೀ ದೃಶೋಽಯ ಮನುಭವ,? ತಮಾಹ। ಜಾಗ್ರತಂ ದೇವದತ್ತಂ ಆಹ್ವಯಂತೋ ವದಂತಶ್ಚ**

**ವೃತ್ತಾಂತಂ ಜನಾ ಯದಾ ಅಸಿದ್ಧಾರ್ಥಾ ಭವಂತಿ। ತದಾ ವಕ್ತಾರೋ ಭವಂತಿ। ಜಾಗ್ರದಪಿ ದೇವದತ್ತೋಽಂತರ್ಮನಸ್ಕ ಏವ ನ ಬಹಿರ್ಮನಸ್ಕಃ ಯತೋ ನಾಸ್ಮದ್ವಚನಮಶೃಣೋತ್ ಯತ್ಕಾರಣಂನೋತ್ತರಮುದಾದಿತಿ। [redacted] ಚ ದೇವದತ್ತಃ ಕಾಲಾಂತರೇ ತೈರಾಹ್ವಾನಾದಿಕಂ ಬೋಧ್ಯಮಾನಃ ಪ್ರತಿವದತಿ। ಅಂತರ್ಮನಸ್ಕೋಽಹಮಭವಂ ನ ಬಹಿರ್ಮನಸ್ಕಃ ತತೋನಾಶೃಣವಮಿತಿ। ತಸ್ಮಾನರ್ಥಕಃ [redacted] ನಿರ್ದೇಶಃ। ಕಿಮತೋ ಯದ್ಯೇವಂ? ಏತದತೋಭವತಿ— ಮಾನಸಿಕ ವ್ಯಾಪಾರ ಮಾತ್ರಾತ್। ಮಹಾ ಮಹತೋ ವಿಶ್ವಸರ್ಜನಸ್ಯ ಸಿದ್ಧಿರ್ಯದಿ ತರ್ಹಿ [redacted] ವಿಶ್ವಸ್ರಷ್ಟಾ ಅಚಿಂತ್ಯ ವೈಭವಃ ಸ್ಯಾದಿತಿ। ಅತಶ್ಚ ಏವಕಾರೋ ಭಿನ್ನಕ್ರಮಃ ಸರ್ವಮೇವ ಶಿಲ್ಪಮಿತಿ।**

ಮನಸ್ಸಿನೊಡನೆ ಬಹಿಸ್ಸಂಸರ್ಗವು ಸಾಂಬನಿಗೂ ಅಸಂಭವವಾಗಿದೆ. ಲೋಕಾನುಭವದಿಂದ ಅಂತಸ್ಸಂಸರ್ಗವು ಪ್ರಾಮಾಣಿಕವಾಗಿರವುದು. ದೇವದತ್ತನೆಂಬುವನು ಜಾಗ್ರದಾವಸ್ಥೆಯಲ್ಲಿರುವಾಗ ಅವನ ಹೆಸರನ್ನು ಹಿಡಿದು ಜನರು ಕರೆಯುತ್ತಾರೆ. ಅವನ ಸಂಗಡ ಮಾತನಾಡುತ್ತಾರೆ. ಜನರು ಹೀಗೆಲ್ಲಾ ಪ್ರಯತ್ನಿಸಿದರೂ ಅವನು ಮಾತನಾಡದೆ ಇದ್ದರೆ ದೇವದತ್ತನು ಬಹಿರ್ಮನನಾಗಿದ್ದಾನೆ (ಎಚ್ಚರವಾಗಿದ್ದಾನೆ) ಎಂದು ಹೇಳಲು ಸಾಧ್ಯವಿಲ್ಲ. 'ನಮ್ಮ ಮಾತುಗಳು ಅವನಿಗೆ ಕೇಳಿಸಿಯೇ ಇಲ್ಲ. ಆದ್ದರಿಂದಲೇ ಅವನು ಉತ್ತರಿಸಿಲ್ಲ' ಎಂದು ಜನರು ಹೇಳುತ್ತಾರೆ. ದೇವದತ್ತನೂ ಕೂಡ ಜನರ ಪ್ರಶ್ನಾದಿಗಳಿಗೆ ನಾನು ಉತ್ತರಿಸಿಲ್ಲ. ನಾನು ಅಂತರ್ ಮನಸ್ಕನಾಗಿದ್ದೆನು. ಆದ್ದರಿಂದ ಅವರ ಮಾತುಗಳು ಕೇಳಿಲ್ಲವೆಂದು ತರುವಾಯ ಹೇಳುತ್ತಾನೆ. [redacted] ಕಾರಣದಿಂದ ಅಂತ ಸ್ಸಂಬಂಧವು ನಿತ್ಯವೆಂದು ತಿಳಿಯಬೇಕು.

ಮನಸ್ಸಿನ ಸಂಕಲ್ಪ ರೂಪವಾದ ಮಾನಸಿಕ ವ್ಯಾಪಾರ ಮಾತ್ರದಿಂದಲೇ ದೊಡ್ಡದಾದ ಪ್ರಪಂಚದ ಸೃಷ್ಟಿಯನ್ನು ಮಾಡಿದ ವಿಶ್ವಕರ್ಮನು ಊಹೆಗೆ ನಿಲುಕದ ಅಪಾರ ಮಹಿಮಾ ಸಂಪನ್ನನಾಗಿರಬೇಕು. ಅತನ ಸೃಷ್ಟಿಯೆಲ್ಲವೂ ಶಿಲ್ಪವೇ ಆಗಿದೆ. 'ತತ್ಸರ್ವಗ್‌ಂ ಶಿಲ್ಪಮೇವ ಭವತಿ' ಎಂಬ ವಾಕ್ಯದಲ್ಲಿರುವ [redacted] ಕಾರವು ಭಿನ್ನಕ್ರಮ ಸಂಯೋಜನೆಯಿಂದ 'ಸರ್ವಮೇವ ಶಿಲ್ಪಂ ಭವತಿ'

ಎಂದು ಸೂತ್ರಗತವಾದ ಪದಗಳ ಯೋಜನೆಯಲ್ಲಿ ಹೇಳಬೇಕು. ಇದರಿಂದ ಜಗತ್ತಿನ ಸೃಷ್ಟಿಯು ಬಹು ದೊಡ್ಡದಾಗಿರುವ ಮಹಾಶಿಲ್ಪ ಎಂಬುದು ಸ್ಪಷ್ಟವಾಗಿ ಅರ್ಥವಾಗುತ್ತದೆ.

**ಯತ್ತದ್ವಿಧಾನಮನುಬ್ರೂಹೀತಿ ಛಾತ್ರೇಣ ಪೃಷ್ಟೋ ದೇಶಿಕಸ್ಸಪುನರುವಾಚೇತಿ । ೨೦**

**ಸೂತ್ರಿ ತಸ್ಯ ಜಗತ್ಸರ್ಜನಸ್ಯ ವಿಸ್ತರಶಃ ಬೋಧನಾಯ ಗುರುಶಿಷ್ಯಯೋಃ ಪ್ರಶ್ನ ಸಮಾಧಾನೇ ಕೀರ್ತಯತಿ ನಾ ಪೃಷ್ಟಃ ಕಸ್ಯಚಿದ್ಬ್ರೂಯಾದಿತಿ ಪ್ರಮಾಣಃ ಸ್ಮರಂತೀ ಶ್ರುತಿಃ ಯತ್ತದಿತ್ಯದಿನಾ....ಉವಾಚೇತ್ಯಂಶೇನ । ಯದಿಹ ಸೂತ್ರಿ[illegible]ಂ ತಸ್ಯಾನುವಿಧಾನಂ ಸೂತ್ರಿತಮರ್ಥಮನುರುದ್ಧ್ಯೈವ ಧಾರಣಂ ವಿಸ್ತರಶಃ ಪ್ರತಿಪಾದನ ರೂಪ ಶಬ್ದ [illegible]ತ್ಯರ್ಥಃ । ಸುಗಮ ಮನ್ಯತ್ । ಪೃಷ್ಟಮರ್ಥಮನುಶಾಸ್ತೀ ಶ್ರುತಿರ್ವಕ್ತ್ರ ಮನುಕೀರ್ತಯತಿ ।**

ಪ್ರಶ್ನೆಯನ್ನು ಕೇಳದೆ ಇರುವ ಯಾರಿಗೂ ಉತ್ತರವನ್ನು ಹೇಳಬಾರದು (ನ ಅಪೃಷ್ಟಃ ಕಸ್ಯ ಚಿತ್ ಬ್ರೂಯಾತ್) ಎಂದು ಶಾಸನವಿರುವುದರಿಂದಲೂ, ಶ್ರುತಿಯನ್ನೂ 'ಯತ್ತತ್' ಎಂದು ಪ್ರಾರಂಭಿಸಿ 'ಉವಾಚ' ಎಂಬ ಪದದಿಂದ ಕೊನೆಗೊಳ್ಳುವವರೆಗೂ ಗುರುಶಿಷ್ಯರ ಪ್ರಶ್ನೆ ಸಮಾಧಾನ ರೂಪದಿಂದ ಸೃಷ್ಟಿ ಕ್ರಮವನ್ನು ಬೋಧಿಸುತ್ತದೆ. ಸೂತ್ರದ ಅರ್ಥವನ್ನು ವಿಸ್ತಾರವಾಗಿ ವಿವರಿಸಬಲ್ಲ ಶಬ್ದಗಳನ್ನು ಬಳಸಿ ಪ್ರತಿಪಾದಿಸುವುದು ಸೂತ್ರಾರ್ಥಧಾರಣವೆನಿಸುತ್ತದೆ. ಈ ಪ್ರಕಾರವಾದ ರೀತಿಯಿಂದಲೇ ಸೂತ್ರಾರ್ಥವನ್ನು ಉಪದೇಶಮಾಡುವಂತೆ ಶಿಷ್ಯನು ಗುರುವನ್ನು ಕುರಿತು ಪ್ರಶ್ನೆ ಮಾಡಿರುವನು.

**ಯದಾ ಸ ಪರಬ್ರಹ್ಮಣ ಸ್ಸಂಕೋಲ್ಪೋದಯೋ ಭವತಿ । ೨೧**

**ತದೈವಾಹಂಕಾರಃ ಪ್ರಜಾಯತೇ । ೨೨**

ತಸ್ಮಾತ್ಪಂಚ ಭೂತಾನಿ। ೨೩

ಭೂತೇಭ್ಯ ಓಷಧಯಸ್ಸರ್ವೇ। ೨೪

ತೇ ಭ್ಯೋऽನ್ನಂ [redacted] ಸ್ಥಾವರ ಜಂಗಮಃ
ಪ್ರಪಂಚೋ ಭವತೀ । ೨೫

ಕಾರಣಂ ಭವತ್ಯತ್ರ ಚೋಪಾದಾನ
ಮಾಕಾಶಾದೀನಿ । ೨೬

ಯದೇತಿ । [redacted] ಸಂಕಲ್ಪೋದಯಃ ಪರಬ್ರಹ್ಮಣ ಇತ್ಯನ್ವಯಃ । ಏವಂ ವೃತ್ತಮನು ಕೀರ್ತ್ಯವರ್ತಿಷ್ಯಮಾಣಾಯೋಪಕ್ರಮತೇ ತದೈವಾಹಂಕರ ಇತ್ಯಾದಿನಾ । ಅಂಬಯೋಪಲಕ್ಷಿತಸ್ಯ ಶುದ್ಧಚಿತಃ ಪ್ರಾಣಿ ಕರ್ಮಭಿರ್ಜಗದ್ರಚನಾಯೈ ಪ್ರೇರಿತಸ್ಯ ಮಾಯಾ ವಿಷಯ ಕಾಲೋಚನಾಯ ವೃತ್ತಿ ವಿಶೇಷೋऽಹಂಕಾರಾಖ್ಯೋ [redacted] । ತತಃ ಪೃಥಿವ್ಯಾದೀನಿ ಪಂಚಭೂತಾನಿ ಜಾತಾನೀತಿ ಭಾಸ-ಮಾನೋऽರ್ಥಃ । ಅತ್ರ ಶ್ರುತ್ಯಂತರ ಸಿದ್ಧಾ ನಾಮಾರ್ಥನಾಮ ನಾದರಾದನುಪಾದಾನಂ ಅಕ್ಷೇಪಾತ್ತತ್ಸಿದ್ಧೇಃ। [redacted] ಚಾರ್ಥಾ ಏವ ಮನುಸಂಧ್ಯೇಯಾಃ । ಪ್ರಥಮತೋ ಮಹತತ್ತ್ವಂ ಮಾಯಾಯಾಃ ತದ್ಭಾವಾಪನ್ನ ಮಾಯಿತೋऽಹಂಕಾರ ತತ್ತ್ವಂ ತತಸ್ತಾದೃಶಾದಹಂ ಕಾರಾತ್ಪಂಚ ತನ್ಮಾತ್ರಾಣಿ। ಸರ್ವೇಷಾಮೇವೈಷಾಂ ತ್ರಿಗುಣಾತ್ಮಕ ಮಾಯಾಕಾರ್ಯತ್ವಾತ್ ತ್ರಿಗುಣಾತ್ಮಿಕತಾ। ತತ್ರ ಸತ್ತ್ವ ಗುಣ ಪ್ರಧಾನಾನಿ ಪಂಚ ಸೂಕ್ಷ್ಮ ಭೂತಾನಿ ಶ್ರೋತ್ರಾದೀನಿ ಜ್ಞಾನೇಂದ್ರಿಯಾಣಿ ಪೃಥಗ್ಜನಯಂತಿ, ಸಮುಚ್ಚಿತ್ಯಮನಃ, ರಜೋಗುಣ ಪ್ರಧಾನಾನಿ ಚ [redacted] ಸೂಕ್ಷ್ಮ ಭೂತಾನಿ ಪಂಚಕರ್ಮೇಂದ್ರಿಯಾಣಿ ಪೃಥಕ್, ಸಮುಚಿತ್ಯಾ ಪ್ರಾಣಂ । [redacted] ತಮಃ ಪ್ರಧಾನಾಂ ಮಾಯಾಂ ಪಂಚೀಕರೋತಿ ಸೂಕ್ಷ್ಮ ಭೂತಾತ್ಮಿಕಾಂ [redacted]

**ಸ್ಥೂಲಾನಿ ಪಂಚ ಭೂತಾನಿ ಭವಂತಿ। ತೇಭ್ಯ ಔಷಧಿ ವನಸತ್ಪಯು ಇತಿ। ತೇಭ್ಯೋಽಸ್ಮಿಂ ತತಃ ಸ್ಥಾವರಯುತ ಜಂಗಮಃ ಪ್ರಪಂಚೋ ಭವತಿ**

**ಯದಾ** ಎಂದು ಮೊದಲುಗೊಂಡು ಪ್ರಾರಂಭವಾಗುವ ಶ್ರುತಿಯು ಶಿಷ್ಯನು ಪ್ರಶ್ನೆ ಮಾಡಿರುವ ವಿಷಯುವನ್ನು ಸಮಗ್ರವಾಗಿ ಬೋಧಿಸುವುದು. ಪರಬ್ರಹ್ಮನಾದ ವಿಶ್ವಕರ್ಮನಲ್ಲಿ ಸಂಕಲ್ಪವು ಉಂಟಾದ ಕೂಡಲೇ ಅಹಂಕಾರವು ಉಂಟಾಗುವುದು. ಎಂದರೆ ಪರಬ್ರಹ್ಮನಲ್ಲಿ ಸಂಕಲ್ಪವು ಉದಯವಾದ ಕೂಡಲೇ ಅಹಂಕಾರವು ಉತ್ಪನ್ನವಾಗುತ್ತದೆ. ಶುದ್ಧವಾದ ಚಿದ್ರೂಪಕ್ಕೆ ಮಾಯಾ ಸಂಬಂಧ ಉಂಟಾಗಿ ಚಿದ್ರೂಪ ಮಾಯೋಪಾದಿಕವೆನಿಸಿಕೊಳ್ಳುತ್ತದೆ. ಇದನ್ನು 'ಶಬಳ ಬ್ರಹ್ಮ' ಎನ್ನುತ್ತಾರೆ. ಪ್ರಾಣಿಗಳ ಕರ್ಮಗಳಿಂದ ಜಗತ್ತನ್ನು ಸೃಷ್ಟಿಮಾಡುವುದಕ್ಕಾಗಿ ಉಂಟಾಗಿರುವ ಸಂಕಲ್ಪ ರೂಪದ ಇಚ್ಛೆಯುಳ್ಳವನಾಗಿ ಮಾಯಾ ವಿಷಯವಾದ ಪ್ರಾಣಿಗಳ ಕರ್ಮಗಳನ್ನು ಅವುಗಳ ನಿವರ್ಾಣಕ್ಕಾಗಿ ಯೋಚಿಸುವ ಸಾಂಬನ ಇಚ್ಛಾ ವಿಶೇಷವು ಅಹಂಕಾರವೆನಿಸುತ್ತದೆ. ಈ ಅಹಂಕಾರದಿಂದ ಪೃಥ್ವಿ ಮುಂತಾದ ಐದು ಭೂತಗಳು ಉತ್ಪನ್ನವಾದವು. ಬೇರೆ ಬೇರೆ ಶ್ರುತಿಗಳಿಂದ (ಶ್ರುತ್ಯಂತರದಿಂದ) ಸಿದ್ಧವಾಗುವ ಅರ್ಥಗಳನ್ನು ಇಲ್ಲಿ ಅನುಥರ ಮಾಡಲಾಗುತ್ತದೆ. ಅನುಮಾನ ಪ್ರಮಾಣದಿಂದ ಅಥವ ಅರ್ಥಾಪತ್ತಿ ಪ್ರಮಾಣದಿಂದ ಸಿದ್ಧವಾಗುವುದನ್ನು ಮಾತ್ರ ಸ್ವೀಕರಿಸ ಲಾಗುತ್ತದೆ. ಇವೆಲ್ಲವನ್ನು ವಯಂದೆ ವಿವರಿಸಲಾಗಿರುವ ಕ್ರಮದಿಂದ ತಿಳಿಯ ತಕ್ಕದ್ದಾಗಿದೆ. ಅರ್ಥಾಪತ್ತಿ (ಅಥವ ಅನುಮಾನ) ಪ್ರಮಾಣವೆಂಬುದು ಶ್ರುತಾರ್ಥ ಪತ್ತಿ ಎಂದು ಎರಡುಬಗೆಯುದಾಗಿದೆ. ಶ್ರುತಾರ್ಥಪತ್ತಿಯಲ್ಲಿ ಶಬ್ದವು ಪ್ರಮಾಣದಿಂದ ಗೋಚರಿಸಿ ಅದರಿಂದ ಅರ್ಥವು ಬೋಧಿತವಾಗುತ್ತದೆ. ಅರ್ಥಾಪತ್ತಿಯಲ್ಲಿ ಕೇವಲ ಅರ್ಥ ಮಾತ್ರವೇ ಗೊತ್ತಾಗುತ್ತದೆ. **ಪೀನೋ ದೇವದತ್ತೋ ದಿವಾನ ಭಂಕ್ತೇ** ಹಗಲಿನ ಭೋಜನವಿಲ್ಲದೆ ಇರುವುದರಿಂದ ದೇವದತ್ತನಿಗೆ ಬಾಯಾರಿಕೆಯುಂಟಾಗಿ ರಾತ್ರಿಯ ಭೋನಜವು ಅಪೇಕ್ಷಣೀಯ ವಾಗಿರುತ್ತದೆ. ಹೀಗೆಯೇ ಇಲ್ಲಿಯ ಅರ್ಥವು ಶಬ್ದಗಳಿಂದ ಅಲ್ಲದೆ ಕೇವಲ ಅನುಭವಜನ್ಯನಾದ ಅಪೇಕ್ಷೆಯ ಆಧಾರದಿಂದ ನಿರ್ಣಿತವಾಗುತ್ತದೆ. **ಮೊದಲು**

ಮಾಯೆಯಿಂದ ಮಹತ್ತತ್ತ್ವವು ಉಂಟಾಗುತ್ತದೆ. ತರುವಾಯ ಮಹತ್ತತ್ತ್ವವನ್ನು ಒಳಗೊಂಡ ಮಾಯೆಯಿಂದಲೇ ಅಹಂಕಾರವು ಜನಿಸುವುದು. [redacted] ಅಹಂಕಾರದಿಂದ ಪಂಚತನ್ಮಾತ್ರೆಗಳು ಹುಟ್ಟುವವು. ಇವುಗಳೆಲ್ಲವೂ ಸತ್ತ್ವ ರಜಸ್ಸು ತಮಸ್ಸು ಎಂಬ ಮೂರು ಗುಣಗಳನ್ನು ಹೊಂದಿರುವ ಕಾರಣದಿಂದ ಇವೆಲ್ಲವೂ ತ್ರಿಗುಣಗಳನ್ನು ಪಡೆದಿರುವವೇ ಆಗಿರುತ್ತವೆ. ಅದರಲ್ಲಿ ಪಂಚ ಸೂಕ್ಷ್ಮಭೂತಗಳೂ ಸತ್ತ್ವಗುಣ ಪ್ರಾಧಾನ್ಯವಾಗಿದ್ದು ಶ್ರೋತ್ರ ಇತ್ಯಾದಿ ಪಂಚಜ್ಞಾನೇಂದ್ರಿಯಗಳಿಗೆ ಕಾರಣವಾಗಿರುತ್ತವೆ ಇವು ಬೇರೆ ಬೇರೆಯಾಗಿ ಐದು ಸೂಕ್ಷ್ಮ ಭೂತಗಳಿಂದ ಐದು ಜ್ಞಾನೇಂದ್ರಿಯಗಳು ಉತ್ಪತ್ತಿಯಾಗಿರುವುವು. ಪಂಚಭೂತಗಳ ಸೂಕ್ಷ್ಮ ಸಮಷ್ಟಿರೂಪದಿಂದ ಮನಸ್ಸು ಉತ್ಪತ್ತಿಯಾಗುವುದು.

ಈ ಪಂಚ ಸೂಕ್ಷ್ಮ ಭೂತಗಳು ರಜೋ ಗುಣ ಪ್ರಧಾನವಾಗಿರುವಾಗ [redacted] ಕರ್ಮೇಂದ್ರಿಯಗಳು [redacted] ಬೇರೆಯಾಗಿ ಉತ್ಪತ್ತಿಯಾಗುವುವು. ರಜೋಗುಣ ಪ್ರಧಾನವಾದ ಈ ಪಂಚಸೂಕ್ಷ್ಮ ಭೂತಗಳು ಸಮಷ್ಟಿಯಿಂದ ಪ್ರಾಣವು ಉಂಟಾಗುವುದು. [redacted] ಸೂಕ್ಷ್ಮ ಭೂತಗಳು ತಮಸ್ಸನ್ನು ಪ್ರಧಾನವಾಗಿ ಹೊಂದಿರುವಾಗ ಅದನ್ನು ಪಂಚೀಕರಣ ಮಾಡುತ್ತಾರೆ. ಪ್ರತಿಯೊಂದು ಭೂತದ ಅಂಶವನ್ನೂ [redacted] ವಿಭಾಗಮಾಡಿ ಅವುಗಳಲ್ಲಿ ಒಂದು ಭಾಗಕ್ಕೆ ಉಳಿದ ಭೂತಗಳ ಒಂದೊಂದು ಭಾಗವನ್ನು ಸೇರಿಸುವುದನ್ನು ಪಂಚೀಕರಣ ಎನ್ನಲಾಗುತ್ತದೆ. ಇದರಿಂದ ಪ್ರತಿಯೊಂದರಲ್ಲಿಯೂ ಒಂದು ಭೂತದ ಅಂಶವು ಅಧಿಕವಾಗಿಯೂ ಇತರೆ ಭೂತಗಳ ಅಂಶವು ಕಡಿಮೆಯಾಗಿಯೂ ಇರುತ್ತವೆ. ಹೆಚ್ಚಾಗಿ ಇರುವ ಭೂತದ ಅಂಶದ ಜ್ಞಾನವನ್ನು ಅನುಸರಿಸಿ ಆಯಾ ಸ್ಥೂಲ ಭೂತಗಳು ಉತ್ಪನ್ನವಾಗುತ್ತವೆ. ಪಂಚ ಸ್ಥೂಲ ಭೂತಗಳಿಂದ ಪೃಥ್ವಿ, ಅಪ್ಪು, ವಾಯು, ತೇಜಸ್ಸು, ಆಕಾಶಗಳ ಸೃಷ್ಟಿಯೂ, ನಂತರ ಇವುಗಳಿಂದ ಮೂಲಿಕೆಗಳು ವನಸ್ಪತಿಗಳು ಉಂಟಾಗುತ್ತವೆ.

[redacted] ವನಸ್ಪತಿಗಳಿಂದ ಅನ್ನವು ಸೃಷ್ಟಿಯಾಗುತ್ತದೆ. ಅನ್ನದಿಂದ ಸ್ಥಿರವಾದ ಮತ್ತು ಸಂಚರಿಸುವ ಪ್ರಾಣಿಗಳ ಸೃಷ್ಟಿಯು ಐದನೆಯ ವಿಧವಾಗಿರುತ್ತದೆ. ಸತ್ತ್ವಗುಣ ಪ್ರಧಾನವಾದ ಸೂಕ್ಷ್ಮ ಭೂತದಿಂದ ಜ್ಞಾನೇಂದ್ರಿಯಗಳು, ರಜೋಗುಣ ಪ್ರಧಾನವಾದ ಸೂಕ್ಷ್ಮಭೂತಗಳ ಪಂಚೀಕರಣದಿಂದ ಸ್ಥೂಲವಾದ

ಪಂಚಭೂತಗಳು ಹೀಗೆ ಮೂರು ವಿಧವಾದ ಸೃಷ್ಟಿಯಾದ ನಂತರ ಇವುಗಳಿಂದ ಅನ್ನರೂಪವಾದ ಔಷಧಿ ಮತ್ತು ವನಸ್ಪತಿಗಳು ನಾಲ್ಕನೆಯದಾಗಿಯೂ, ಐದನೆಯದಾಗಿ ಪ್ರಾಣಿಗಳ ಸೃಷ್ಟಿಕ್ರಮವು ನಡೆಯುತ್ತದೆ.

[ಪಂಚೀಕರಣ ಮೂಲಕ ನಡೆದ ಸೃಷ್ಟಿಯ ವಿವರಣೆಯು ಪದ್ಮಪುರಾಣದ ಭೂಖಂಡದ ಸ್ಕಂದೋತ್ಪತ್ತಿ ಪ್ರಕರಣದ ವಿಶ್ವಕರ್ಮೋಪಾಖ್ಯಾನದಲ್ಲಿ [redacted] ರೀತಿ ದೊರೆಯುತ್ತದೆ—

ಪದ್ಮಪುರಾಣೇ ಭೂಖಂಡೇ ಸ್ಕಂದೋತ್ಪತ್ತೌ ವಿಶ್ವಕರ್ಮೋಪಾಖ್ಯಾನೇ

**ಅಥ ಚತುರ್ವಿಂಶೋಽಧ್ಯಾಯಃ**

ಯದಾ ನಭೂರ್ನ್ನಖಂ ನಾಗ್ನಿರ್ನ್ನವಾಯುರ್ನ್ನಾಪಿಚೋದಕಂ |
ತದೈವ [redacted] ಕೃಷ್ಣೋ ಭೂನ್ನಿರ್ಗುಣೋ ನಿಷ್ಕಲೋದಯಃ ॥೩॥

ಯಾವ ಕಾಲದಲ್ಲಿ ಪೃಥ್ವಿ, ಆಕಾಶ, ಅಗ್ನಿ, ವಾಯು ಮತ್ತು ಜಲಗಳೆಂಬ ಪಂಚಭೂತಗಳೂ ಅಸ್ತಿತ್ವದಲ್ಲಿರಲಿಲ್ಲವೋ ಆ ಕಾಲದಲ್ಲಿ ನಿರ್ಗುಣವೂ, ನಿಷ್ಕಲವೂ, ನಿರಾಕಾರವೂ ಆಗಿದ್ದ ಕೃಷ್ಣ ಪರಮಾತ್ಮನೇ ಇದ್ದನು. ಅದೇ ತತ್ತ್ವವನ್ನೇ ವೇದಗಳಲ್ಲಿ ವಿಶ್ವಕರ್ಮನೆಂದು ಕರೆಯಲಾಗಿದೆ.

ತೇನ ಮಾಯಾ ಸಹಾಯೇನ ನಿರ್ಮಿತಂ ಭೂತ ಪಂಚಕಂ |
ವ್ಯೋಮ ವಾಯು ಸ್ತಥಾ ಜ್ಯೋತಿರಾಪೋ ಭೂಮಿಶ್ಚ ಪಂಚಮೀ ॥೪॥

ಶಬ್ದೈಕ ಗುಣಮಾಕಾಶಂ ಶಬ್ದ ಸ್ಪರ್ಶ ಯತೋಽನಿಲಃ |
ಶಬ್ದ ಸ್ಪರ್ಶಂಚ ರೂಪಂಚ ಜ್ಯೋತಿಷೋಽಮೀ ಗುಣಸ್ತ್ರಯಃ ॥೫॥

ಶಬ್ದಸ್ಪರ್ಶೌ ರೂಪರಸಾ ಚತ್ವಾರೋಽಪಾಂ ಗುಣಾಃ ಸ್ಮೃತಾಃ |
ಶಬ್ದ ಸ್ಪರ್ಶೌ ರೂಪರಸಾ ಗಂಧಶ್ಚೇತಿ ಭುವೋಗುಣಾಃ ॥೬॥

ಏಕನಾಗಿದ್ದ ಆ ಪರತತ್ತ್ವವು ಮಾಯೆಯೊಂದಿಗೆ ಕೂಡಿ ವಿರಾಟ್ ಆಗಿ, ಶಬ್ದವೊಂದೇ ಗುಣವಾಗಿರುವ ಆಕಾಶವನ್ನು, ಶಬ್ದಸ್ಪರ್ಶ ಗುಣಗಳಾಗಿ ಪಡೆದಿರುವ ವಾಯುವನ್ನು, ಶಬ್ದಸ್ಪರ್ಶ ರೂಪ ರಸಗಳೆಂಬ ಗುಣಗಳನ್ನು

ಪಡೆದಿರುವ ಜಲವನ್ನು, ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ಗುಣಗಳನ್ನು ಪಡೆದಿರುವ ಭೂಮಿಯನ್ನು ಸೃಷ್ಟಿಸಿತು. ಹೀಗೆ ಗುಣಪಂಚಕಗಳಿಂದ ಪಂಚ ಭೂತಗಳ ಸೃಷ್ಟಿಯಾಯಿತು.

ವ್ಯೋಮತೋ ನಿರ್ಗಮೇ ಶ್ರೋತ್ರಂ ಮಿಂದ್ರಿಯಂ ಶಬ್ದಗಾಮಿತತ್ ।
ವಾಯೋಃ ಸ್ತ್ವಗಿಂದ್ರಿಯಂ ಜಾತಂ ಸ್ಪರ್ಶಸ್ಯ ಗ್ರಹಣೇ ಕ್ಷಮಂ ।೭।

ರೂಪ ಗ್ರಹಕ್ಷಮಂ [redacted] ಭೂದ್ ಜ್ಯೋತಿಷಶ್ಚಕ್ಷುರಿಂದ್ರಿಯಂ ।
ರಸಗ್ರಹಕ್ಷಮಂ ತದ್ವದದ್ಭ್ಯೋ ಭೂದ್ರಸನೇಂದ್ರಿಯಂ ।೮।

ಭೂಮೇರ್ಘ್ರಾಣೇಂದ್ರಿಯಮಭೂತ್ಸರ್ವ ಗಂಧಗ್ರಹಕ್ಷಮಂ ।
ಸರ್ವೇಷಾಮಪಿ ಭೂತಾನಾಂ ಮಾತ್ರಾಭ್ಯಃ ಪಶ್ಚ ಮಿಂದ್ರಿಯಮ್ ।೯।

ಮತ್ತೆ ಆಕಾಶದಿಂದ ಶಬ್ದಗಾಮಿಯಾದ ಕರ್ಣೇಂದ್ರಿಯವನ್ನು (ಕಿವಿಯನ್ನು), ವಾಯುವಿನಿಂದ ಸ್ಪರ್ಶಜ್ಞಾನವುಳ್ಳ ತ್ವಗಿಂದ್ರಿಯವನ್ನು (ಚರ್ಮವನ್ನು), ಅಗ್ನಿಯಿಂದ ರೂಪವನ್ನು ಗ್ರಹಿಸಬಲ್ಲ ನೇತ್ರೇಂದ್ರಿಯವನ್ನು (ಕಣ್ಣನ್ನು), ಉದಕದಿಂದ (ನೀರಿನಿಂದ), ರಸಗ್ರಹಣ ಶಕ್ತಿಯುಳ್ಳ ಜಿಹ್ವೇಂದ್ರಿಯವನ್ನು (ನಾಲಿಗೆಯನ್ನು), ಪೃಥ್ವಿಯಿಂದ (ಭೂಮಿಯಿಂದ) ಸರ್ವಗಂಧಗ್ರಹಣ ಶಕ್ತಿಯುಳ್ಳ ನಾಸಿಕೇಂದ್ರಿಯವನ್ನು (ಮೂಗನ್ನು) ಸೃಷ್ಟಿಸಲಾಯಿತು.

ಸರ್ವೇಷಾ ಮಪಿ ಭೂತಾನಾಂ ಮಾತ್ರಾಭ್ಯಃ ಪಶ್ಚಮಿಂದ್ರಿಯಮ್ ।
ಅಂತಃಕರಣಃ ಸಂಜ್ಞಂ ತತ್ಸರ್ವ ಸಾಧಾರಣಂ ಹ್ಯಭೂತ್ ।
ತಸ್ಯವೃತಿ ಪ್ರಭೇದಾಸ್ತು ಮತಾಃ ಕಾರ್ಯ ವಶಾಚ್ಚಿವೇ ||೧೦||

ಮನೋಬುದ್ಧಿರಹಂಕಾರಶ್ಚಿತ್ತಂ ಚೇತಿ ಚತುರ್ವಿಧಾಃ ।
ಸಂಕಲ್ಪೋ ಮನಸೋರೂಪಂ ಬುದ್ಧೇಃ [redacted] ನಿಶ್ಚಯಃ ||೧೧||

ದರ್ಪೋಽಹಂಕಾರ ರೂಪಾಂಶ್ಚಾ ಚಿತ್ತರೂಪಂ ಸ್ಮೃತಿಸ್ಮೃತಿಃ ||೧೨||

ಪಂಚಭೂತಗಳ ಸೂಕ್ಷ್ಮಾಂಶಗಳಿಂದ ಅಂತಃಕರಣವೇರ್ಪಟ್ಟಿತು. ವೃತ್ತಿ ಭೇದಗಳಿಂದ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತವೆಂದು ನಾಲ್ಕು ಬಗೆಯಾಗಿ

ನಿಶ್ಚಯಿಸಲಾಗಿದೆ. ಸಂಶಯದಿಂದ ತುಂಬಿಕೊಂಡಾಗ ಮನಸ್ಸು ಎಂದು, ನಿಶ್ಚಿತಗೊಂಡಾಗ ಬುದ್ಧಿ ಎಂದು, ಗರ್ವದಿಂದೊಡಗೂಡಿದಾಗ ಅಹಂಕಾರವೆಂದು, ಬಯಕೆ ಅಥವ ಸ್ಮರಣೆ ಮೂಡಿದಾಗ ಚಿತ್ತವೆಂದು ವಿಭಾಗಿತವಾಗುತ್ತದೆ.

[illegible] ಸ್ಮೃತಿಂ ಸಸಮಾಶ್ರಿತ್ಯ ಪೂರ್ವವಚ್ಚೈವ ಗೋಚರಾಂ ||೧೩||

ಮಿಶ್ರೀಚಕಾರ ಭೂತಾನಿ ಪಂಚಧಾ ಪಂಚಭಾಗಶಃ ।
ಸ್ವೇತರೇಷಾಂ ಚತುರ್ಥಾಂಹಿ ಭೂತಾನಾಮಷ್ಟಮಾಂಶಕೈಃ ||೪||

ಚತುರ್ಭಿರರ್ಧಮರ್ಧಂ ಸ್ವಂ ಭೂತೇ ಭೂತೇಷ್ವವಚ್ಛ್ರಿತವಾನ್ |
ಪಂಚೀಕೃತಾನೀ ಭೂತಾನಿ ಸ್ಥೂಲನ್ಯೇತಾನಿ ಪಾರ್ವತಿ ||೧೫||

ಬಾಹ್ಯೇಂದ್ರಿಯೈಃ ಪ್ರಗೃಹ್ಯಂತೇ ಸೂಕ್ಷ್ಮಾಣಿ ಮನಸೈವಹಿ ।
ಜಲೇನ ಮಿಶ್ರಿತಾ ಮೃತ್ಸ್ನಾ ಕುಲಾಲೇನ ಪ್ರಯೋಜಿತಾ ||೧೬||

ಯಥಾ ಶೈಲೇಂದ್ರ ದುಹಿತೇ ಯೋಗ್ಯಾಸ್ಯಾದ್ ಘಟಸೃಷ್ಟಯೇ ।
ಏವಂ ಪಂಚೀಕೃತಾಃ ಖಾದ್ಯಾಃ ಪಿಂಡಬ್ರಹ್ಮಾಂಡ ಸೃಷ್ಟಯೇ ||೧೭||

ಪ್ರಭವಂತಿ ಮಹಾದೇವಿ ಪ್ರಯುಕ್ತ ವಿಶ್ವಕರ್ಮಣಾ ||೧೭||

ವಿಶ್ವಕರ್ಮನು ಪೂರ್ವೋಕ್ತ ಚಿತ್ತದ ಪ್ರತ್ಯಕ್ಷ ಸ್ವರೂಪವಾದ ಪೂರ್ವಸ್ಮೃತಿಯ ಆಶ್ರಯದಿಂದ ಪೃಥಿವಿ ಮುಂತಾದ ಐದು ಭೂತಗಳ ಐದು ಪ್ರಕಾರದ ಮಿಶ್ರಣ ತಯಾರು ಮಾಡಿದನು. ಅವು ಈ ರೀತಿ ಪ್ರತ್ಯೇಕ ತತ್ತ್ವದ (ಭೂತದ) ಅರ್ಧಭಾಗ (ಏಕ ದ್ವಿತೀಯಾಂಶ) ಮತ್ತು ಉಳಿದ ನಾಲ್ಕು ಭೂತಗಳ ಒಂದೊಂದು ಅಷ್ಟಮಾಂಶ. ಈ ಪ್ರಕಾರ ಒಟ್ಟು ಐದು ಭೂತಗಳ ಐದು ಮಿಶ್ರಣಗಳನ್ನು ಸಿದ್ಧಮಾಡಿದನು. ಅದನ್ನೇ ಪಂಚೀಕರಣ ಎನ್ನಲಾಗುತ್ತದೆ. ಈ ಪಂಚೀಕರಣದಿಂದಲೇ ವಿಶ್ವಕರ್ಮನು ನಾಲ್ಕು ಪ್ರಕಾರದ ಸ್ಥೂಲ ಶರೀರಗಳನ್ನು ಉತ್ಪನ್ನ ಮಾಡಿದನು.

| ಪೃಥ್ವಿ | [illegible] | [illegible] | ವಾಯು | ಆಕಾಶ | ಒಟ್ಟಾರೆ ರೂಪ | ವಿವರಣೆ |
|---|---|---|---|---|---|---|
| 1/2 | 1/8 | 1/8 | 1/8 | 1/8 | ಪೃಥ್ವೀರೂಪ ಶರೀರ | [illegible] ಶರೀರಗಳು ಮನುಷ್ಯ, ಪಶು, ಪಕ್ಷಿ, ಕೀಟ, ಇರುವೆ, ಗಿಡ ಇತ್ಯಾದಿಗಳದು. |
| 1/8 | 1/2 | 1/8 | 1/8 | 1/8 | ಉದಕರೂಪ ಶರೀರ | ಈ ಶರೀರಗಳು ವರುಣ ಲೋಕ (ಪಾತಾ[illegible] ಲೋಕ) ದಲ್ಲಿ ಪ್ರಸಿದ್ಧವಾಗಿವೆ. |
| 1/8 | 1/8 | 1/2 | 1/8 | 1/8 | ತೇಜೋರೂಪ ಶರೀರ | ಈ ಶರೀರಗಳು ಸೂರ್ಯ ಲೋಕದ್ದು (ಇಂದ್ರಾದಿ ಸರ್ವ ದೇವತೆಗಳದು) |
| 1/8 | 1/8 | 1/8 | 1/2 | 1/8 | ವಾಯುರೂಪ ಶರೀರ | ಈ ಶರೀರಗಳು ವಾಯು ಲೋಕದಲ್ಲಿಯವು (ಪಿಶಾಚಿ ಗಳು) |
| — | — | — | — | — | ಈ ಆಕಾಶ ತತ್ತ್ವದ ಶರೀರವು ರೂಪಭೇದ ಪಡೆಯುವುದಿಲ್ಲ. ಇದು ಎಲ್ಲಾ ತತ್ತ್ವಗಳೊಂದಿಗೆ ಸೇರಿಯೇ ಇರುತ್ತದೆ. ಪ್ರತ್ಯೇಕವಾಗಿ ಇದಕ್ಕೆ ಶರೀರವು ಇರುವುದಿಲ್ಲ. | |

ಈ ಪಂಚೀಕೃತ ಸ್ಥೂಲ ತತ್ತ್ವಗಳನ್ನು, ಕಿವಿ, ಚರ್ಮ, ಕಣ್ಣು, ನಾಲಿಗೆ ಮೂಗು ಇತ್ಯಾದಿ ಬಾಹ್ಯೇಂದ್ರಿಯಗಳಿಂದ ತಿಳಿಯುತ್ತಾರೆ ಮತ್ತು ಸೂಕ್ಷ್ಮ ತತ್ತ್ವಗಳನ್ನು ಮನಸ್ಸಿನಿಂದ ತಿಳಿಯುತ್ತಾರೆ. ನೀರಿನಿಂದ ಮಿಶ್ರಣವಾದ ಮಣ್ಣು ಮಡಿಕೆಯನ್ನು ಮಾಡಲು ಯೋಗ್ಯವಾಗುವಂತೆ ಪಂಚೀಕರಣವಾದ (ಮಿಶ್ರಣವಾದ) ಆಕಾಶಾದಿ ತತ್ತ್ವಗಳು ಗರ್ಭದಲ್ಲಿಯ ಪಿಂಡ (ಪಿಂಡಾಂಡ) ಹಾಗೂ ಜಗತ್ತುಗಳನ್ನು (ಬ್ರಹ್ಮಾಂಡಗಳನ್ನು) ಉತ್ಪನ್ನ ಮಾಡಲು ಯೋಗ್ಯವಾಗುತ್ತದೆ. ಈ ಪ್ರಕಾರ ಪಂಚೀಕರಣವಾದ ಪಂಚ ಭೂತಗಳನ್ನು ಉಪಯೋಗಿಸಿಕೊಂಡು ನಿರಾಕಾರ ರೂಪದಿಂದ ಈ ಪಂಚ ಮಹಾಭೂತಗಳನ್ನು ನಿರ್ಮಾಣಗೊಳಿಸಿದನು.

ವಿಭಜ್ಯ ಮೂರ್ತಿ ರೂಪೇಣ ತತ್ತದ್ಗರ್ಭಾಂಕುರಾದಿಕಮ್ ।
ಅದೃಶ್ಯೇನೈವ ರೂಪೇಣ ವಿಶ್ವಕರ್ಮಾ ಸೃಜತ್ಯಯಂ ॥೧೨॥

ಅಮೂರ್ತೇ ನೈವ ರೂಪೇಣ ಭೂತಾನಿಸ ಸೃಜೇಹರಃ ।
ಅಸ್ಮದ್ದೃಶ್ಯಾನಿ ರೂಪಾಣಿ ಸರ್ವೇ ಶಿಲ್ಪವತಾಂ ವರಃ ॥೨೯॥

ತಾನಾ ವಿಕೃತ್ಯ ಸೌ ಸರ್ವಂ ಚಿತ್ರಂ ಸೃಜತಿ ಪಾರ್ವತಿ ।
ದಿವಿಭುವ್ಯಂತರಿಕ್ಷೇ ವಾ ಪಾತಳೇವಾಪಿ ಸರ್ವಶಃ ॥೨೦॥

ಗೃಹಂ ಯಂತ್ರಂ ರಥೋ ಭೂಷಾ ಪ್ರತಿಮಾ ವಸನಾದಿಕಮ್ ।
ಯತ್ಕಿಂಚದ್ದೃಶ್ಯತೇ ಚಿತ್ರಂ ತತ್ಸರ್ವಂ ವಿಶ್ವಕರ್ಮಜಂ ॥೨೨॥

ಈ ಮಹಾ ಪಂಚಭೂತಗಳ ಮಿಶ್ರಣದ ಪಂಚ ವಿಷಯಕಗಳನ್ನು ನಾನಾ ರೀತಿಗಳಲ್ಲಿ ವಿಭಾಗಿಸಿ ಬೇರೆ ಬೇರೆ ವಿಧಗಳಾದ ಗರ್ಭಗಳನ್ನು ಈ ವಿಶ್ವಕರ್ಮನು ಸ್ವತಃ ಅದೃಶ್ಯ ರೂಪದಿಂದ ನಿರ್ಮಾಣ ಮಾಡಿದನು.[7] [illegible] ಪೃಥಿವಿಯಲ್ಲಿ

---

7 ಇದು 'ಅದ್ಭ್ಯಃ ಸಂಭೂತ ಪೃಥಿವ್ಯೈ ರಸಾಚ ವಿಶ್ವಕರ್ಮಣಃ । ಸಮವರ್ತತಾಧಿ ತಸ್ಯತ್ವಷ್ಟಾ ವಿದಧ ದ್ರೂಪಮೇತಿ' ಎಂಬ ಶ್ರುತಿಯ ಅನುಸಾರವಾಗಿಯೇ ಇದೆ.

ಶಿಲ್ಪಶ್ರೇಷ್ಠರಾದ ವಿಶ್ವಬ್ರಾಹ್ಮಣ ಶಿಲ್ಪಿಗಳು ಆ ವಿಶ್ವಕರ್ಮನ[2] ದೃಶ್ಯ ರೂಪಗಳಾಗಿದ್ದು ವಿಭೂತಿಗಳಾಗಿದ್ದಾರೆ. ಹೇ ಪಾರ್ವತಿ, ಈ ವಿಶ್ವಕರ್ಮನು [illegible] ವಿಶ್ವಬ್ರಾಹ್ಮಣ ಶಿಲ್ಪಿಶ್ರೇಷ್ಠರ ದೇಹದಲ್ಲಿ ಪ್ರವೇಶಿಸಿ ಎಲ್ಲ ಪ್ರಕಾರದ ಚಿತ್ರವಿಚಿತ್ರ ಪದಾರ್ಥಗಳನ್ನು ಉತ್ಪನ್ನ ಮಾಡುತ್ತಾನೆ. ಸ್ವರ್ಗದಲ್ಲಿ, ಭೂಮಿಯ ಮೇಲೆ ಆಕಾಶ ಹಾಗೂ ಪಾತಾಳದಲ್ಲಿ ಯಂತ್ರ, ರಥ, ಮೂರ್ತಿ, ಅಲಂಕಾರ ಇತ್ಯಾದಿ ಕಣ್ಣಿಗೆ ಕಾಣಿಸುವ ಎಲ್ಲಾ ಚಿತ್ರವಿಚಿತ್ರ ಪದಾರ್ಥಗಳನ್ನೂ ವಿಶ್ವಕರ್ಮನೇ ಮಾಡಿದ್ದಾನೆ. ಈ ರೀತಿಯಾಗಿ ಸಕಲ ಶಿಲ್ಪಾಧಿಪತಿ ವಿಶ್ವಕರ್ಮನು ಸರ್ವೇಶ್ವರನಾಗಿದ್ದಾನೆ.

ಸೃಷ್ಟಿಯ ವಿವರಣೆ ಬಂದಾಗಲೆಲ್ಲಾ ಈ ರೀತಿಯ ವಿಶ್ಲೇ[illegible] ಎಲ್ಲಾ ವಿಶ್ವಕರ್ಮ ಸಾಹಿತ್ಯ ಕೃತಿಗಳಲ್ಲೂ ದೊರೆಯುತ್ತವೆ. ಇನ್ನೂ ಹೆಚ್ಚಿನ ವಿವರಗಳಿಗೆ ಕೃತಿಗಳನ್ನು ಅವಲೋಕಿಸಬಹುದು)

**ನನ್ವಿದಮಸಂಗತಂ। ಅನ್ಯೋನ್ಯಾಶ್ರಯಂ ದೋಷಾತ್। ಔಷಧ್ಯಾದಯಃ ಅನ್ನಾನ್ ಓಷಧೀಭ್ಯೋಽನ್ನ[illegible] ಇತಿ ಚೇನ್ನ। ಯತಃ ಪ್ರಥಮತಂ ಸಾಂಬ್ಯೋನ ಪೇಕ್ಷ್ಯೈವಾನ್ನಂ ಪಂಚಭೂತೈ ರೋಷಧಿವನಸ್ಪತೀನ ಸೃಜತ್ । [illegible] ಪರಂಪರಾಯ ಬೀಜತ್ಯೋಽನ್ನ ಕೃತಾತ್ಸ್ಥಾವರ ಜಙ್ಗಮ ಪರಂಪರಾಃ ಸೃಜತಿ। ಅಕಾಶಾದೀನಿ ಪಂಚಭೂತಾನಿ ಪಂಚೀಕೃತಾನಿ ಉಪದಾನ ಕಾರಣಾನಿ ಸ್ಥಾವರ ಜಙ್ಗಮಾತ್ಮಕಸ್ಯ ಜಗತ ಇತಿ। ಸಂಪಿಂಡಿತೋಽರ್ಥಃ ಸ್ಪಷ್ಟೋಽಕ್ಷರಾರ್ಥಃ ಅಥಾತಃ ಶಸ್ತ್ರತತ್ತ್ವಮದ್ವೈತಂ ಮೋಕ್ಷ ಸಿಧ್ಯೈ ಪದಂತಿ ಬಂಧಸ್ಯ [illegible] ಮಿಥ್ಯಾತ್ವಂ ಬೋಧಯಂತೀ [illegible] ಜೀವಾನಾಂ ತಾದೃಕ್ಪರ ಬ್ರಹ್ಮ ಭಿನ್ನತ್ವ ಮೌಪಾಧಿಕಂ ಭೇದಂ ಚಾಹ।**

---

[1] ತಸ್ಯಧೀರಾಃ ಪರಿಜಾನಂತಿ ಯೋನಿಂ ಮರೀಚೀನಾಂ ಪದಮಿಚ್ಛಂತಿ ವೇಧಸಃ ಎಂಬುದರ ಅನ್ವಯದ ಪ್ರಕಾತಿದಂ.

ಬೀಜರೂಪವಾದ ಅನ್ನದಿಂದ ಔಷಧಿಗಳು, ವನಸ್ಪತಿಗಳು ಹಾಗೆಯೇ ಔಷಧಿ ವನಸ್ಪತಿಗಳಿಂದ ಅನ್ನವು ಉತ್ಪನ್ನವಾಗುತ್ತದೆ ಎಂದು ಹೇಳುವುದರಿಂದ ಅನ್ಯೋನ್ಯಾಶ್ರಯ ದೋಷವಿದೆ ಎಂಬ ಆಕ್ಷೇಪ ಬರುತ್ತದೆ. ಸಾಂಬದೇವನು ಮೊದಲು ಪಂಚ ಭೂತಗಳನ್ನು ಸೃಷ್ಟಿ ಮಾಡಿದಾಗ ಅನ್ನವನ್ನು ಕಾರಣವಾಗಿ ಸ್ವೀಕರಿಸಲಿಲ್ಲ. ಕೇವಲ ಪಂಚಭೂತಗಳಿಂದಲೇ ಔಷಧಿ ವನಸ್ಪತಿಗಳನ್ನು ಸೃಷ್ಟಿಸಿದ್ದಾನೆ. ಅದರಿಂದ ಕ್ರಮವಾಗಿ ಬೀಜಗಳು, ಬೀಜಗಳಿಂದ ಅನ್ನವೂ, ಅನ್ನದಿಂದ ಸ್ಥಿರ-ಚರ ರೂಪವಾದ ಪ್ರಾಣಿಗಳೂ ಸೃಷ್ಟವಾಗಿರುತ್ತವೆ. ಸ್ಥಾವರ ಮತ್ತು ಜಂಗಮಾತ್ಮಕವಾದ ಈ ಪ್ರಪಂಚದ ಉತ್ಪತ್ತಿಗೆ ಆಕಾಶವೇ ಮೊದಲಾದ ಪಂಚಭೂತಗಳು ಪಂಚೀಕೃತಗೊಂಡು ಉಪಾದಾನ ಕಾರಣವಾಗಿ ರುತ್ತವೆ. ಸೃಷ್ಟಿಕ್ರಮವು ಈ ಪ್ರಕಾರವಾಗಿದೆಯೆಂದು ಸ್ಪಷ್ಟವಾಗಿ ವಿವರಿಸಿರುತ್ತದೆ.

ಈ ಶಾಸ್ತ್ರದ ತತ್ತ್ವವು ಅದ್ವೈತ ವೇದಾಂತ ತತ್ತ್ವವನ್ನು ಅವಲಂಬಿಸಿರುತ್ತದೆ. ಮೋಕ್ಷವೂ ಕೂಡ ಅದ್ವೈತದ ಭಾಗವೇ ಆಗಿರುತ್ತದೆ. ಬಂಧವು ಮಿಥ್ಯೆಯಾಗಿರುವುದು ಎಂದು ಬೋಧಿಸುವ ಈ ಶಾಸ್ತ್ರವು ಜೀವರೆಲ್ಲರೂ ಈ [illegible] ಪ್ರಕಾರವಾದ ಮಹಿಮೆಯುಳ್ಳ ಪರಬ್ರಹ್ಮನಿಂದ ಬೇರೆಯಾಗಿರುವುದು ಉಪಾಧಿಯಿಂದ ಉಂಟಾದ ಬೇಧದಿಂದಲೇ ಎಂದು ಬೋಧಿಸುತ್ತದೆ.

**ಅಖಂಡೋऽಪಿ ದೀವ್ಯತೇऽಯ ಮೇವ । ೩೭**
**ಹೃತ್ಕೋಶೇಷು ಪರಿಚ್ಛಿನ್ನ ಜೀವತ್ವೇನ ವ್ಯಾಪ್ನೋತಿ ಚಾಕಾಶವತ್ಸರ್ವಂ । [illegible]**
**ಅಲಂಚಕಾರ ನಕ್ಷತ್ರಾದಿಭಿರಾಕಾಶಂ । ೩೯**
**ಶೈಲ ಕಾನನ ದ್ರುಮಾದಿಭಿಶ್ಚ ವಸುಂಧರಾಂ ।೪೦**

**ಅಖಂಡೋऽಪಿ....ವಸುಂಧರಾಮಿತಿ ।** ಹೃತ್ಕೋಶಪರಿಚ್ಛಿನ್ನ ಇತಿ । ಹೃತ್ಕೋಶೋ ಯಸ್ಯ ಸೂಕ್ಷ್ಮ ಕಾರಣ ಶರೀರ ವಾಚಿನಃ

**ಪಂಚ ಪ್ರಾಣ ಮನೋಬುದ್ಧಿ ದಶೇಂದ್ರಿಯ ಸಮುದಾಯಸ್ಯ ಸುಷುಪ್ತಿಕಾಲೇ [illegible] ಪರಿಚ್ಛಿನ್ನಸ್ಯ ಮಹಾಕಾಶಸೇವ ಘಟಾದಿ ನೇತ್ಯರ್ಥಃ ।**

ಮಹಾ ಪ್ರಮಾಣದಿಂದ ಇರುವ ಆಕಾಶವು ಘಟವೇ ಮೊದಲಾದವುಗಳಲ್ಲಿ ಪರಿಚ್ಛಿನ್ನ ಭಾವದಿಂದ ಇರುವಂತೆ ಸುಷುಪ್ತಿ ಕಾಲದಲ್ಲಿ ಪಂಚಪ್ರಾಣ ವಾಯುಗಳು ಮನಸ್ಸು ಪಂಚ ಜ್ಞಾನೇಂದ್ರಿಯಗಳು ಮತ್ತು ಪಂಚ ಕರ್ಮೇಂದ್ರಿಯಗಳು ಬುದ್ಧಿ ಎಂಬ ಹದಿನೇಳು ಪದಾರ್ಥಗಳ ಸಮುದಾಯವು ಸೂಕ್ಷ್ಮ ಶರೀರವೆನಿಸಿಕೊಂಡು ಕಾರಣ ಶರೀರವಾದ ಅಜ್ಞಾನದಲ್ಲಿ ಪರಿಚ್ಛಿನ್ನಭಾವದಿಂದ ಇರುವುದು. ಜೀವನು ಸ್ಥೂಲ ಶರೀರ, ಕಾರಣ ಶರೀಗಳ ಉಪಾಧಿಯಿಂದ ಪರಬ್ರಹ್ಮನಿಗಿಂತಲೂ ಬೇರೆಯಾಗಿರುವನು. ಈ ದೇವನೇ ಉಪಾಧಿಗತವಾದ ಜೀವಭಾವದಿಂದ ಇರುವ ಕಾಲದಲ್ಲಿ ಪರಿಚ್ಛಿನ್ನ ಭಾವದಿಂದ ಇರುವನು. ಎಂದರೆ ಅಖಂಡನಾಗಿರುವ ಪರಬ್ರಹ್ಮನು ಪರಿಚ್ಛಿನ್ನ ಭಾವದಿಂದ ಆಯಾಯ ಪ್ರಾಣಿಗಳ ಹೃತ್ಕೋಶಗಳಲ್ಲಿ ಪ್ರಕಾಶಿಸುತ್ತಿರುವನು. ಆಕಾಶದ ಹಾಗೆ ಎಲ್ಲವನ್ನೂ ವ್ಯಾಪಿಸಿದ್ದಾನೆ ನಕ್ಷತ್ರವೇ ಮೊದಲಾದವುಗಳು ಆಕಾಶದಲ್ಲಿ ಹೇಗೆ ಅಲಂಕಾರವಾಗಿರುವವೋ ಹಾಗೆಯೇ ಭೂಮಿಯನ್ನು ಬೆಟ್ಟ, ನದಿ, ಕಾಡು ಮರ ಮೊದಲಾದುವುಗಳಿಂದ ಅಲಂಕರಿಸಿದ್ದಾನೆ.

**ನಾನಾರ್ಥ ಭಾಜಂ ವಾಚಗ್ಂ ಶಿಲ್ಪವಿಚಿತ್ರ ಸುಂದರಾಮಕ ರೋತ್ |೩೧**

**ಏವ ಮೇನಾಲಂಕೃತವಾನ್ ಪದಾರ್ಥಾನಿ ವೈ ಸರ್ವಾಣಿ | ೩೨**

**ಸರ್ವಮೇತದ್ಭವತಿ ವಿಶ್ವಕೃದಃ ಶಿಲ್ಪಂ | ೩೩**

**ಏವ. ಪ್ರಪಂಚ ಸೃಷ್ಟಿಂ ಜೀವಾನಾಂ ಭೋಗಾಯ ಬಂಧ ರೂಪಾಯ ಪ್ರತಿಪಾದ್ಯ ಕಾಪೃಗ್ರಂಥ ನಿವೃತ್ತಯೇ ಶಿಲ್ಪವೇದ**

**ಪ್ರಕಟನಂಪ್ರಕೃತಿಮಾಹ । ನಾನಾರ್ಥೇತಿ । ಯತೋಽಯಂ ವೇದಃ ನಾತಃ ಉತ್ಪಾದ್ಯತಾ. ನಿತ್ಯೋ ಹಿ [illegible] ಅತೋಽಕರೋದಿತಿ ನೋತ್ಪಾದ್ಯತಾವಾದೀ ಶಬ್ದಃ [illegible] ಪ್ರಕಾಶನವಾದೀ । ತದಿದಮುಕ್ತಂ ಸಂಗ್ರಹ ಸೂಕ್ತೌ । ಪ್ರಕಟಯತಿತರಾಮಿತಿ । ಪ್ರಕಟಿತ ಪೂರ್ವಾ [illegible] ನಾನಾರ್ಥ ಕಾ ಶಿಲ್ಪ ವಿದ್ಯಾಯಾಃ । ವಿವಿಧ ಚಿತ್ರೈರ್ಜಡಾನಾಮಪಿ ಮನೋಹಾರಿಣೀ ಮೈಕಾಗ್ರ್ಯ ಕಾರಿಣೀಂ ತತಶ್ಚ ಸುಂದರಾಮಿತಿ ಸರ್ವ ಶಾಸ್ತ್ರೇಭ್ಯೋಽತಿಶಯಃ ಪ್ರಕಾಶಿತಃ। ಪದಾರ್ಥಾನೀತಿ ಕ್ಲೀಬತಾಚ್ಛಾಂದಸೀ। ಮೃದ್ವೃಕ್ಷಾದಿವಸ್ತೂನಿ ದೇವಾಲಯಾದಿ ರೂಪತಯಾ ತಕ್ಷಣಾದಿ ಕರ್ಮಭಿರಲಂಕರೋತಿ । ಆ ಗೋಪಾಲಿಂಗನಂ ಭಕ್ತಿಂ ಜನಯಿತುಮಿತಿ ತದರ್ಥಃ । ಸರ್ವಮಿದಂ ವಿಶ್ವಕೃತಃ ಶಿಲ್ಪಮಿತಿ ಉಕ್ತಾರ್ಥೋಪಸಂಹಾರಃ ಅರ್ಥಾಂತರೇ ಪ್ರವರ್ತಿಷ್ಯಮಾಣೇ ಜಾಗರೂಕತಾಯೈ ಕೀರ್ತ್ಯತೇ । ಸುಗಮಮನ್ಯತ್ । ಯದುಕ್ತಂ ಸಂಗ್ರಹ ಸೂಕ್ತೌ । ವಿಜ್ಞಾನಂ ದಿತ್ಸುರೇಭ್ಯಃ ಮೋಹಿತ ಜನೇಭ್ಯ ಇತಿ ಜಗತೋಽಜ್ಞಾನಂ ತನ್ನಿವರ್ತಕ ಜ್ಞಾನಂ ತದರ್ಥಂ ಭಗವತಃ ಪ್ರವೃತ್ತಿ ವಿಶೇಷಶ್ಚ । ತಾನಿಮಾನ್ ಪದಾರ್ಥಾನ್ನಿರ್ವೃಣೀತಿ ।**

ಪ್ರಪಂಚ ಸೃಷ್ಟಿಯು ಜೀವರ ಭೋಗಕ್ಕಾಗಿಯೂ ಮತ್ತು ಬಂಧಕ್ಕಾಗಿಯೂ ಆಗಿದೆ ಎಂದು ಹೇಳಲಾಗುತ್ತದೆ. ಬಂಧವು ನಿವೃತ್ತವಾಗುವುದಕ್ಕಾಗಿ ಶಿಲ್ಪವೇದವು ಪ್ರಕಟಿತವಾಗಿರುವುದು. ಶಿಲ್ಪವೇದವೆಂಬುದು ವೇದವಾಗಿರುವುದರಿಂದ ಅದಕ್ಕೆ ಉತ್ಪನ್ನವೆಂಬುದು ಇರುವುದಿಲ್ಲ. ಅನೇಕಾರ್ಥವನ್ನು ಬೋಧಿಸುವ ವೇದವು ಕೃತಿಯ ವಿಷಯವಾಗಿಲ್ಲ. ಉತ್ಪತ್ತಿವಾದವನ್ನು **ಅಕರೋತ್** ಎಂಬ ಶಬ್ದವು ಬೋಧಿಸುವುದಿಲ್ಲ. **ಅಕರೋತ್** ಶಬ್ದದಿಂದ ವೇದವು ಪ್ರಕಾಶಿತವಾಗಿದೆ ಎಂಬ ಅರ್ಥವು ಸಿದ್ಧವಾಗುತ್ತದೆ. ಸಂಗ್ರಹಸೂಕ್ತಿಯಲ್ಲಿ [illegible] ಅಭಿಪ್ರಾಯದಿಂದಲೇ **ಪ್ರಕಟಯತಿತರಾಂ** ಎಂದು ಹೇಳಲಾಗಿದೆ. ಶಿಲ್ಪ ವಿದ್ಯೆಯೂ ಕೂಡ ಅನೇಕವಾದ ಅರ್ಥವನ್ನು ಬೋಧಿಸುವುದರಿಂದ ಶಿಲ್ಪ ವಿದ್ಯೆಯು ಬಹಳ ಜ್ಞಾನ ಬೇಧಗಳುಳ್ಳದ್ದಾಗಿರುವುದು ಎಂದು ನಾನಾರ್ಥವು

ಶಿಲ್ಪ ವಿದ್ಯೆಗೆ ಆಪಾದಿತವಾಗಿರುತ್ತದೆ. ಶಿಲ್ಪವಿದ್ಯೆಯು ಅನೇಕ ವಿಧವಾದ ಚಮತ್ಕಾರಗಳಿಂದ ದಡ್ಡರಿಗೂ ಕೂಡ ಆಶ್ಚರ್ಯವನ್ನು ಚಿತ್ತೈಕಾಗ್ರತೆಯನ್ನೂ ಉಂಟು ಮಾಡುತ್ತದೆ. ಆದ್ದರಿಂದಲೇ ಬಹಳ ಮನೋಹರವಾದದ್ದು. ಇದಕ್ಕಾಗಿಯೇ ಶಾಸ್ತ್ರವು ಇತರ ಎಲ್ಲಾ ಶಾಸ್ತ್ರಗಳಿಗಿಂತಲೂ ಅತಿಶಯ ವಾದುದು. **ಪದಾರ್ಥಾನಿ** ಎಂದು ನಪುಂಸಕ ಲಿಂಗವನ್ನು ಹೇಳಿರುವುದು ವೈದಿಕ ಪ್ರಯೋಗವಾಗಿರುತ್ತದೆ. ಮಣ್ಣು, ಕಲ್ಲು, ಮರ ಮುಂತಾದ ವಸ್ತು ಗಳನ್ನು ಕತ್ತರಿಸುವುದು ಇತ್ಯಾದಿ ಕರ್ಮಗಳಿಂದ ದೇವಾಲಯ ಮುಂತಾದ ರೂಪಗಳನ್ನು ನಿರ್ಮಿಸಿ ಅಲಂಕಾರ ಮಾಡುವುದು ಶಿಲ್ಪವಾಗಿರುತ್ತದೆ. ಗೋಪಿಕಾ ಸ್ತ್ರೀಯರಲ್ಲಿ ಆಲಿಂಗನದಿಂದ ಭಕ್ತಿಯು ಮೂಡುತ್ತಿದ್ದಂತೆಯೇ ದೇವಾಲಯಗಳ ವೀಕ್ಷಣೆಯಿಂದಲೇ ಭಕ್ತಿ ಉದಯಿಸುತ್ತದೆ. ಇವೆಲ್ಲವೂ ವಿಶ್ವದ ಸೃಷ್ಟಿಕರ್ತನ ಶಿಲ್ಪವಾಗಿದೆ ಎಂದು ತಿಳಿಸುವುದಕ್ಕಾಗಿಯೇ **ಸರ್ವ ಮೋದ್ಭವತಿ ವಿಶ್ವಕೃತಃ ಶಿಲ್ಪಂ** ಎಂದು ಉಪನಿಷತ್ತಿನಲ್ಲಿ ಹೇಳಲಾಗಿದೆ. ಈ ರೀತಿ ಹೇಳಲಾಗಿರುವುದರಿಂದ ಶಿಲ್ಪ ವ್ಯತಿರಿಕ್ತವಾದ ಬೇರೆಯ ಅರ್ಥವು ಇರುವುದೆಂಬ ತಿಳುವಳಿಕೆಯು ದೂರವಾಗುತ್ತದೆ. ಸಂಗ್ರಹ ಸೂಕ್ತದಲ್ಲಿ **ವಿಜ್ಞಾನಂದಿತ್ಸುರೀಭಃ ಮೋಹಿತ ಜನೇಭ್ಯಃ** ಎಂದು ಹೇಳಲಾಗಿದೆ ಎಂದರೆ ಅಜ್ಞಾನದಿಂದ ತುಂಬಿರುವ ಜನ್ಮ ಉಳ್ಳ ಜೀವರಿಗೂ ಕೂಡ ವಿಜ್ಞಾನವನ್ನು (ಶಿಲ್ಪಶಾಸ್ತ್ರವು ವಿಜ್ಞಾನವೆಂದು ಪರಿಗಣಿಸಲಾಗಿದೆ –**ಮೋಕ್ಷೇಧೀರ್ಜ್ಞಾನ ಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ** ಎಂದು ನಾಮಲಿಂಗಾನು ಶಾಸನದ ಧೀವರ್ಗದಲ್ಲಿ ಹೇಳಲಾಗಿದೆ. ಇದಕ್ಕೆ ಟೀಕಾಕಾರರು **ಶಿಲ್ಪಶಾಸ್ತ್ರ ವಿಷಯೇ ವಿಜ್ಞಾನಮಿತಿ ಜಾನಾತಿರನಟ್ ಜ್ಞಾನಂ ವಿವಿಧಂ ವಿರೂಪಂ ವಾ ಜ್ಞಾನಂ ವಿಜ್ಞಾನಂ** ಎಂದು ವಿವಿಧ ರೂಪಗಳನ್ನು ಸೃಷ್ಟಿಸುವ ಬುದ್ಧಿಯೇ ವಿಜ್ಞಾನ ಎಂದು ವಿವರಿಸಿದ್ದಾರೆ) ಅನುಗ್ರಹಿಸಲು ಭಗವಂತನು ಇಚ್ಛೆಯುಳ್ಳ ವನಾಗಿರುವನು ಎಂದು ಹೇಳಿರುತ್ತದೆ. ಜಗದ್ವಿಷಯಿಕವಾದ ಅಜ್ಞಾನವನ್ನು ನಾಶಪಡಿಸುವುದು. ಇದಕ್ಕಾಗಿಯೇ ಸಾಂಬ ಮೂರ್ತಿಯ ಈ ಕೃಪೆಯು ಅತ್ಯಂತ ವಿಶಿಷ್ಟವಾದುದು.

ಯದಾ ತದಾ ಭವಜ್ಜಗದ್ವಿಜ್ಞಾನ ಶೂನ್ಯಗ್ಂ ಸೋಽಕಾಮಯತಾತ್ಮಾನ್ಂ ಪಂಚಾಸ್ಯಮ್ | ೩೪

ತದ್ವೈವಾ ವಿ ರಾಸೀ ತ್ಪ್ರವೃತ್ಯೈ | ೩೫

ತಸ್ಯೈವ ತೇಜೋಽಂಶಾದ ಭವನ್ ಬ್ರಹ್ಮಣೋ ಮನರ್ಮಯಸ್ತ್ವಷ್ಟಾ ಶಿಲ್ಪೀ ವಿಶ್ವಜ್ಞ ಇತಿ ಪಂಚ | ೩೬

ತಾನೇವಗ್ಂ ಹೋವಾಚ ವಿಶ್ವಕರ್ಮಾ | ೩೭

ಪ್ರವರ್ತಯತ ಲೋಕಂ ಪಂಚಕರ್ಮ ಭಿರಿತಿ|೩೮

ಪ್ರವರ್ತ್ತತ ಇತ್ಯೇತೈಃ ಪಂಚಭಿರಿತಿ ಪ್ರಪಂಚೋ ಭವತಿ |೩೯

ಯಜ್ಞ ಏವೇದಂ ಕರ್ಮಯಜ್ಞಃ ಕರ್ಮೈವ | ೪೦

ಯದಾ ತದಾ.... ಅಧಿಷ್ಠಾತಾಹಂಕರ್ತೃಣಃ ಸಕಲಸ್ಯ ಯಜ್ಞ ರೂಪ [illegible] । ಅತ್ರೈವಮನ್ವಯೋಽವಸೇಯಃ । ಯದಾ ಜಗತ್ ವಿಜ್ಞಾನ ಶೂನ್ಯಮಭವತ್ತದಾ ಸ ಆತ್ಮಾನಂ ಪಂಚಾಸ್ಯಮ ಕಾಮಯತ । ತದ್ವೈವಾವಿರಾಸೀತ್ಪಂಚಾಸ್ಯ ರೂಪಃ । ಪ್ರವೃತ್ತ್ಯೈ [illegible] ಶೇಷಃ । ಸ ಕಮೇವ ಸ್ವಾತ್ಮಾನಂ ಪಂಚಧಾ ವ್ಯಭಜತ್? ನೇತ್ಯಾಹ । ತಸ್ಯೈವ ತೇಜೋಽಂಶಾದಿತಿ । ಪಂಚಾಸ್ಯ ಸ್ವರೂಪಂ ತನ್ನಾಮಚ ನಿರ್ದಿಶತಿ । ಮನುರಿತ್ಯಾದಿನಾ । ಏವನ್ನಾಮಕಃ [illegible] ಬ್ರಹ್ಮಣೋಽಭವನಿತ್ಯನ್ವಯಃ । ವಿಶ್ವಕರ್ಮಾ ಪಂಚಕರ್ಮ ಭಿರ್ಲೋಕಂ ಪ್ರವರ್ತಯತ ಇತ್ಯೇವಂ ತಾನುವಾಚ ಹೇತಿ ಅನ್ವಯಃ। ಹೇತ್ಯೈತಿಹ್ಯಾರ್ಥೋ ನಿಪಾತಃ । ಪ್ರತ್ಯಾದೀನೇವಮರ್ಥಾವಗಮ- ಕಾನ್ ದ್ಯೋತಯತಿ । ಶೇಽನ್ಯತೋಽವಸೇಯಾಃ । ಪ್ರಸಂಗಾ ಲ್ಲೋಕೇ ಪ್ರಪಂಚ ಶಬ್ದ ಪ್ರವೃತ್ತಿಮಾಹ ಸಕಾರಣಾಂ । ಏತ್ಯೈಃ ಪಂಚಭಿಃ ಪ್ರವರ್ತತ ಇತಿ ಪ್ರಪಂಚ ಇತಿ । ಸಕಲಸ್ಯ ಕರ್ಮಣೋಽಹಂ

**ಯಜ್ಞರೂಪೋಽಧಿಷ್ಠಾತೇತಿ ವರ್ಣಿಷ್ಯತೇ । ತಸ್ಯ ವಾಕ್ಯಸ್ಯಾರ್ಥಂ ಬುಬೋಧಯಿಷುಃ ತದ್ಘಟಕಂ ಯಜ್ಞ ಪದಾರ್ಥಮಾಹ । ಯಜ್ಞ ಏವೇದಂ ಕರ್ಮೇತಿ । ಯದಿದಂ ಲೋಕ ಪ್ರವರ್ತನಂ ಕರ್ಮ ತದ್ಯಜ್ಞ ಏವೇತ್ಯನ್ವಯಃ। ಇದಮುತ್ಪ್ರೇಕ್ಷಿತಂ ।**

ಈ ಪ್ರಕಾರವಾದ ಅಭಿಪ್ರಾಯವನ್ನು ವಿವರವಾಗಿ ತಿಳಿಸುವುದಕ್ಕಾಗಿಯೇ **ಯದಾ ತದಾ ...ಅಧಿಷ್ಠಾತಾಹಂ ಕರ್ಮಣಃ ಸಕಲಸ್ಯ ಯಜ್ಞರೂಪಃ ।** ಎಂಬ ಸೂತ್ರವನ್ನು ಹೇಳಲಾಗಿದೆ. ಜಗತ್ತೆಂಬುದು ವಿಜ್ಞಾನ ಶೂನ್ಯವಾಗಿದ್ದ ಕಾಲವಲ್ಲಿ ದೇವನು ತನ್ನನ್ನು ಐದು ಬಗೆಯಾದ ರೂಪಗಳಲ್ಲಿ ಹಂಚಿಕೊಳ್ಳಲು ಸಂಕಲ್ಪ ಮಾಡಿದನು. ಅಜ್ಞಾನದಿಂದ ಇರುವ ಜಗತ್ತಿನ ಪ್ರವೃತ್ತಿಯು ಉಂಟಾಗುವುದಕ್ಕಾಗಿ ಕ್ಷಣದಲ್ಲಿಯೇ ಒಂದು ರೂಪವನ್ನು ಉಳ್ಳವನಾದವನು. ಇವನು ತನ್ನ ಒಂದು ರೂಪದಿಂದ ಐದು ರೂಪದವನಾಗಲಿಲ್ಲ. ಈತನ ತೇಜಸ್ಸಿನ ಅಂಶವು ಐದು ರೂಪಗಳನ್ನು ಹೊಂದಿ ಮನು, ಮಯ, ತ್ವಷ್ಟಾ, ಶಿಲ್ಪಿ ಮತ್ತು ವಿಶ್ವಜ್ಞ ಎಂಬ ಹೆಸರುಗಳಿಂದ ಪ್ರಸಿದ್ಧಿಯನ್ನು ಹೊಂದಿದರು. ಈ ಐವರು ಆದಿ ಪಂಚ ಬ್ರಹ್ಮರೆಂದು ಖ್ಯಾತರಾಗಿದ್ದಾರೆ. ವಿಶ್ವಕರ್ತನು ಈ ಐದು ಜನರಿಗೂ ಸೃಷ್ಟಿ, ಸ್ಥಿತಿ, ಲಯ, ತಿರೋಧಾನ ಮತ್ತು ಅನುಗ್ರಹ ಎಂಬ ಐದು ಕರ್ಮಗಳಿಂದ ಈ ಲೋಕವನ್ನು ವೃದ್ಧಿಯಾಗುವಂತೆ ಮಾಡಿರಿ ಎಂದು ಅನುಗ್ರಹ ಮಾಡಿದನು. ಹ ಎಂಬುದು ಐತಿಹ್ಯವನ್ನು ಬೋಧಿಸುವ ನಿಪಾತವು. ಐತಿಹ್ಯವೆಂದರೆ ಪೂರ್ವ ಕಾಲದಲ್ಲಿ ನಡೆದಿರುವ ವರ್ತಮಾನ ಸಂಗ್ರಹವು ಕಥಾರೂಪದಿಂದ ಇರುವುದು. ಇದೇ ರೀತಿಯಾದ ಅರ್ಥವನ್ನು ಬೋಧಿಸುವ ಶ್ರುತಿಯೇ ಮೊದಲಾದವುಗಳು ಅನೇಕವಾಗಿರುತ್ತವೆ. ಸೃಷ್ಟಿ (ಸರ್ಗ), ಸ್ಥಿತಿ, ಲಯ, ತಿರೋಧಾನ, ಅನುಗ್ರಹಗಳೆಂಬ ಐದು ವಿಧವಾದ ಕರ್ಮಗಳಿಂದ ಪ್ರವೃತ್ತವಾದ ಕಾರಣ ಜಗತ್ತಿಗೆ ಪ್ರಪಂಚವೆಂಬ ಹೆಸರು ಬಂದಿರುತ್ತದೆ. 'ಈ ಐದು ವಿಧವಾದ ಕರ್ಮಗಳಿಗಿಂತಲೂ ಬೇರೆಯಾಗಿ ನಾನು ಅಧಿಷ್ಠಾತೃವಾಗಿರುವೆನು ಮತ್ತು ಯಜ್ಞ ರೂಪದಿಂದ ಇರುವೆನು. ಎಂಬುದು ವಿಶ್ವಕರ್ಮನ ಪ್ರತ್ಯುತ್ತರವು. ಶಿಲ್ಪವೆಂಬ ಕರ್ಮವೂ ಕೂಡ ಯಜ್ಞವಾಗಿಯೇ ಇರುವುದು. ಇದರಿಂದ **ಯಜ್ಞರೂಪೋ ಅಧಿಷ್ಠಾತ** ಎಂಬ

ವಾಕ್ಯದಲ್ಲಿರುವ ಯಜ್ಞ ಪದದ ಅರ್ಥವು ಲೋಕ ಪ್ರವರ್ತಕ ರೂಪವಾದ ಕರ್ಮವೆಂದು ತಿಳಿಯತಕ್ಕದ್ದು.

**ಕಥಂ ನು ಭಗವಾನ್ ನಃ ಸೃಷ್ಟ್ವಾ ಭಗವದರ್ಥ ಯಜ್ಞಾನು ಷ್ಠಾನೇ ಚೋದಯನ್ ಘೋರೇ ಕರ್ಮಾಂತರೇ ಯೋಜಯೇತ್ ಸರ್ವಾನುಗ್ರಹೈಕ ಪರಾಯಣಃ ಇತ್ಯೇವಂ ಸೃಷ್ಟಾನಾಂ ಶಂಕಾ ಸಂಭಾವ್ಯೇತ । ಮಾನಾಮ್ಯೇವಂ ಶಂಕಿ । ಯತ ಇದಂ ಕರ್ಮಯಜ್ಞ ರೂಪಮೇವೇತಿ । ನನ್ವಿದಂ ಕರ್ಮಯಜ್ಞರೂಪಮೇವತಿ ವಚನಾತ್ ಮುಖ್ಯಯಜ್ಞತ್ವಂ ನಾಸ್ತೀತ್ಯವಗಮಿತಂ ವಿವಕ್ಷಿತಸ್ಯ ಕರ್ಮಣಃ । ಅತೋ ಮುಖ್ಯಂ ಯಜ್ಞಂ ವಿಧಾತುಂ ಪಾರಯಮಾಣಾ ಔಪಚಾರಿಕಂ ಯಜ್ಞಂ ಕುತೋ ಹೇತೋರನುತಿಷ್ಠೇಯುಃ ಇತಿ ಶಂಕಾಪನೋದಾಯಾಹ । ಯಜ್ಞಃ ಕರ್ಮೈವೇತಿ । ಯದಿ ಮದಾಜ್ಞಾ ವಜ್ಞಾ [redacted] ಯಜ್ಞ ನಿರತಾ ಭವೇತ [redacted] ಪಿತುರಾ ಜ್ಞಾತಿಲಂಘನ ಪ್ರಯುಕ್ತ ದೋಷದುಷ್ಟಃ ಸ ಯಜ್ಞಃ ವೃಥಾ ಚೇಷ್ಟಾತ್ಮಕ ಕರ್ಮೈವ ಸ್ಯಾನ್ನ ಫಲಕೃತ್ । ತದವಶ್ಯಂ ಮದಾಜ್ಞಾನು ಸಾರಿ ಭಿರ್ಭಾವ್ಯಮಿತಿ । ವಿವಕ್ಷಿತಸ್ಯ ಕರ್ಮಣಃ ಪಂಚರೂಪತ್ವ ಪ್ರಕಟನ ಮುಖೇನ ಯಜ್ಞ ರೂಪತಾಮಾಹ ।**

ಪೂಜ್ಯನಾದ ಭಗವಂತನು ನಮ್ಮನ್ನು ಸೃಷ್ಟಿ ಮಾಡಿ ಪ್ರಭುವೂ ಷಡ್ಗುಣೈಶ್ವರ್ಯ ಸಂಪನ್ನನೂ ಆದ ಆ ದೇವನ ಪ್ರೀತಿಯು ಸಂಪಾದಿತವಾಗು ವಂತಹ ಯಜ್ಞರೂಪವಾದ ಕರ್ಮವನ್ನು ಮಾಡುವುದರಲ್ಲಿ ನಮ್ಮನ್ನು ಪ್ರೇರಿಸದೆ ಇರುವನು. ಹಾಗಾದರೆ ಎಲ್ಲರಿಗೂ ಅನುಗ್ರಹವನ್ನು ಮಾಡುವುದ ರಲ್ಲಿ ನಿರತನಾದ ಈ ದೇವನು ಘೋರವಾದ ಬೇರೆಯ ಕರ್ಮದ ಆಚರಣೆ ಯಲ್ಲಿ ನಮ್ಮನ್ನು ಸೇರಿಸಿರುವನು ಎನ್ನಬಹುದೇ ? ಎಂದರೆ ಹಾಗಲ್ಲ. ಲೋಕ ಪ್ರವರ್ತಕ ರೂಪವಾದ ಕರ್ಮವೇ ಯಜ್ಞವಾಗಿರುವುದು ಎಂದು ಹೇಳಲ್ಪಡು ವುದರಿಂದ [redacted] ಕರ್ಮವು ಮುಖ್ಯವಾದ ಯಜ್ಞವಲ್ಲವೆಂದು ತಿಳಿಯಬಹು ದಾಗಿರುತ್ತದೆ. ಮುಖ್ಯವಾದ ಯಜ್ಞ ಶಬ್ದದಿಂದ ಬೋಧಕವಾಗಿರುವ

ಕರ್ಮದಲ್ಲಿ ಆಚರಣೆಯು ಇರಕೂಡದೆಂದು ವಿಧಿಯನ್ನು ಹೇಳಿರುವುದಲ್ಲದೆ ಔಪಚಾರಿಕವಾದ ಲೋಕ ಪ್ರವರ್ತಕ ರೂಪವಾದ ಯಜ್ಞಾನುಷ್ಠಾನವನ್ನು ಮಾಡುವುದರಲ್ಲಿ ಯಾವ ಕಾರಣವನ್ನು ಹೇಳಬೇಕು ? ಮುಖ್ಯವಾದ ಯಜ್ಞಾನುಷ್ಠಾನದಿಂದ ಕರ್ಮಾಚರಣೆಯು ಆಗಿರುತ್ತದೆ ಎಂದು ಹೇಳುವುದಾದರೆ ಇದು ನಮ್ಮ ತಂದೆಯ (ನಃ ಪಿತಃ) ಆಜ್ಞೆಯನ್ನು ಉಲ್ಲಂಘನೆಯನ್ನು ಮಾಡಿ ಯಜ್ಞರೂಪವಾದ ಕಾರ್ಯಾಚರಣೆಯಲ್ಲಿ ನಿರತರಾದರೆ ಅದು ಆಜ್ಞೆಯನ್ನು ಉಲ್ಲಂಘಿಸಿ ಆಚರಿಸಿದ ಪ್ರಯುಕ್ತ ಕೇವಲ ಚೇಷ್ಟೆ ಎನಿಸಿಕೊಳ್ಳುತ್ತದೆಯೇ ಹೊರತು ಫಲಕಾರಿಯಾಗುವುದಿಲ್ಲ. ಆದ್ದರಿಂದ ತಂದೆಯಾದ ನನ್ನ ಆಜ್ಞೆಯನ್ನು ಅನುಸರಿಸುವವರಾಗಬೇಕು ಎಂದು ಹೇಳುವುದಕ್ಕಾಗಿ ಐದು ವಿಧವಾದ ಈ ಕರ್ಮವೂ ಯಜ್ಞರೂಪವಾಗಿಯೇ ಇರುತ್ತದೆ ಎಂದು ಪಂಚಬ್ರಹ್ಮರ ಆವಿರ್ಭಾವವನ್ನು ಬೋಧಿಸಲಾಗಿದೆ.

**ಶೃಣುತ ತದ್ಯಥಾ ಸೃಷ್ಟಿಸ್ಥಿತಿಲಯಿ ತಿರೋಧಾನಾನುಗ್ರಹ ರೂಪಾಣೀತಿ | ೪೧**

**ಏತದ್ಭವ ತ್ಯೇವಂ ವಿಶ್ವಕರ್ಮಣಃ ಕುಯರ್ಾದೇವಮೇವ ಚ ಲೋಕಸ್ಯ | ೪೨**

**ದಾತಾರೋ ಭವನ್ತು ಜ್ಞಾನಸ್ಯ ವಿಜ್ಞಾನಸ್ಯ ಶಿಲ್ಪಿನಃ | ೪೩**

**ಅಧಿಷ್ಠಾತಾಹಂ ಕರ್ಮಣಃ ಸಕಲಸ್ಯ ಯಜ್ಞರೂಪಃ | ೪೪**

ಶೃಣುತೇ ವಿಶ್ವಕರ್ಮಣ ಇತಿ । ಪಂಚ ರೂಪಂ ವಿಶ್ವಕರ್ಮಣೋ ಮೇ ಉಪದೇಶಕತೋ ಜ್ಞಾ[redacted] ಯಜ್ಞರೂಪಂ ಭವತ್ಯೇವತಿ ಭಾವಃ । ಅತ ಏವಮೇವ ಲೋಕಸ್ಯ ಕುಯರ್ಾದಿತಿ ನಿಗಮಪಂ ಉಪಕ್ರಾಂತಸ್ಯ ಅಸಿದ್ಧಿರ್ವಿಗುಣಾದಿತಿ ಚೇನ್ನ ಯೋಗಾಪಂಗತೇಃ ।

**ತತ್ಕ್ರೈವಂ ಸ್ಯಾತ್ । ಯಾವದ್ಯಾವದ್ಧಿ ವಿಷಯಾಂತರರತಂ ವಿಷಯಾಂತರೇ ಪ್ರಸಭಂ ಪ್ರವರ್ತಯೇತ್ತಾವತ್ತಾವದ್ಬಲಾತ್ಕಾರಿ ತಾನವ ಹಿತಮನಸ್ಕ ಚರಿತಂ ಕರ್ಮವಿಗುಣ ಸಾಧನ ಸಾಧಿತಂ ನ ಫಲಾಯವ ಕಲ್ಪೇತ । ಯಥಾಹುಃ। ಪರಸಂಗರತಾ ನಾರೀ ವ್ಯಾಗ್ರಾಪಿ ಗೃಹಕರ್ಮಣಿ। ತದೇವಾ ಸ್ವಾದಯ ತ್ಯಂತಃ ಪರಸಂಗರ ಸಾಯನ ಮಿತಿ ತತಶ್ಚ ಗೃಹಕರ್ಮ ವಿಕಲಂ ಸತ್ ನ ಫಲಾಯೇತಿ ಶೇಷಃ। [redacted] ಚೇನ್ಮೋ ಬಲಾತ್ಪ್ರವರ್ತ್ಯಂತ ಇತ್ಯನವಹಿ ತಮನಸ್ಕ ಚರಿತಂ ಶಿಲ್ಪಂ ನ ಸಿಧ್ಯೇತ್ ವಿಗುಣಾದಿತಿ ಚೇನ್ನ ಯೋಗಾನುಗತೇಃ। ತತ್ಕ್ರೈವಂ ಪೃಷ್ಟೋಭವಾನ್ ವ್ಯಾಚಷ್ಟಂ ಯಜ್ಞ ಇತಿ ಕಃ ಪದಾರ್ಥ [redacted] ।**

ಶೃಣುತ ಮೊದಲಾದ ವಾಕ್ಯಗಳಿಂದ ಸೃಷ್ಟಿ ಸ್ಥಿತಿ ಲಯ ತಿರೋಧಾನ ಅನುಗ್ರಹಗಳೆಂಬ ಪಂಚಕರ್ಮಗಳೂ ಯಜ್ಞರೂಪವಾಗಿರುವುವು. ವಿಶ್ವಕರ್ಮನ ಉಪದೇಶದಿಂದ ಯಜ್ಞರೂಪವಾದ [redacted] ಪಂಚ ಕೃತ್ಯಗಳ ಜ್ಞಾನವು ಉಂಟಾಗುತ್ತದೆ ಎಂಬುದನ್ನುಗ್ರಹಿಸಬೇಕು. ಶಿಲ್ಪದಜ್ಞಾನವು ಹೀಗೆಯೇ ಯಜ್ಞರೂಪದಲ್ಲಿಯೇ ಉಂಟಾಗುತ್ತದೆ. ಲೋಕ ಪ್ರವರ್ತನೆಯನ್ನು ಹೀಗೆಯೇ ಆಚರಿಸತಕ್ಕದ್ದು. ಆದರೆ ಉಪಕ್ರಾಂತವಾದ ಕರ್ಮದ ಅಸಿದ್ಧಿಯು ವಿಗುಣತ್ವದಿಂದ ಆಗುತ್ತದೆ ಎಂದು ಹೇಳುವುದು ಉಚಿತವಲ್ಲ. ಎಂದರೆ ಬೇರೆಯ ಯೋಚನೆಯುಳ್ಳದ್ದಾದ ಮನಸ್ಸನ್ನು ಬಲತ್ಕಾರದಿಂದ ಕೆಲಸ ಮಾಡುವಂತೆ ನಿರ್ಬಂಧದಿಂದ ಪ್ರೇರೇಪಿಸಿದಾಗ ಒಲ್ಲದ ಮನಸ್ಸಿನಿಂದ ಉದಾಸೀನತೆಯಿಂದ ಆಚರಿಸಲ್ಪಟ್ಟ ಕರ್ಮವು ವಿಗುಣವಾದ ಸಾಧನದಿಂದ ಸಾಧಿಸಲ್ಪಟ್ಟದ್ದಾಗಿ ಅಪೇಕ್ಷಿತ ಫಲವನ್ನು ನೀಡಲಾರದು.

**ಪರಸಂಗರತಾ** [redacted] ಎಂಬ ವಚನವು ಪರಸಂಗದಲ್ಲಿ ಆಸಕ್ತಳಾದ ಹೆಣ್ಣು ತನ್ನ ಮನೆಗೆಲಸಗಳನ್ನು ಮಾಡುವಾಗಲೂ ಕೂಡ ಪರಸಂಗವನ್ನೇ ಮನಸ್ಸಿನಲ್ಲಿ ನೆನೆದು ಅದೇ ಸುಖಕರವೆಂದು ಭಾವಿಸುತ್ತಾಳೆ. ಇದರಿಂದ ಅವಳು ನಡೆಸುತ್ತಿರುವ ಮನೆಗೆಲಸವು ಸಮಗ್ರವಾಗಿ ನಡೆಯದೆ ಅದು ಸುಫಲ

ವನ್ನು ಉಂಟು ಮಾಡುವುದಿಲ್ಲ. ಇದೇ ರೀತಿಯಲ್ಲಿ ಬಲಾತ್ಕಾರದಿಂದ ಆಚರಿಸಲ್ಪಟ್ಟ ಏಕಾಗ್ರಮನಸ್ಸಿಲ್ಲದೆ ನಡೆಸುವ ಶಿಲ್ಪಕರ್ಮವು ಸಿದ್ಧಿಯನ್ನುಂಟುಮಾಡುವುದಿಲ್ಲ. ಬಲಾತ್ಕಾರದಿಂದ ಮಾಡಿದ ಕೆಲಸವು ವಿಗುಣವಾಗುವುದರಿಂದಲೇ ಶಿಲ್ಪವು ಸಿದ್ಧಿಯನ್ನುಂಟು ಮಾಡಲಿಲ್ಲ ಎಂದ ವೈಗುಣ್ಯವನ್ನು ಕಾರಣವನ್ನಾಗಿ ಹೇಳುವುದು ಉಚಿತವಲ್ಲ. ಯೋಗಾನುಗತಿಯು ಈ ವೈಗುಣ್ಯವನ್ನು ನಾಶಪಡಿಸಿ ಸಿದ್ಧಿಯನ್ನು ಉಂಟುಮಾಡುತ್ತದೆ. ಯೋಗಾನುಗತಿಯು ಅಸಿದ್ಧಿ ಪರಿಹಾರಕವಾಗುವುದಾದರೆ ಯಜ್ಞ ಪದಾರ್ಥವು ಯಾವುದೆಂಬುದನ್ನು ಚೆನ್ನಾಗಿ ವಿಮರ್ಶೆ ಮಾಡಿ ತಿಳಿಯಬೇಕು.

**ದೇವ ಪೂಜೇತಿ ಚೇತ್, ತತೋಽಪಿ ಪೃಷ್ಟೋ ವ್ಯಾಚಷ್ಟಾಂ ಪೂಜೇತಿ ಕಃ ಪದಾರ್ಥ [redacted] ಪ್ರೀತಿ ಕರಂ ಕರ್ಮೇತಿ ಚೇತ್ । ಅವಧೇಹೀದಂ । ತತಶ್ಚ [redacted]ತ್ರನುಶಿಷ್ಟ ಮರ್ಥಮನುಷ್ಠೀಯಮಾನವಗಚ್ಛನ್ ಪಿತಾ ಪ್ರೀಣಾತೀತಿ ವಿಶ್ವಕರ್ಮಣಃ ಏತತ್ಕರ್ಮ ತತ್ಪ್ರೀತಿಕರ ಮಿತ್ಯರ್ಥಃ । ಏವಂ ಯಜ್ಞ ರೂಪಂ ಭವತೀತಿ ಯೋಗಾರ್ಥ ಮನುಗಚ್ಛಾಮಃ ತ್ವದ್ವಚನಮನುಸೃತ್ಯ ಜಾನೀಯ ಇತ್ಯರ್ಥಃ । ನಾತೋ ವಿಗುಣಂ ಕರ್ಮಸ್ಯಾತ್ ಯೇನ ಫಲಂ ಸಿಧ್ಯೇದಿತ್ಯರ್ಥಃ । ಅಥಾಪಿ ಸ್ಯಾನ್ನಿತ್ಯತೃಪ್ತಃ ಸಾಂಬಃ ।**

ಯಜ್ಞವೆಂಬುದು ದೇವ ಪೂಜೆ ಎಂಬುದಾಗಿಯೂ ದೇವ ಪ್ರೀತಿ ಸಂಪಾದಕವಾದ ಕರ್ಮವೆಂಬುದಾಗಿಯೂ ತಿಳಿಯುವುದಾದರೆ ಅದನ್ನು ಮೊದಲಿಗೆ ಆಚರಿಸಿದ ಸಕಲ ಸೃಷ್ಟಿಯ ತಂದೆಯಾದ ವಿಶ್ವಕರ್ಮನು ಉಪದೇಶ ಮಾಡಿ [redacted] ಕರ್ಮವನ್ನು ಅನುಷ್ಠಾ [redacted] ಎಂದು ತಿಳಿಯಬೇಕು. ತಂದೆಯ ಪ್ರೀತಿಯನ್ನು ಗಳಿಸುವಂತಹ ಈ ಕರ್ಮವು ಶಿಲ್ಪವೇ ಆಗಿರುವುದರಿಂದ ಇದು ಪಂಚಕರ್ಮ ರೂಪಕವಾದ ಯಜ್ಞವೆಂದು ಯೋಗಾರ್ಥವನ್ನು ತಿಳಿಯಬೇಕು. ವಿಶ್ವಕರ್ಮ ಪರಮೇಶ್ವರನು ಉಪದೇಶಿಸಿರುವ ವಚನವನ್ನು ಅನುಸರಿಸಿದರೆ ಯಜ್ಞ ಮತ್ತು ಪಂಚ ಶಿಲ್ಪ ಕರ್ಮಗಳೂ ಅಬೇಧವೆಂಬುದನ್ನು ತಿಳಿಯಬೇಕು.

[ಈ ಸಂದರ್ಭದಲ್ಲಿ ಶಿಲ್ಪ ಮತ್ತು ಯಜ್ಞಗಳ ಮಧ್ಯೆ ಇರುವ ಸಾಮ್ಯವನ್ನು ಶಾಸ್ತ್ರೀಯವಾಗಿ ವಿಶ್ಲೇಷಿಸಿದಾಗ ಈ ವಿಶೇಷ ಮಾಹಿತಿಗಳು ಲಭ್ಯವಾಗುತ್ತವೆ. ಅದನ್ನು ಶಾಸ್ತ್ರಾರ್ಥ ಚಿಂತಕರ ಅವಗಾಹನೆಗಾಗಿ ಮಂಡಿಸುತ್ತಿದ್ದೇವೆ

ಯಜ್ಞಾತ್ಮನಾದ ವಿಶ್ವಕರ್ಮನು ಜಗತ್‌ಶಿಲ್ಪ ನಿರ್ವಹಣೆಗಾಗಿ ಯಜ್ಞವನ್ನು (ತಪವನ್ನು) ಆಚರಿಸಿ ವಿಶ್ವಶಿಲ್ಪಿಯಾದ. ತನ್ನ ಶಿಲ್ಪ ಸೃಷ್ಟಿಯಲ್ಲಿ ತಾನೇ ಅವರಿಸಿ ಅದ್ವೈತ ಸೌಂದರ್ಯ ರಸಪಾನಕ್ಕೆ ಅನುವು ಮಾಡಿಕೊಟ್ಟ. ಅದೇ ವಿಶ್ವಶಿಲ್ಪಿಯು ಕೌಶಲ್ಯದ ಆರಾಧನೆಯಿಂದ ಪೃಥ್ವಿಯಲ್ಲಿ [illegible] ಪ್ರಕಾರದ ಚಿತ್ರ ವಿಚಿತ್ರ ಪದಾರ್ಥಗಳ ರೂಪಗಳನ್ನು ಉತ್ಪನ್ನಮಾಡುವ ಕುಶಲತೆಯನ್ನು ಗಳಿಸಿದ. ಯಾರ ಶಿಲ್ಪಗಳು ಮಾನವರ ಜೀವನವು ಅಚ್ಚುಕಟ್ಟಾಗುವಂತೆ ನೆರವಾಗಿರುವುವೋ [illegible] ವಿಶ್ವಕರ್ಮ ರೂಪರಿಗೆ, ಯಜ್ಞ ಸಾಮಗ್ರಿಯನ್ನು ನಿರ್ಮಿಸಿದ್ದು ಮಾತ್ರವಲ್ಲದೆ ಯಜ್ಞಕ್ರಿಯೆಯನ್ನು ರೂಪಿಸಿದ ವಿಶ್ವಕರ್ಮನಿಗೆ, ತ್ರಿಲೋಕಗಳಲ್ಲೂ ಎಲ್ಲಾ ಶಿಲ್ಪಿಗಳ ಆದಿ ಪ್ರವರ್ತಕನಾದ ವಿಶ್ವಕರ್ಮನಿಗೆ, ಪುರಾಣಗಳಲ್ಲೂ ನಮಸ್ಕಾರ ಅರ್ಪಿಸಲಾಗಿದೆ.[1] ಇದರಿಂದ ಶಿಲ್ಪಕ್ರಿಯಾ ಶಕ್ತಿಯ ಮೂಲಕವೇ ವಿಶ್ವಕರ್ಮನು ಯಜ್ಞವಿಧಿಯನ್ನು ನಿರ್ಮಿಸಿದನು. ಜಗತ್ಸೃಷ್ಟಿಯೂ ಶಿಲ್ಪವೇ. ಇಹದ ಸಮೃದ್ಧಿಗೆ ಶಿಲ್ಪದ ಅವಶ್ಯಕತೆಯು ಬಹುವಾಗಿದೆ ಎಂಬುದನ್ನು ಪ್ರಾಚೀನ ಋಷಿಗಳು ಹೀಗೆ ಹೇಳಿದ್ದಾರೆ—

ಯೇಭಿಶ್ಶಿಲ್ಪೈಃ ಪಪ್ರಥಾನಾಮದೃಗ್‌ಂಹತ್ ।
ಯೇಭಿರ್ದ್ಯಾಮಭ್ಯಪಿಗ್‌ಂ ಶತ್ಪ್ರಜಾಪತಿಃ ।

---

1 ಭೌಮನ್ಯನೇಕ ರೂಪಾಣಿ ಯಸ್ಯ ಶಿಲ್ಪಾನಿ ಮಾನವಾಃ ।
ಉಪಜೀವಂತಿ ತಂ ವಿಶ್ವಂ ವಿಶ್ವಕರ್ಮಾಣಮೀಮಹೇ [illegible]
ದಿವಿಭುವ್ಯಂತರಿಕ್ಷೇ ವಾ ಪಾತಲೇವಾಪಿ ಸರ್ವಶಃ ।
ಯತ್ಕಿಂಚಿಚ್ಛಿಲ್ಪಿನಾಂ ಶಿಲ್ಪಂ ತತ್ಪ್ರವರ್ತಕತೇ ನಮಃ [illegible]
(ಪದ್ಮಪುರಾಣ, ಭೂಖಂಡ : ೨೫)

ಯೇಭಿರ್ವಾಚಂ ವಿಶ್ವರೂಪಾಗ್ಂ ಸಮವ್ಯಯತ್ ।
ತೇನೇಮ ಮಗ್ನ ಇಹ ವರ್ಚ ಸಾಸಮಜ್ಧಿ [redacted]

—ಇದರಿಂದ ಸೃಷ್ಟಿ ನಿರ್ಮಾಣವು ಶಿಲ್ಪವೆಂದೇ ಅಂಗೀಕೃತವಾಗಿದೆ ಎಂಬುದು ಸ್ಪಷ್ಟ. ಅಷ್ಟೇ ಅಲ್ಲ ವಿಶ್ವಶಿಲ್ಪಿಯಾದ ವಿಶ್ವಕರ್ಮನನ್ನು '**ಅಗ್ನಿ**' ಎಂದೂ ಇಲ್ಲಿ ಸಂಬೋಧಿಸಲಾಗಿದೆ.

ಶಿಲ್ಪ-ಯಜ್ಞ ಕರ್ಮಗಳ ಮಧ್ಯೆ ಅಂತರವಿಲ್ಲ. ಪ್ರತಿಯಾಗಿ ಸಂಪೂರ್ಣ ಸಾಮ್ಯವಿದೆ. ಎಲ್ಲಾ ಯಜ್ಞಾದಿ ಕರ್ಮಗಳಲ್ಲೂ ಯಜ್ಞಕರ್ತನು ಶಿಲ್ಪಕೃತಿಗಳಿಂದಲೇ ಅಲಂಕೃತನಾಗಿ, ಶಿಲ್ಪ ಫಲಗಳ ನೆರವಿನಿಂದಲೇ ಯಜ್ಞವನ್ನು ಮುಂದುವರಿಸುತ್ತಾನೆ. ಶಿಲ್ಪಿಯೂ ಅಗ್ನಿಹೋತ್ರಿಯೇ, ಶಿಲ್ಪಾಯುಧಗಳು ಯಜ್ಞಾಯುಧಗಳೊಂದಿಗೆ ಸಾಮ್ಯವನ್ನು ಪಡೆದಿವೆ. (ವಿವರಗಳಿಗೆ ಮುಂದಿನ ಪುಟದಲ್ಲಿರುವ ಪಟ್ಟಿಯನ್ನು ನೋಡಿ.)

---

[redacted] ವಿಶ್ವಕರ್ಮ ಪ್ರಜಾಪತಿಯು [redacted] ಶಿಲ್ಪಕರ್ಮಕೌಶಲದಿಂದ ವಿಸ್ತಾರವಾದ [redacted] ಪೃಥ್ವಿಯನ್ನು ದೃಢವಾದುದನ್ನಾಗಿ ಮಾಡಿದನೋ, [redacted] ಕ್ರಿಯಾಕೌಶಲದಿಂದ ಅನಂತವಾದ [redacted] ತುಂಬಾ ಸೂರ್ಯ-ಚಂದ್ರ-ತಾರೆಗಳನ್ನು ತುಂಬಿ ಅಲಂಕರಿಸಿದ್ದಾನೋ, [redacted] ಕಲಾಕೌಶಲದಿಂದ ನಾನಾವಿಧ [redacted] ನಾಮಗಳಿಗೆ ಕಾರಣನಾಗಿದ್ದಲ್ಲದೆ ವಾಕ್ಕನ್ನು ಸೃಷ್ಟಿಸಿ ಅದಕ್ಕೆ ನಾನಾವಿಧ ಸಂಸ್ಕಾರ ಕೊಟ್ಟು ವೀರಾದಿ ರಸಗಳಿಂದ ಪರಿಪ್ಲುತವಾಗುವಂತೆ ಮಾಡಿರುವನೋ ಅಂತಹ ಕಲಾಕೌಶಲ ಜಾಲದಿಂದ ಎಲೈ ಅಗ್ನಿ, [redacted] ಅರಸನನ್ನು ಸಮೃದ್ಧವಂತನಾಗಿ ಮಾಡು, ಆ ರೀತಿಯ ಸಾಮರ್ಥ್ಯವನ್ನು ಈತನಲ್ಲೂ ತುಂಬು.

(ತೈತ್ತಿರೀಯ ಬ್ರಾಹ್ಮಣ, ೨:೪:೩೫:೨)

ರಾಜ್ಯಾಭಿಷೇಕದ ಸಮಯದಲ್ಲಿ ಅರಸನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಆಚಾರ್ಯನು ಅರಸನಿಗೆ ಎಲ್ಲಾ ಬಗೆಯ ವೈಭವ ಪ್ರಾಪ್ತವಾಗಬೇಕೆಂದು ವಿಶ್ವಕರ್ಮನ ಪ್ರಾರ್ಥನೆಯ ನಂತರ [redacted] ಶ್ರುತಿಯಿಂದ ಶಿಲ್ಪಾಚಾರ್ಯನು ಅಭಿಷೇಕವನ್ನು ನಡೆಸುತ್ತಾನೆ.

| ಪರಿಕರ | ಯಜ್ಞ | ಶಿಲ್ಪ |
|---|---|---|
| | ಅಗ್ನಿಹೋತ್ರಿ | ಶಿಲ್ಪಿ |
| ಅಗ್ನಿಕುಂಡ | ಆಯತನ | ವಾಗೀಶ್ವರಿ |
| ಸುಮಿತ್ತು | ಸಮಿಧೆ, ಗೋಮಯ | ಖಾದಿರಾಂಗರ |
| ಧಮನಿ (ಊದುಗೊಳವೆ) | ವೇಣು | ಲೋಹ |
| ಬೀಸಣಿಗೆ | ಮೃಗಚರ್ಮ | ಬದಿರು |
| ಪಾತ್ರೆ | ಪ್ರಣೀತ | ಪ್ರಣೀತಾಕೃತಿಯ [illegible] ಜಲಪಾತ್ರೆ |
| ಹವಿಸ್ಸು | ಘೃತಾದಿಗಳು | ಸುವರ್ಣಾದಿ ಧಾತುಗಳು |
| ಕುಂಚ | ದರ್ಭೆ | ಸೂಕರಕೇಶ* |
| ಅಗ್ನಿಸ್ಥಾಪನೆ | **ಭೃಗೂಣಾಂ ತ್ವಾ ದೇವನಾಂ ವ್ರತಪತೇ ವ್ರತೇನಾದ ಧಾಮಿ** ಮಂತ್ರದಿಂದ ನಡೆಸಲಾಗುತ್ತದೆ. | **ಋಭೂಣಾಂ ತ್ವಾದೇವಾನಾಂ ವ್ರತಪತೇ [illegible]ತೇನಾದಧಾಮಿ....** ಎಂದು ನಡೆಸಲಾಗುತ್ತದೆ. |
| ಆಯುಧಗಳು | ನೀಕ್ಷಣ, ಆಸೇಚನಪಾತ್ರೆ, ಕಪಾಲ, ಸೂನಾ, ಅಂಕ, ಉಲೂಖಲ- ಮೇಖಲ (ಒರಳು-ಒನಕೆ), ಸ್ರುಕ್–ಸ್ರುವ ಇತ್ಯಾದಿ | ಶಲಾಕಾ, ಕರ್ತರೀ, ಮೇರು–ಟಂಕ (ಅಡಿಗಲ್ಲು–ಸುತ್ತಿಗೆ), ಸ್ವನ-ಸ್ವನ್ಯಾ (ಚಿಮಟ–ಇಕ್ಕಳ) ಇತ್ಯಾದಿ |

* ಅಗ್ನಿ ಜಿಹ್ವಾ ದರ್ಭಾಲೋಮಾ, ಬ್ರಹ್ಮಶೀರ್ಷೋ ಮಹಾತಪಾಃ [ಮತ್ಸ್ಯಪುರಾಣ, ೨೪೮]ರ ಪ್ರಕಾರ ಸೂಕರ ಕೇಶಗಳು ದರ್ಭೆಗೆ ಸಮನಾಗಿದ್ದು ಪವಿತ್ರವಾದುವಾಗಿವೆ.

ಯಜ್ಞದಲ್ಲಿ ಪ್ರಯೋಗಿಸಲ್ಪಡುವ ವಸ್ತುಗಳು ಆಯುಧಗಳೆಂದು ಕರೆಯಲ್ಪಟ್ಟವೆ. "ಸ್ಫ್ಯ, ಕಪಾಲ, ಅಗ್ನಿಹೋತ್ರ, ಹವಣೀ, ಶೂರ್ಪ, ಕೃಷ್ಣಾಜಿನ ಶಾಮ್ಯಾ, ಉಲೂಖಲ, ಮೂಸಲ, ದೃಷದ, ಉಪಲ [redacted] ಹತ್ತು ಯಜ್ಞಕ್ಕೆ ಸಾಧನೀಭೂತವಾಗಿರುವುದರಿಂದ ಅವುಗಳನ್ನು ಆಯುಧಗಳು ಎನ್ನುತ್ತಾರೆ. ಈ ಆಯುಧಗಳನ್ನು ಅಧ್ವರ್ಯುವು ಸಂಪಾದನೆ ಮಾಡಬೇಕು, ಸಾಧ್ಯಎಂದರೆ ಯಜ್ಞ ಮತ್ತು ಸಾಧನ ಎಂದರೆ ಯಜ್ಞದ ಆಯುಧಗಳು. ಈ ಆಯುಧಗಳಿಂದಲೇ ಯಜ್ಞದ ಸಿದ್ಧಿ[redacted]ಯಾಗುತ್ತದೆ.[3]

ಇದರಂತೆಯೇ ಶಿಲ್ಪಕಾರ್ಯದಲ್ಲಿ ಬಳಸುವ ಆಯುಧಗಳೂ ಹತ್ತು[4] ಮೇರು (ಅಡಿಗಲ್ಲು), ಟಂಕ (ಸುತ್ತಿಗೆ), ಸ್ವನ (ಇಕ್ಕಳ), ಭೂಷಾ (ಊದು ಗೊಳವಿ), ಅಗ್ನಿಕುಂಹ (ಅಗ್ಗಿಷ್ಟಿಕೆ). ಕರಣಿ (ಉಳಿ), ವಾಸಿ, ಕುದ್ದಾಲ (ಗುದ್ದಲಿ), ಆಮೀಯಂತ್ರ (ಜಲಪಾತ್ರೆ), ಕಮಂಡಲ (ಬೇರೊಂದು ಜಲ ಪಾತ್ರೆ) ಇವು ಮುಖ್ಯ ಆಯುಧಗಳು (ಶಿಲ್ಪಯಜ್ಞ ಪ್ರವರ್ತಕನೆಂದು ಪರಿಗಣಿಸಿ ವಿಶ್ವಕರ್ಮನಿಗೆ ಕೆಲವು ಪುರಾಣಗಳು ಆತನ ಆಯುಧಗಳು ಇವೆಂದು ನಿರ್ದೇಶಿಸಿ ವರ್ಣಿಸಿರುವುದು ಉಂಟು).

---

3 ಯಜ್ಞಾಯುಧಾನಿ ಸಂಭರಂತಿ ಯಜ್ಞೋವೈ ಯಜ್ಞಾಯುಧಾನಿ ಯಜ್ಞಮೇವ ತತ್ಸಂಭರಂತಿ । ಸ್ಫ್ಯಶ್ಚ ಕಾಪಾಲಾನಿಚಾಗ್ನಿ ಹೋತ್ರ ಹವಣೀಚ ಶೂರ್ಪಂಚ ಕೃಷ್ಣಾಜಿನಂ ಚ ಶಮ್ಯಾಚೋಲೂ[redacted] ಮೂಸಲಂ ಚ ದೃಷಚ್ಚೋಪಲಾ ಚೈತಾನಿವೈ ದಶಯಜ್ಞಾಯುಧಾನಿ ಯ ಏವಂ ವೇದ ಮುಖತೋಽಸ್ಯ ಯಜ್ಞಃ ಕಲ್ಪತೇ ॥ —ಯಜುರ್ವೇದ ೧:೬:೨:೨

ಭಾಷ್ಯ । ವಕ್ಷ್ಯಮಾಣಾನಿ ಸ್ಫ್ಯ ಕಪಾಲಾದೀನಿ ಯಜ್ಞಸ್ಯ ಸಾಧನತ್ವಾದಾಯುಧಾನೀ ತ್ಯುಚ್ಯಂತೇ । ತಾನಧ್ವರ್ಯುಃ ಸಂಪಾದಯೇತ್ । ಸಾಧ್ಯ ಸಾಧನಯೋರ ಭೇದೋಪಚಾರಾದ್ಯಜ್ಞಸ್ಯೈವ ತಾದಾಯುಧತ್ವಂ ತತ್ತೇನಾಯುಧ ಸಂಪಾದನೇನ ಯಜ್ಞ ಮೇವ ಸಂಪಾದಯತಿ ।

[redacted] ಮೇರುಂ ಟಂಕಂ ಸ್ವನಂ ಭೂಷಾವಹ್ನಿಂ [redacted] ದಧತಂ ಕರೈಃ । ಕುದ್ದಾಲಂ ಕರಣೀಂ ವಾಸೀಮಮೀ ಯಂತ್ರಂ ಕಮಂಡಲಂ । [redacted] ದಶಾಯುಧಾನಿ (ಪದ್ಮಪುರಾಣ, ಭೂಖಂಡ, ವಿಶ್ವಕರ್ಮೋಪಾಖ್ಯಾನ)

ಯಜ್ಞದ ದಶಾಯುಧಗಳು ದರ್ಶಪೂರ್ಣಮಾಸ, ಚಾತುರ್ಮಾಸ್ಯ, ಷೋಡಶೀ, ಉಕ್ಥ್ಯ, ಚಯನ, ಅಗ್ನಿಷ್ಟೋಮ, ವಾಜಪೇಯಾದಿಗಳಲ್ಲಿ ಬಹು ಮುಖ್ಯವಾದವು; ಅವಶ್ಯಕವಾದವು. ಅದರಂತೆಯೇ ದೇವಶಿಲ್ಪಕ್ಕೆ ಕರಣಗಳಾದ ಮೇರ್ವಾದಿ ದಶಾಯುಧಗಳಿಂದ ಸ್ವರ್ಣರತ್ನಾಲಂಕಾರ, ಪ್ರಾಸಾದ, ಗೃಹ, ದೇವತಾ ಮೂರ್ತಿ, ದೇವರಥ, ಯಜ್ಞಕುಂಡ-ಮಂಟಪ, ಯಜ್ಞಪಾತ್ರೆ ಇತ್ಯಾದಿ ಪವಿತ್ರ ಶಿಲ್ಪ ವಸ್ತುಗಳನ್ನು ತಯಾರಿಸುತ್ತಾರೆ.

ಅಶ್ವಮೇಧಾದಿ ಯಾಗಗಳ ಸಂಕಲ್ಪ ಪ್ರಾರಂಭಿಸುವ ಮುಹೂರ್ತದಲ್ಲಿ **ಚಿತ್ರಾ ನಕ್ಷತ್ರಂ ಭವತಿ । ಚಿತ್ರಂ ವಾ ಏತತ್ಕರ್ಮಯದಶ್ವಮೇಧಃ ಸಮೃದ್ಧ್ಯೈ**[5] ಎಂದು ಹೇಳಿ ಸರ್ವ ಶಿಲ್ಪಾಧಿಪತಿಯಾದ ತ್ವಷ್ಟೃವು (ವಿಶ್ವಕರ್ಮ) ಅಧಿಪತಿಯಾಗಿರುವ ಚಿತ್ರಾ ನಕ್ಷತ್ರದಲ್ಲಿ (**ತ್ವಷ್ಟಾ ನಕ್ಷತ್ರ ಮಭ್ಯೇತಿ ಚಿತ್ರಾಂ**)ಯೇ ಯಜ್ಞಕರ್ಮವನ್ನು ಪ್ರಾರಂಭಿಸಬೇಕೆಂಬ ನಿಯಮವೇ ಶಿಲ್ಪ ಕರ್ಮ-ಕ್ರತುಕರ್ಮಗಳ ಐಕ್ಯತೆಯನ್ನು ಸ್ಪಷ್ಟೀಕರಿಸುತ್ತದೆ. ಶಿಲ್ಪಶಾಸ್ತ್ರ ಅಥವ ಶಿಲ್ಪವೇದವು ವೇದಪುರುಷನಿಂದಲೇ ಮೊದಲಿಗೆ ಆವಿರ್ಭವಿಸಿತು.[6] ಇದಕ್ಕೆ ಉಪವೇದವೆಂಬ[7] ಸಂಜ್ಞೆಯೂ ಉಂಟು. ಅದ್ದರಿಂದಲೇ ಯಜ್ಞ-ಶಿಲ್ಪ ಗಳೆರಡರಲ್ಲೂ ಈ ರೀತಿಯ ಸಾಮ್ಯವಿದೆ. ದೇವಶಿಲ್ಪದಿಂದ ಬಾಹ್ಯಾಂಗ ಅಂತ ರಂಗಗಳು ಪವಿತ್ರಗೊಳ್ಳುವುದು ಅಲಂಕಾರದಿಂದ ಬಾಹ್ಯಾಂಗ, ದೇವತಾ ಮೂರ್ತಿ, ಯಜ್ಞೋಪಕರಣಗಳು ಮುಂತಾದವುಗಳಿಂದ ಅಂತರಂಗ ಪವಿತ್ರ ವಾಗುತ್ತದೆ.

---

[redacted] ತೈತ್ತಿರೀಯ ಬ್ರಾಹ್ಮಣ, ೩:೮:೧:

[redacted] ಋಗ್ಯಜುಸ್ಸಾಮಾಥರ್ವಾಖ್ಯಾನ್ ವೇದಾನ್ ಪೂರ್ವಾದಿಭಿರ್ಮುಖೈಃ ।
ಶಾಸ್ತ್ರಮಿಜ್ಯಾಂ ಸ್ತುತಿಸ್ತೋಮಂ ಪ್ರಾಯಶ್ಚಿತ್ತಂ ವ್ಯಧಾತ್ಕ್ರಮಾತ್ ॥೩೭॥
ಆಯುರ್ವೇದಂ ಧನುರ್ವೇದಂ ಗಾಂಧರ್ವಂ ವೇದಮಾತ್ಮಭೂಃ ।
ಸ್ಥಾಪತ್ಯಂ [redacted] ಸೃಜದ್ವೇದಂ ಕ್ರಮಾತ್ಪುರಾವದಿಭಿರ್ಮುಖೈಃ ॥೩೮॥
(ಶ್ರೀಮದ್ಭಾಗವತಂ ೩:೧೨)

7 ಸ್ಥಾಪತ್ಯ ವೇದೋ ವಿಶ್ವಕರ್ಮಾದಿ ಶಿಲ್ಪ ಶಾಸ್ತ್ರಂ ಅಥರ್ವವೇದಸ್ಯೋಪ ವೇದಃ ॥೪॥ (ಚರಣವ್ಯೂಹೇ ಚತುರ್ಥಖಂಡಃ)

ಸ್ವರ್ಣಾದಿ ಶಿಲ್ಪಕರ್ಮವು ಕಾಮ್ಯವೇ ಆಗಿರುವಂತೆ ಯಜ್ಞ ಕರ್ಮವು ಕಾಮ್ಯವೇ. ಯಜ್ಞ ಕರ್ಮವನ್ನು ಪ್ರಥಮವಾಗಿ ನಿರೂಪಿಸಿದವನು ಅಗ್ನಿ (ಅಥವ ವಿಶ್ವಕರ್ಮ) ಎಂಬುದನ್ನು ಮೊದಲೇ ನಿರೂಪಿಸಿದ್ದೇವೆ.[8] ಆತನೇ (ವಿಶ್ವಕರ್ಮನೇ ಅಥವ ಅಗ್ನಿಯೇ) ಶಿಲ್ಪಕರ್ಮವನ್ನೂ ನಿರೂಪಿಸಿದ ಎಂಬುದನ್ನೂ ನಾವು ಪರಿಶೀಲಿಸಿದ್ದೇವೆ. ಯಜ್ಞವು ಹೇಗೆ ಸೃಷ್ಟಿ ಕರ್ಮವೋ, ಶಿಲ್ಪವೂ ಅದೇ ರೀತಿಯಲ್ಲಿ ಸೃಷ್ಟಿ ಕರ್ಮವಾದ್ದರಿಂದ ಇವೆರಡಕ್ಕೂ ಯಾವ ಅಂತರವೂ ಇಲ್ಲ.[9]

---

8(ಅ) ಆಷಾಳ್ಹೋ ಅಗ್ನೇ ವೃಷಭೋ ದಿದೀಹಿ
ಪುರೋ ವಿಶ್ವಾಃ ಸೌಭಗಾ ಸಂಜಿಗೀವಾನ್
ಯಜ್ಞಸ್ಯ ನೇತಾ ಪ್ರಥಮಸ್ಯ ಪಾಯೋರ್
ಜಾತವೇದೋ ಬೃಹತಃ ಸುಪ್ರಣೀತೇ ॥ (ಋ ೩:೧೫:೪)
ಹೋಲಿಸಿ-ಯ ಇಮಾ ವಿಶ್ವಾ ಭುವನಾನಿ ಜುಹ್ವತ್ ಋಷಿರ್ಹೋತಾ
ನ್ಯಸೀದತ್ಪಿತಾನಃ (ಋ ೧೦:೮೧:೧)

(ಆ) ಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥
(ಶ್ರೀಮದ್ಭಗವದ್ಗೀತಾ ೩:೧೦)

9) ಅಪ ಇತ್ಯಾರಭ್ಯ ಕ್ರತುಃ ಧೀಃ ಶಿಲ್ಪಂ ಇತಿಷಡ್ವಿಂಶತಿ ಕರ್ಮನಾಮಾನಿ' ಎಂದು ಅಪದಿಂದ ಶಿಲ್ಪಮ್ ತನಕದ ಶಬ್ದಗಳಿಗೆ ಕರ್ಮನಾಮಗಳೆಂದು, ಶಿಲ್ಪಶಬ್ದಕ್ಕೆ ಕ್ರತುಶಬ್ದವು ಪರ್ಯಾಯವೆಂದು ನಿರ್ಣಯಿಸಲಾಗಿದೆ. ವೇದೋಕ್ತ ಮಂತ್ರಗಳಲ್ಲಿಯ ಧ್ಯಾನ ರೂಪುಗಳನ್ನು ಪ್ರತ್ಯಕ್ಷ ವಿಗ್ರಹಗಳಾಗಿ ಸೃಷ್ಟಿಸುವ ವಿಜ್ಞಾನವೇ ಶಿಲ್ಪವೆನಿಸಲ್ಪಡುತ್ತದೆ. ನಾಮಲಿಂಗಾನುಶಾಸನದಲ್ಲಿ (ಧೀವಗ) 'ಮೋಕ್ಷೇಧೀರ್ಜ್ಞಾನಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ' [ಜ್ಞಾನವೆಂದರೆ ಮೋಕ್ಷಬುದ್ಧಿ ಮತ್ತು ವಿಜ್ಞಾನವೆಂದರೆ ಕಲಾಕೌಶಲದ ಜ್ಞಾನ ಯಾವ ದೇವನ (ಪದಾರ್ಥದ) ಸ್ವರೂಪವನ್ನು ಅರಿಯಬೇಕಾಗುವುದೋ ಅದು[ಜ್ಞಾನವೆಂದರೆ ವೇದ ವಿದ್ಯೆ. ವೇದೋಕ್ತ ದೇವಾದಿ ವಸ್ತುಗಳ ಸ್ವರೂಪವನ್ನು ಪ್ರತ್ಯಕ್ಷಗೊಳಿಸುವ ಕರ್ಮವೆಂದರೆ ವಿಜ್ಞಾನ ಮತ್ತು ಶಿಲ್ಪ. ಮೋಕ್ಷ ಸುಖಕ್ಕಾಗಿ ವೇದಾಧ್ಯಯನದಿಂದ ಜ್ಞಾನವನ್ನು ಅರ್ಜಿಸುತ್ತಾರೆ. ಅದಕ್ಕೆ ಅನುಭವ ಜ್ಞಾನದ ಜೊತೆ ಸಿಕ್ಕಿದರೆ ಅದು ವಿಜ್ಞಾನವಾಗುತ್ತದೆ.

ಶಿಲ್ಪ-ಯಜ್ಞ ಇವುಗಳ ಜನಕರಾದ ವಿಶ್ವಕರ್ಮ-ಅಗ್ನಿಗಳು ಕರ್ಮ-ಜ್ಞಾನ ಸಮುಚ್ಚಯವೇ. ಶಿಲ್ಪದ(ವಿಜ್ಞಾನ) ಕರ್ಮಶಕ್ತಿಯು, ಯಜ್ಞದ ಜ್ಞಾನಗಳಿಗೆ ಮೂಲ ಬೀಜವಾಗಿರುವ ಪರಮೇಶನನ್ನು ಅಗ್ನಿರೂಪದಲ್ಲಿ ಕಂಡಿದ್ದರೂ ಸಮಸ್ತ ಕರ್ಮ-ಜ್ಞಾನಗಳ ಸಮುಚ್ಚಯಾತ್ಮಕ ದೇವ ಎಂದೇ (ವಿಶ್ವಾನಿ ದೇವ ವಯುನಾನಿ ವಿದ್ವಾನ್) ವಿಶ್ವಕರ್ಮನೆಂದು ಕರೆದಿರುವುದು.

**ಅಥಾಪಿ ಸ್ಯಾನ್ನಿತ್ಯ ತೃಪ್ತಃ ಸಾಂಬಃ । ನಾತ ಏತನ್ನಿ ಬಂಧನಾ ತೃಪ್ತಿರವಕಾಶೇತೀತಿ । ಅಸಿದ್ಧಿರ್ವೈಗುಣಾದಿತಿ ಪ್ರಾಪ್ನೋ[redacted] । ತ್ರಾಹ ನ ಯೋಗಾನುಗತೇರಿತಿ ನಾಯಂ ದೋಷಃ [redacted]ಪ್ನೋತಿ, ಕಿಂ ಕಾರಣಂ [redacted] ಯೋಗಾನುಗತಿರೇವ । ದಾನಮಪಿ ಯಜ್ಞ ಶಬ್ದ ಸ್ಯಾವಯವಾರ್ಥಃ । ಯಃ ಶಿಲ್ಪಂ ಪ್ರಚಾರಯತಿ ಸಜ್ಞಾನಂ ಸಾಮಾನ್ಯತಃ, ವಿಜ್ಞಾನಂ ವಿಶೇಷತಃ ಲೋಕೇಭ್ಯೋ ದದಾತೀತಿ । ಅನು ಅನಂತರ ವಚನೇನ ಗತೇಃ ಅವಗತೇಃ ಇತಿ ಸೂತ್ರಾರ್ಥಃ । ತಥಾ ಹ್ಯನಂತರಂ ವಚನಂ – ದಾತಾರೋ ಭವಂತು ಜ್ಞಾನಸ್ಯ ವಿಜ್ಞಾನಸ್ಯಚ ಶಿಲ್ಪಿನ ಇತಿ ।**

ಸಾಂಬನು ನಿತ್ಯತೃಪ್ತನಾಗಿರುವನು. ನಿತ್ಯ ತೃಪ್ತನಾಗಿರುವುದರಿಂದ ಯಜ್ಞ ಕರಣ ನಿಬಂಧನ ರೂಪವಾದ ತೃಪ್ತಿಯೂ ವೈಗುಣ್ಯದಿಂದ ಅಸಿದ್ಧಿ ಎಂಬುದು ಕೂಡ ಉಂಟಾಗುವುದಕ್ಕೆ ಅವಕಾಶವಿರುವುದಿಲ್ಲ. ಯೋಗಾನುಗತಿ ರೂಪವಾದ ಕಾರಣದಿಂದ [redacted] ವಿಧವಾದ ದೋಷವು ಉಂಟಾಗಲು ಅವಕಾಶ ವಿಲ್ಲ. ಯಜ್ಞವೆಂಬ ಶಬ್ದಕ್ಕೆ ದಾನವೆಂಬುದು ಅವಯವಾರ್ಥವು ಇರುತ್ತದೆ. ಶಿಲ್ಪಪ್ರಚಾರ ಮಾಡುವುದೆಂದರೆ ಸಾಮಾನ್ಯವಾದ ಜ್ಞಾನವನ್ನು ದಾನ ಮಾಡುವುದೆಂದರ್ಥ. ವಿಜ್ಞಾನವೆಂಬುದರಿಂದ ಶಿಲ್ಪವನ್ನು ವಿಶೇಷವಾಗಿ ಜನರಿಗೆ ಪ್ರಚಾರ ಮಾಡಿದರೆ [redacted] ಮೂಲಕ ಜನರಿಗೆ ಜ್ಞಾನವನ್ನು ವಿಶೇಷವಾಗಿ ದಾನ ಮಾಡಿದಂತಾಗುವುದು. ಯೋಗ – ಅನು – ಗತಿಃ ಎಂಬ ಮೂರು ಶಬ್ದಗಳಲ್ಲಿ ಅನು ಎಂಬುದ ಅನಂತರ ವಾಚಿಯಾಗಿರುವುದು. ಲೋಕದ ಜನರಿಗೆ ಶಿಲ್ಪದ ಜ್ಞಾನಗಳನ್ನು [redacted] ಮಾಡುವುದು ಎಂಬ ಅರ್ಥವು.

**ದಾತಾರೋ ಭವಂತು ಜ್ಞಾನಸ್ಯ ವಿಜ್ಞಾನಸ್ಯ ಚ ಶಿಲ್ಪಿನಃ** ಎಂಬ ಸೂತ್ರದಿಂದ ಇದು ಸ್ಪಷ್ಟವಾಗುತ್ತದೆ.

**ದಾತಾರೋ ಭವನ್ತು ಜ್ಞಾನಸ್ಯ ವಿಜ್ಞಾನಸ್ಯ ಶಿಲ್ಪಿನಃ । ೪೩**

**ಅಧಿಷ್ಠಾತಾಹಂ ಕರ್ಮಣಃ ಸಕಲಸ್ಯ ಯಜ್ಞ ರೂಪಃ । ೪೪**

**ವಿಲಸಿತ ಮೇವಂ ಮಯ್ಯೈವ ಜಗಚ್ಛಿಲ್ಪಸ್ಯ ಕೌಶಲಂ । ೪೫**

**ನನು ಯದೀಮೇ ಪಂಚಶಿಲ್ಪಂ ಪ್ರಕಟಯೇ ಯುಸ್ತರ್ಹಿ ಸಾಂಬಃ ಪ್ರಕಟಯತೀತಿ ಸಂಗ್ರಹಸೂಕ್ತಿ ರಸ ಬದ್ಧಾ ಪ್ರಾಪ್ನೋತಿ । ತದತ್ರ ಏಕವಚನ ನಿರ್ದೇಶ ರೂಪ ವಿರುದ್ಧ ಗುಣಾತ್ಮಂಚ ಕರ್ತೃಕ ತಯಾ ಅಸಿದ್ಧಿರಿತಿ ಚೇನ್ನ । ಕಿಂ ಕಾರಣಂ ? ಯೋಗಾನುಗತಿರೇವ । ಅಧಿಷ್ಠಾತಾಹಂ ಸಕಲಸ್ಯ ಕರ್ಮಣಃ ಯಜ್ಞ ರೂಪ ಏವೇತಿ । ಯಜ್ಞ ರೂಪ ಏವೇತಿ ಇಜ್ಯಮಾನರೂಪ ಏವೇತ್ಯರ್ಥಃ । ಯಜ ದಾತೋರು ಪರಿತನನ ಞ್ ಪ್ರತ್ಯಯಸ್ಯ ಕರ್ಮಾರ್ಥಕತ್ವಾತ್ ।**

ಮನು ಮಯ ತ್ವಷ್ಟಾ ಶಿಲ್ಪಿ ವಿಶ್ವಜ್ಞ ಎಂಬ ಆದಿ ಪಂಚ ಬ್ರಹ್ಮರು ಶಿಲ್ಪಜ್ಞಾನವನ್ನು ಪ್ರಕಟಿಸಿರುವುದಾದರೆ **ಸಾಂಬಃ ಪ್ರಕಟಯತಿ** ಎಂಬುದಾಗಿ ಹೇಳುವ ಸೂಕ್ತಿಯು ಅಸಂಬದ್ಧವಾಗುತ್ತದೆ. **ಸಾಂಬಃ** ಎಂಬ ಪದವು ಏಕ ವಚನಾಂತವಾಗಿರುವುದು. ಏಕ ವಚನ ನಿರ್ದೇಶವು ಬ್ರಹ್ಮ ವಚನದ ವಿರುದ್ಧವಾದ ಕಾರಣ ಜ್ಞಾನ ವಿಜ್ಞಾನೋಪದೇಶ ಕರ್ತೃಗತವಾದ ಪಂಚ ಸಂಖ್ಯಾ ವೈಶಿಷ್ಟ್ಯವು ಸಿದ್ಧವಾಗುವುದಿಲ್ಲ ಎಂಬ ಆಕ್ಷೇಪವು ಬರುತ್ತದೆ. **ಅಧಿಷ್ಠಾತಾಹಂ ಸಕಲಸ್ಯ ಕರ್ಮಣಃ ಯಜ್ಞ ರೂಪಃ** ಎಂಬ ಸೂತ್ರದಲ್ಲಿ ಉಕ್ತವಾಗಿರುವ ಪ್ರಕಾರ ಯೋಗಾನುಗತಿಯನ್ನು ಹೇಳಿರುವುದರಿಂದ

ಹಿಂದೆ ಹೇಳಿರುವ ಅಸಿದ್ಧಿಯು ಉಂಟಾಗಲು ಅವಕಾಶವಿರುವುದಿಲ್ಲ. ಯಜ್ಞ ಶಬ್ದಕ್ಕೆ ಪೂಜೆಯನ್ನು ಹೊಂದುವವನು ಎಂದು ಅರ್ಥವಿದೆ. ಯಜ್ಞ ಧಾತು ವಿನ ಮೇಲೆ ಬಂದಿರುವ ನಜ್ ಪ್ರತ್ಯಯವು ಕರ್ಮಾರ್ಥವಾಗಿರುವುದು. ಇದರಿಂದ ಸಾಂಬನ ಇಜ್ಯಮಾನ ರೂಪನಾಗಿರುವನು.

**ನಿತ್ಯ ತೃಪ್ತಸ್ಯಾಪಿ ಸಾಂಬಸ್ಯ ಭಕ್ತ ಪಾರವಶ್ಯೇನ ತೃಪ್ತಿ ಪ್ರಕಟನ ಸಂಭವಾತ್ । ಮೃಷ್ಟಾನ್ನ ಭೋಜನ ತೃಪ್ತಸ್ಯಾಪಿ ಪಿತ್ರಾ-ದೇರ್ಬಾಲೇ ವಾತ್ಸಲ್ಯೇನ ತದ್ದತ್ತಾಲ್ಪ ಫಲಭಕ್ಷಣೇನ ತೃಪ್ತಿಪ್ರಕಟನ ವತ್ । [redacted] ಶ್ರುತಿ ಹೃದಯಂ । ಅಧಿಷ್ಠಾತೃತ್ವ ರೂಪೇಣ ಸರ್ವೇ ಷ್ವಪಿ ಪಂಚಸು ಸಾಂಬಾನುಗತ್ಯವ ಗವಾದಿಶಿ ನಾಸಂಬದ್ಧಾ ಸಂಗ್ರಹ ಸೂಕ್ತಿಃ । ಏವಮಧಿಷ್ಠಾತೃತ್ವೇನ ಕಿಂ ಸಿದ್ಧಂ ? ತದುಚ್ಯತೇ – ವಿಲಸಿತ ಮೇವಂ ಪ್ರಕಾಶಿತಂ ಪ್ರಕಟಿತ ಮೇವಂ ಉಕ್ತರಿತ್ಯಾ ಮಯ್ಯೈವ ಜಗಚ್ಛಿಲ್ಪಸ್ಯ ಕೌಶಲಮಿತಿ । ಸ್ಪಷ್ಟೋರ್ಥಃ ।**

ನಿತ್ಯ ತೃಪ್ತನಾದರೂ ಸಾಂಬನು (ಅಂಬ ಸಮೇತನಾಗಿರುವ ಸೃಷ್ಟಿ ಕರ್ತನು) ಭಕ್ತರ ಇಚ್ಛಾನುಸಾರವಾಗಿ ಭಕ್ತರಿಗೆ ಅಧೀನನಾಗಿರುವುದರಿಂದ ತೃಪ್ತಿಯನ್ನು ವ್ಯಕ್ತಪಡಿಸಬೇಕಾಗಿರುತ್ತದೆ. ಮೃಷ್ಟಾನ್ನ ಭೋಜನದಿಂದ ತಂದೆಯು ತೃಪ್ತನಾಗಿದ್ದರೂ ಸಣ್ಣ ಮಗುವಾದ ತನ್ನ ಪುತ್ರನು ಕೊಡ ಬಹುದಾದ ಹಣ್ಣಿನ ಸಣ್ಣಚೂರನ್ನು ತೆಗೆದುಕೊಂಡು ತೃಪ್ತಿಯನ್ನು ಪ್ರಕಟಿಸು ವುದು ಲೋಕ ರೂಢಿಯಾಗಿದೆ. ಇದೇ ಅಭಿಪ್ರಾಯವನ್ನೇ ಶ್ರುತಿಯು ಬೋಧಿಸುತ್ತದೆ. ಅಧಿಷ್ಠಾತೃತ್ವ ರೂಪದಿಂದ ಐದು ಮೂರ್ತಿಗಳಲ್ಲಿಯೂ ಸಾಂಬನ ಅನುಗತಿಯು ಇರುವುದರಿಂದ ಸಂಗ್ರಹ ಸೂಕ್ತಿಯು ಅಸಂಬದ್ಧವಾದ ಅರ್ಥವನ್ನು ಬೋಧಿಸುವುದಿಲ್ಲ.

ಸಾಂಬನು ಅಧಿಷ್ಠಾತೃವಾಗಿರುವುದರಿಂದಲೇ ಹಿಂದೆ ಹೇಳಿದ ರೀತಿ ಯಿಂದ ಸಾಂಬನಿಂದಲೇ ಜಗತ್ತು ಸೃಷ್ಟಿಯಾಗಿದ್ದು ಆ ಕ್ರಿಯೆಯನ್ನು ಜಗತ್ ಶಿಲ್ಪವೆಂದು ಹೇಳುವುದರ ಕಾರಣ ಆತನ ಶಿಲ್ಪಜ್ಞಾನ ಮತ್ತು ಶಿಲ್ಪ ಕೌಶಲ್ಯವು ಅಭಿವ್ಯಕ್ತವಾಗಿದೆ. [redacted] ಅಂಶವು ಸುಸ್ಪಷ್ಟವಾಗಿದ್ದು, ಹೆಚ್ಚಿನ ವಿವರಣೆಯನ್ನು ಬಯಸುವುದಿಲ್ಲ.

**ಗುಹ್ಯಮಿದ ಮಾಧ್ಯಾತ್ಮಂ ರಹಸ್ಯಂ ಭವತಿ ಪ್ರಾಣಿನಾಮಜ್ಞೇಯಂ ।೪೬**

**ಗುಹ್ಯಮಿದ ಮಧ್ಯಾತ್ಮಂ ಧರ್ತವ್ಯಮಿತಿ ಶೇಷಃ । ಅಧ್ಯಾತ್ಮಂ– ಮನಸಿ । ಗುಹ್ಯಮಿತಿ ಕೋಽರ್ಥಃ ? ತಮಾಹ । ರಹಸ್ಯಂ ಭವತಿ ಪ್ರಾಣಿನಾಂ ಅಜ್ಞೇಯಮಿತಿ । ಸುಸೂಕ್ಷ್ಮಮಿತ್ಯರ್ಥಃ ।**

ಈ ಶಿಲ್ಪ ವಿಜ್ಞಾನ ಕೌಶಲವು ಆತ್ಮವಿಷಯಕವಾಗಿರುವುರಿಂದ ಬುದ್ಧಿಯಿಂದ ಧರಿಸಬೇಕು. ಗುಹೂ ಸಂವರಣೆ ಎಂಬ ಧಾತುವಿನಿಂದ ಗುಹ್ಯ ಎಂಬ ರೂಪವು ಉಂಟಾಗಿರುವುದು. ಶಿಲ್ಪ ವಿಜ್ಞಾನ ಕೌಶಲವು ಬಹಳ ಸೂಕ್ಷ್ಮವಾಗಿರುವ ಕಾರಣ ಇದು ರಹಸ್ಯಾತ್ಮಕವಾಗಿರುವುದು. ಆದ್ದರಿಂದ ಶಿಲ್ಪ ತತ್ತ್ವವು ಪ್ರಾಣಿಗಳಿಗೆ ಸುಲಭವಾಗಿ ತಿಳಿಯಲು ಅಸಾಧ್ಯವಾಗಿದೆ.

**ತದೇತದ್ವಿವೃಣುತ ವಿವೃಣುತ ಲೋಕಸ್ಯ ।೪೭**
**ಪ್ರಕಲ್ಪಯತ ಯಜ್ಞಗ್ಂ ಶಿಲ್ಪೇನ ।೪೮**

**ಅಥ ಪಂಚ ಪುರುಷಾನ್ ಪ್ರೇರಯತಿ ಭಗವಾನ್ – ತದೇತದ್ವಿವೃಣುತ ವಿವೃಣುತ ಲೋಕಸ್ಯೇತಿ । ಅಧಾರಥಾ ಸರ್ವತ್ರ ದ್ವಿರುಕ್ತಿರನು ಸಂಧೇಯಾ । ಪ್ರಕಲ್ಪಯತ ಯಜ್ಞಂ ಶಿಲ್ಪೇನ । ಸ್ಪಷ್ಟೋಽರ್ಥಃ ।**

ಪೂಜ್ಯನಾದ ಭಗವಂತನು ಈ ರೀತಿಯಾಗಿರುವ ಶಿಲ್ಪತತ್ತ್ವವನ್ನು, ಶಿಲ್ಪ ಜ್ಞಾನವನ್ನು ಲೋಕದಲ್ಲಿರುವ ಪ್ರಾಣಿಗಳಿಗೆ ವಿವರವಾಗಿ ತಿಳಿಸಿರಿ ಎಂದು ಹೇಳಿ ಆದಿ ಪಂಚಬ್ರಹ್ಮರಾದ ಮನ್ವಾದಿಗಳನ್ನು ನಿಯೋಜಿಸಿದನು. ಎಲ್ಲಾ ಕಡೆಗಳಲ್ಲೂ ಶಿಲ್ಪ ಮತ್ತು ಶಿಲ್ಪಿಗಳ ಬಗ್ಗೆ ಆದರ ಗೌರವಗಳನ್ನು ತೋರಬೇಕೆಂದನು. ಶಿಲ್ಪಜ್ಞಾನದಿಂದ ಪ್ರಸಿದ್ಧನಾಗಿರುವ ಸೃಷ್ಟಿಕರ್ತನು ತೃಪ್ತಿಕರ ಪೂಜಾದಿಗಳನ್ನು ಪಡೆಯುವಂತೆ ಶಿಲ್ಪಗಳನ್ನು ನಿರ್ಮಿಸಿರಿ ಎಂದು ನಿರ್ದೇಶಿಸಿದನು. ಶಿಲ್ಪವು ಸದಾ ದ್ವಿಮುಖವಾದ ಸುಖವನ್ನು ಕೊಡುತ್ತದೆ ಎಂದನು.

ಶಿಲ್ಪಕರ್ಮದಲ್ಲಿ ತೊಡಗಿರುವ ಶಿಲ್ಪಿಯು ಶಿಲ್ಪಕಾರ್ಯ ನಿರ್ವಹಿಸುವಷ್ಟು ಕಾಲವು ಸಮಾಧಿ ಸೌಖ್ಯವನ್ನು ತತ್ಸಂಬಂಧ ಆನಂದವನ್ನು ಅನುಭವಿಸುತ್ತಾನೆ. ಈ ರೀತಿ ಸೃಷ್ಟಿಯಾದ ಶಿಲ್ಪವನ್ನು ತನ್ಮಯನಾಗಿ ನೋಡುವ ಶಿಲ್ಪಕಲಾ ಪಿಪಾಸು ಅಥವ ಭಕ್ತನು ಆ ಶಿಲ್ಪದ ನೆರವಿನಿಂದಲೇ ಸಮಾಧಿಸೌಖ್ಯವನ್ನು ಅನುಭವಿಸುತ್ತಾನೆ. ಈ ರೀತಿಯಾಗಿ ಶಿಲ್ಪಿ ಮತ್ತು ಶಿಲ್ಪಕಲಾ ಪಿಪಾಸು ಇಬ್ಬರನ್ನು ಶಿಲ್ಪವು ಸಮಾಧಿ ಸೌಖ್ಯದಿಂದ ಸುಖಿಗಳನ್ನಾಗಿ ಮಾಡುತ್ತದೆ. ಇದು ಮಾನಸಿಕ ಹಂತದ್ದಾದರೆ, ಸ್ಥೂಲ ಜಗತ್ತಿಗೆ ಸಂಬಂಧಿಸಿದಂತೆಯೇ ಶಿಲ್ಪದ ಫಲವು ಎರಡು ರೀತಿಗಳಲ್ಲಿದೆ. ಶಿಲ್ಪವು ಇಹದಲ್ಲಿ ಸೌಖ್ಯವನ್ನು ಪರದಲ್ಲಿ ಮೋಕ್ಷವನ್ನು ಗಳಿಸಿಕೊಡುತ್ತದೆ. ಹೇಗೆಂದರೆ ಶಿಲ್ಪವೃತ್ತಿಯಿಂದ ಶಿಲ್ಪಿಯಾದವನಿಗೆ ದುಡಿದು ಗಳಿಸಿದ ಕೀರ್ತಿ ಸವಲತ್ತುಗಳು ದೊರೆಯುವಂತೆ, ಶಿಲ್ಪವನ್ನು ಮಾಡಿಸಿದವನಿಗೆ ಇಹ ಜೀವನದಲ್ಲಿ ಶಾಂತಿ, ಸೌಖ್ಯಗಳು ಪರಲೋಕದ ಸಾಮ್ರಾಜ್ಯವು ದೊರೆಯುತ್ತವೆ. ಹೀಗೆ ಶಿಲ್ಪವು ಸದಾ ಎರಡು ರೀತಿಗಳಲ್ಲಿ ಕರ್ತನನ್ನೂ, ಕಾರಯಿತನನ್ನು ಕಾಯುತ್ತದೆ. ಇದನ್ನು ದ್ವಿರುಕ್ತಿ ಎಂದು ಸೂಚಿಸಿದ್ದು ಇದರ ಅನುಸಂಧಾನವೇ ವೇದೋಕ್ತ ಜೀವನಕ್ರಮವೆಂದು ಬೋಧಿಸಲಾಗಿದೆ.

ಶಿಲ್ಪೇನೈವೇದ ಮುಪ ಬೃಂಹಿತಂ |೪೯
ಯಜ್ಞೋಭವತಿ ಲೋಕಾನಾಂ ನಿಶ್ರೇಯಸೇ |೫೦
ಸಿದ್ಧೇರನ್ನಿವಿಧಾನ್ಯಪಿ ಕಾರ್ಯಾಣಿ |೫೧

ಸಾಂಬಾಖ್ಯಸ್ಯ ಬ್ರಹ್ಮಣ [redacted] ಶೇಷಃ । ತತ್ರ ಹೇತು ಮಾಹ । ಶಿಲ್ಪೇನೈವೇದ ಮುಪ ಬೃಂಹಿತಮಿತಿ । ಪುರಾತನೈರಿದಂ ಸಾಂಬಾಖ್ಯಂ ಬ್ರಹ್ಮ ಶಿಲ್ಪೇನೈವ ವರ್ಧಿತಂ ಸಂತೋಷಿತಂ । ಅತಶ್ಚ ಶಿಷ್ಟಾಚಾರಃ ಶಿಲ್ಪಯಜ್ಞಾನುಷ್ಠಾನೇ ಹೇತುಃ ಸ್ಫುಟಿತಃ। ಯಃ ಪುನಃ ಫಲಗೃಧುರಿತ್ರಮಪಿ ಲೋಕಂ ಫಲಂ ಪ್ರದರ್ಶಯನ್ ಪ್ರವರ್ತಯತಿ ವೇದಃ । ಯಜ್ಞೋ ಭವತೀತಿ । ನಿಃಶ್ರೇಯಸೇ ನಿಮಿತ್ತೇ ಯಜ್ಞಂ ಕುರುತ ಯತಸ್ತತ್ರ ಯಜ್ಞೋಭವತೀತಿ । ವಾಕ್ಯಾರ್ಥಃ । [redacted] ಕೇವಲ ಮಿದಮೇವ ಫಲಂ [redacted] ಸರ್ವಾಣಿ ಜನ್ಯಾನಿ ಫಲಾನಿ ಸಿಧ್ಯೇರನ್ ।

**ಅತಃ ಸರ್ವೈರತ್ರ ಪ್ರವರ್ತಯಿತವ್ಯ ಮಿತ್ಯರ್ಥಃ । ಅಯಮಾಶಯಃ॥ [illegible]ಂತಿ ಸಪ್ತಕೋಟಿ ಮಹಾಮಂತ್ರಾಃ । ಸಂತಿ [illegible] ತತ್ಪ್ರತಿಪಾದ್ಯಾ ದೇವತಾ ಸ್ತಾವತ್ಯಃ । ಸಂತಿ ಚ [illegible] ತದಾರಾಧನಾನಿ । ಅಪೇಕ್ಷಿತಾಶ್ಚ ತದನುಗುಣಾಲಯ ನಿರ್ಮಾಣಾದಾಯೋಽರ್ಥಾಃ ಯೈರಖಿಲ ಫಲಾನಿ ಸಿಧ್ಯೇಯುಃ । ತೇ ಚಾರ್ಥಾಃ ಶಿಲ್ಪಸಾಧ್ಯಾ ಇತಿ ಶಿಲ್ಪಮಾರಚಯನ್ ಯತ್ರ ತೃಪ್ಯತಿ ತಾಂ ತಾಂ ದೇವತಾಮುಪಾಸೀತೇತಿ ಸರ್ವಫಲಕತಾ ಶಿಲ್ಪಸ್ಯೇತಿ । ಯೇ ಪುನರ್ಮಂದಾಃ ನ ಸಮಾಧಾತುಂ ಮನಃ ಪ್ರಭಾವಂತಿ ತಾನಪಿ ಯುಕ್ತ್ಯಾ ಪ್ರವರ್ತಯತಿ ।**

ಪೂರ್ವಿಕವಾದವರು ಹೀಗೆ ಹೇಳುತ್ತಾರೆ-- ಸಾಂಬನೆಂದು ಹೆಸರುಳ್ಳ ವಿಶ್ವಬ್ರಹ್ಮ ಮೂರ್ತಿಯು ಶಿಲ್ಪದಿಂದಲೇ ಸಂತೋಷಪಡಿಸಲ್ಪಟ್ಟಿದ್ದಾನೆ. ಶಿಲ್ಪ ಯಜ್ಞದ ಅನುಷ್ಠಾನದಲ್ಲಿ ಶಿಷ್ಟಾಚಾರವು ಕಾರಣವೆಂದು ಸ್ಪಷ್ಟವಾಗಿ ತಿಳಿಯುವುದು. ವೇದವು ಫಲಾಪೇಕ್ಷೆ ಇರುವವನ ಇಚ್ಛೆಯನ್ನು ಅವನು ಬಯಸುವ ವಿಶೇಷ ಫಲವನ್ನು ನಿರ್ದೇಶಿಸಿ ಅದರಲ್ಲಿ ಪ್ರವೃತ್ತಿಯುಂಟಾಗುವಂತೆ ಬೋಧಿಸುತ್ತದೆ. ನಿಶ್ಶ್ರೇಯಸ್ಸನ್ನು ಹೊಂದುವ ನಿಮಿತ್ತವಾಗಿ ಯಜ್ಞವನ್ನು ಆಚರಿಸಿ ಇದರಿಂದ ದೇವತಾ ತೃಪ್ತಿಯುಂಟಾಗುತ್ತದೆ ಎಂಬುದೇ ಈ ವಾಕ್ಯದ ಅರ್ಥವಾಗಿರುತ್ತದೆ. ಶಿಲ್ಪವೆಂಬ ಯಜ್ಞಾಚರಣೆಯಿಂದ ಮೋಕ್ಷವೆಂಬ ಫಲವು ಮಾತ್ರವೇ ಸಿದ್ಧವಾಗುವುದಿಲ್ಲ. ಅನಿತ್ಯವಾದ ಹಲವು ಇತರ ಫಲಗಳೂ ಸಿದ್ಧವಾಗುತ್ತವೆ. [illegible] ಕಾರಣದಿಂದಲೇ ಎಲ್ಲರೂ ಶಿಲ್ಪ ಯಜ್ಞಾ[illegible]ಯಲ್ಲಿ ಪ್ರವೃತ್ತರಾಗತಕ್ಕದ್ದು ಎಂಬ ಅರ್ಥವು ಹೇಳಲ್ಪಟ್ಟಿರುತ್ತದೆ.

ಏಳು ಕೋಟಿ ಮಹಾಮಂತ್ರಗಳ್ಳೀರುವುವು. ಆಯಾಯ ಮಂತ್ರಗಳಿಂದ ಪ್ರತಿಪಾದ್ಯವಾಗಿರುವ ದೇವತೆಗಳೂ ಅಷ್ಟು ಸಂಖ್ಯೆಯುಳ್ಳವಾಗಿರಾಗಿಯೇ ಇರುತ್ತಾರೆ. ಆಯಾ ಮಂತ್ರ ಪ್ರತಿಪಾದ್ಯ ದೇವತಾನುಗುಣವಾದ ಆರಾಧನಾ ಕ್ರಮಗಳೂ ಪ್ರತ್ಯೇಕವಾಗಿ ಹೇಳಲ್ಪಟ್ಟಿವೆ. ಆಯಾ ದೇವತಾರಾಧನೆಯ ಅನುಗುಣವಾಗಿ ದೇವಾಲಯ ನಿರ್ಮಾಣ, ಮೊದಲಾದವುಗಳು ಎಲ್ಲಾ ವಿಧವಾದ

ಫಲಸಿದ್ಧಿಗಾಗಿಯೇ ನಡೆಸುವುದು ಅಪೇಕ್ಷಿತವಾಗಿರುತ್ತದೆ. ಹೀಗೆ ಸಿದ್ಧಿಯನ್ನುಂಟುಮಾಡುವ ವಸ್ತು ನಿರ್ಮಾಣಾದಿಗಳು ಶಿಲ್ಪದಿಂದಲೇ ಸಾಧ್ಯವಾಗುತ್ತವೆ. ಆದ್ದರಿಂದ ದೇವತೆಗಳಿಗೆ ತೃಪ್ತಿ, ಸಂತೋಷವನ್ನು ಉಂಟುಮಾಡುವ ಶಿಲ್ಪವನ್ನು ಮಾಡುವುದೂ ಕೂಡ ಆಯಾ ದೇವತೋಪಾಸನೆಯೇ ಆಗಿರುತ್ತದೆ. ಆದ್ದರಿಂದ ಶಿಲ್ಪವು ಸರ್ವವಿಧವಾದ ಫಲಗಳನ್ನು ಉಂಟುಮಾಡುತ್ತದೆ ಎಂದು ನಿರ್ದೇಶಿಸಲಾಗಿದೆ.

## ಭವತಿ ಚ ತನ್ನಾನಾವಿಧ ಶಿಲ್ಪಬಹುಳಂ ।೫೨

**ಭವತಿ....ಬಹುಳಮಿತಿ । ನಾನಾವಿಧ ಶಿಲ್ಪರೂಪಂ ಬಹುಫಲದಮಿತಿ ತದರ್ಥಃ । ನ [illegible] ಕೌಶಲಾ ಭಾವಾನ್ಮಂದಾ ಪ್ರವೃತ್ತಿರುಕ್ತಾ । ತತಶ್ಚ ಕೌಶಲಮೇವ ಸಾಧನೀಯ ಮಿತಿ ಚೇತ್ ಸೋಽಪಿ ಭಾವೋಽಸ್ಯಾಃ ಶ್ರುತೇರಿತಿ ವದಾಮಃ । ಕೋಽಸೌಭಾವಃ ? ಅಯಂ ಭಾವಃ । ಭಗವತಃ ಸಾಂಬಸ್ಯಾಜ್ಞೇಯಮಿತಿ ಪ್ರವೃತ್ತ್ಯಾ ಭಕ್ತ್ಯಾ ತೇಷಾಮಪಿ ಮಹತ್ಕೌಶಲಂ ಭವೇದಿತಿ। ಬಹುಫಲಂ ದಾತಿ ದದಾತೀತಿ ಬಹುಫಲದತ್ವಯೋಗಾತ್ ಕೌಶಲಂ ತದರ್ಥಃ । ನನು ಸರ್ವಫಲ–ಪ್ರದಂ ಶಿಲ್ಪಂ ನ ಭವತಿ। ಬಹುದಿನಸಾಧ್ಯ ಸತ್ರಯಾಗ ಜನ್ಯ ಫಲಾನಾಂ ಶಿಲ್ಪಾನ್ನಿಷ್ಪತ್ತ್ಯಸಂಭವಾತ್ ಇತಿ ಶಂಕಾಂ ತತ್ತಾದೃಶಫಲಕತ್ವ ಬೋಧೇನ ಪರಿಹರತಿ ।**

ಮಂದಮತಿಗಳು ಮನಸ್ಸನ್ನು ಏಕಾಗ್ರಗೊಳಿಸಲು ಅಶಕ್ತರಾಗಿರುತ್ತಾರೆ. ಅಂತಹವರನ್ನೂ ಕೂಡ ಶಿಲ್ಪವು ತನ್ನ ಸೌಂದರ್ಯ, ಆಕರ್ಷಣೆಗಳಿಂದ ತನ್ನತ್ತ ಆಕರ್ಷಿಸಿ ಆಸಕ್ತರನ್ನಾಗಿಮಾಡುತ್ತದೆ. [illegible] ರೀತಿ ತುಂಬಾ ಯುಕ್ತಿವಂತವಾಗಿ ಆಕರ್ಷಿಸಿ ಅವರ ಮನಸ್ಸು ತನ್ನಲ್ಲಿ ಏಕಾಗ್ರಗೊಳ್ಳುವಂತೆ ಶಿಲ್ಪವು ಮಾಡುತ್ತದೆ. ಆದ್ದರಿಂದಲೇ **ಭವತಿ ಚ ತನ್ನಾನಾವಿಧ ಶಿಲ್ಪ** ಬಹುಳಂ ಎಂಬ ಸೂತ್ರವು ರೂಪುಗೊಂಡಿದೆ. ಬಹುವಿಧವಾಗಿರುವ ಶಿಲ್ಪಜ್ಞಾನ ರೂಪವಾದ ಕೌಶಲವು [illegible] ಫಲವನ್ನು ಕೊಡುವುದಾಗಿರುತ್ತದೆ ಎಂಬುದಾಗಿ ಈ ಸೂತ್ರದ ಅರ್ಥ. ಶಿಲ್ಪ ಕೌಶಲವು ಇಲ್ಲದಿದ್ದಲ್ಲಿ ಶಿಲ್ಪಕಾರ್ಯದಲ್ಲಿ ಆವನ

ಪ್ರವೃತ್ತಿಯು ಮಂದವಾಗಿರುತ್ತದೆ. [illegible] ಕಾರಣದಿಂದ ಶಿಲ್ಪದ ವಿಷಯದಲ್ಲಿ ಕೌಶಲ್ಯವನ್ನು ಸಾಧಿಸಬೇಕು. ಆ ಕುಶಲತೆಯು ಬಹಳ ವಿಧವಾದ ಫಲವನ್ನು ಕೊಡುವುದು ಎಂಬುದು ಈ ಶ್ರುತಿಯ ಅರ್ಥವಾಗಿದೆ. ಬುದ್ಧಿ ಮಾಂದ್ಯವಿರುವವರಿಗೆ ಪೂಜ್ಯವಾದ ಭಗವಂತನನ್ನು ಅರಿಯಬೇಕೆಂಬ ಬಯಕೆ ಉಂಟಾದಾಗ ಸಾಂಬನ ವಿಷಯದಲ್ಲಿ ಭಕ್ತಿಯುಂಟಾಗುತ್ತದೆ. ಆಗ ಅವರಿಗೂ ಕೂಡ ಕುಶಲತೆಯು ಹೆಚ್ಚಾಗುತ್ತದೆ. ಈ ಕೌಶಲ್ಯದ ಫಲವು ಬಹುಳವಾಗಿರುವುದಾಗಿ ಹೇಳಿರುವುದರಿಂದ ಕುಶಲತೆಯು ಶಿಲ್ಪಜ್ಞಾನದ ವಿಷಯದಲ್ಲಿ ಅವಶ್ಯಕವಾಗಿರುವುದು.

**ಶಿಲ್ಪಾದೃತೇ ಕಿಂಚಿತ್ಸತ್ರಮಿತಿ ನೋಚ್ಯತೇ ನೋಚ್ಯತ ಇತಿ ।೫೪**

**ಶಿಲ್ಪಾದೃತ ಇತಿ । ಸತ್ರಮಪಿ ಶಿಲ್ಪಾನ್ನ್ಯೂನಮಿತಿ ಕೈಮುತಿಕನ್ಯಾಯಾದಃ ಪ್ರಕೃತಾರ್ಥ ಸ್ಥಾಪನಾಯ। ನನು ಸರ್ವಂ ಫಲಂ ಜನಯತಿ ಶಿಲ್ಪಮಿತಿ ಸರ್ವಶಬ್ದೋऽನೇಕಾರ್ಥಃ। ಸರ್ವೋತ್ಕೃಷ್ಟ ಫಲ ಸಾಧನಾನ್ಯನ್ಯಾನ್ಯೇವ ಕರ್ಮಾಣಿ ನ ಚ ಸತಾ ಧಿಕತಾವಾದೇನಾಪಿ ಪ್ರಶಸ್ತ ಫಲಕತಗಾಮಿತಾ ಭವತೀತಿ ಯೇ ಮನ್ಯಮಾನಾ ಉದಾಸನೇ ತಾನಪಿ [illegible] ಪ್ರಶಸ್ತ ಫಲಜನಕ ತಾ ಬೋಧನ ಮುಖೇನ ಪ್ರವರ್ತಯತ ಶ್ರುತಿಃ।**

ಬಹಳ ದಿನಗಳವರೆವಿಗೂ ಆಚರಿಸುವ ಸತ್ರಯಾಗದ ಫಲವೂ [illegible] ಈ ಶಿಲ್ಪಜ್ಞಾನದಲ್ಲಿರುವ ಕುಶಲತೆಯಿಂದ ಉಂಟಾಗುವುದರಿಂದ ಶಿಲ್ಪಜ್ಞಾನವು ಸರ್ವವಿಧವಾದ ಸಕಲಫಲಗಳನ್ನೂ ಕೊಡುತ್ತದೆ. ಇದೇ ಅಭಿಪ್ರಾಯವನ್ನೂ **ಶಿಲ್ಪಾದೃತೇ ಕಿಂಚಿತ್ ಸತ್ರಂ ನೋಚ್ಯತೆ, ನೋಚ್ಯತೆ** ಎಂಬ ಸೂತ್ರವು ಪಠಿತಗೊಂಡಿದೆ. ಸೂತ್ರದಲ್ಲಿ ನೋಚ್ಯತೆ ಎಂಬುದನ್ನು ಎರಡು ಬಾರಿ ಹೇಳಿರುವುದರ ಕಾರಣವು ಹೆಚ್ಚು ಗೌರವವನ್ನು ತೋರಿಸಬೇಕು ಮತ್ತು ಇದು ನಿಖರವಾದ ಸತ್ಯವಾಕ್ಯ ಎಂದು ಒತ್ತಿ ಹೇಳುವುದೇ ಆಗಿದೆ. ಸತ್ರಯಾಗವೆಂಬುದು ಬಹು ದಿನಗಳ ಶ್ರಮ, ಧನ ಮತ್ತು ಶ್ರದ್ಧೆ

ಗಳಿಂದ ಸತ್ರವೇ ನಡೆಸಲು ಸಾಧ್ಯವಾಗಿರುವಂತಹುದು. ಇದನ್ನು ನಡೆಸಿದಾಗ ನಿರ್ದಿಷ್ಟವಾದ ಫಲ ಮಾತ್ರವೇ ದೊರೆಯುತ್ತದೆ. ಶಿಲ್ಪ ಜ್ಞಾನ ಕೌಶಲ್ಯವನ್ನು ಪಡೆದವನು ಸಕಲಫಲಗಳನ್ನೂ ಪಡೆಯುತ್ತಾನೆ. ಆದ್ದರಿಂದ ಕೈಮುತಿಕ ನ್ಯಾಯದಿಂದ ಶಿಲ್ಪ ಜ್ಞಾನವು ಸತ್ರಯಾಗಕ್ಕಿಂತಲೂ ಹೆಚ್ಚಾದದ್ದು ಎಂದು ತಿಳಿಯಬೇಕು. ಈ ರೀತಿ ಶಿಲ್ಪಜ್ಞಾನ ಕೌಶಲದಿಂದ ಲಭಿಸುವ ಫಲವು ಸತ್ರಯಾಗದ ಫಲಕ್ಕಿಂತಲೂ ತೀರಾ ಹೆಚ್ಚಾದದ್ದು. ಆದುದರಿಂದ ಸತ್ರಯಾಗವನ್ನು ಶಿಲ್ಪದೊಂದಿಗೆ ಹೋಲಿಸುವುದು ಸಾಧ್ಯವಾಗುವುದಿಲ್ಲ.

ಶಿಲ್ಪಜ್ಞಾನವು ಸರ್ವಫಲದಾಯಿನಿ ಎಂಬುದರಿಂದ **ಸರ್ವ** ಎಂಬ ಶಬ್ದಕ್ಕೆ ಇಲ್ಲಿ ಅನೇಕಾರ್ಥವು ಇದೆ. ಶಿಲ್ಪ ಜ್ಞಾನದಿಂದ ನಿರ್ಮಿಸಲ್ಪಟ್ಟವು ಇತರ ಎಲ್ಲಕ್ಕಿಂತಲೂ ಉತ್ಕೃಷ್ಟವಾದ ಫಲಗಳನ್ನು ದೊರಕಿಸಿಕೊಡುತ್ತವೆ. [redacted] ಶಿಲ್ಪ ಜ್ಞಾನವು ಸತ್ರಯಾಗಕ್ಕಿಂತಲೂ ಅಧಿಕವಾದುದೆಂದು ಅದರ ಫಲಕ್ಕಿಂತಲೂ ಹೆಚ್ಚು ಪ್ರಾಶಸ್ತವಾದ ಫಲವನ್ನು ಇದು ನೀಡುವುದೆಂದು ಹೇಳಿದರೂ ಕೆಲವರು ಇದನ್ನು ಆಚರಿಸುವುದರಲ್ಲಿ ಉದಾಸೀನರಾದರು. ಹೀಗೆ ಉದಾಸೀನತೆಯನ್ನು ಹೊಂದಿದವರಿಗೂ ಕೂಡ ಶಿಲ್ಪಜ್ಞಾನವು ಅತ್ಯಂತ ಪ್ರಾಶಸ್ತವಾದ ಫಲವನ್ನೇ ಕೊಡುವುದು. ಈ ಪ್ರಕಾರವಾದ ಜ್ಞಾನವನ್ನು ಉಂಟುಮಾಡುವುದರ ಮೂಲಕವಾಗಿ ಶಿಲ್ಪದಲ್ಲಿ ಅವರಿಗೆ ಪ್ರವೃತ್ತಿಯುಂಟಾಗುವಂತೆ ಮಾಡುವುದು ಎಂದು **ತತೋ ಅವಶ್ಯಂ ಜ್ಯೇಷ್ಠಾ** ಎಂಬ ಸೂತ್ರವು ಬೋಧಿಸುತ್ತದೆ.

**ತತೋಽವಶ್ಯಂ ವಿಸೃಜತ ವಿಸೃಜತೋಪಕರಣಾನಿ ಜ್ಯೇಷ್ಠಾಃ ।೫೪**

**ತತೋಽವಶ್ಯಂ ...ಜ್ಯೇಷ್ಠಾ ಇತಿ। ಜ್ಯೇಷ್ಠಾ = ಶ್ರೇಷ್ಠಾಃ ಪ್ರಶಸ್ತತಮಫಲವಂತೋ ಯದಿ ಭವಿತುಮಿಚ್ಛೇತ ಯೂಯಂ ತರ್ಹಿ ವಿವಿಧೋಪಕರಣಾನಿ ಪೂರ್ವವಾಕ್ಯೋಕ್ತ ನಾನಾ ವಿಧ ಶಿಲ್ಪಾನಿ ವಿಸೃಜತ ವಿಶಿಷ್ಟ ನಿಷ್ಪಾದಯತೇತ್ಯರ್ಥಃ। ನನು [redacted] ಪ್ರಶಸ್ತಂ ಫಲಂ ಮೋಕ್ಷಃ। ಸ ಚ ನಿಷ್ಕಾಮ್ಯೈರೇವ ಕರ್ಮಭಿಃ ಸಿಧ್ಯತಿ । ತಾನಿ [redacted] ನಿತ್ಯಾನಿ ನೈಮಿತ್ತಿಕಾನಿ ಚ। ತೈರೇವ ಹಿ ದುರಿತಾನಿ ಕ್ಷೀರಯೋರಣ್ ।**

**ಅಥ ಚಿತ್ತಂ ಪ್ರಸೀದತಿ, ಅಥ ವಿಜ್ಞಾನ ಮಾವಿರ್ಭವತಿ, ಅಥ ಮುಚ್ಯತೇ । ಅತೋऽತಿ ಪ್ರಶಸ್ತ ಫಲಜನಕತಾವಾದ ಉನ್ಮತ್ತ ಜಲ್ಪಿತಂ ಸ್ಯಾತ್ । ಅತಶ್ಚ ವಿಗುಣಾದ ಸಿದ್ಧಿರ್ನೋಕ್ಷಸ್ಯೇತಿ ಪ್ರಾಪ್ನೋತಿ, ನಿಷ್ಕಾಮತ್ವ ರೂಪಗುಣೋ ಹ್ಯೇಷು ನ ಸಮವೈತೀತಿ ಚೇನ್ನ । ಕಿಂ ಕಾರಣಂ ? ಯೋಗಾನುಗತೇಃ । ಕಾ ಸಾ ? ತಮಾಹ**

ಎಲೈ ಶ್ರೇಷ್ಠರಾದ ಮಹನೀಯರೇ ನಿಮಗೆ ಅತಿ ಪ್ರಶಸ್ತವಾದ ಫಲವು ದೊರೆಯಬೇಕೆಂಬ ಇಚ್ಛೆಯು ಇದ್ದರೆ ನೀವು ಅನೇಕ ವಿಧವಾದ ಸಾಮಗ್ರಿಗಳುಳ್ಳದ್ದಾಗಿರುವ ಮುಂದಿನ ವಾಕ್ಯದಲ್ಲಿ ಹೇಳಲಾಗಿರುವ ಬಹು ವಿಧವಾದ ಶಿಲ್ಪಗಳನ್ನು ಹೆಚ್ಚು ಹೆಚ್ಚಾಗಿ ನಿರ್ಮಾಣ ಮಾಡಿರಿ ಎಂಬುದು ಈ ಸೂತ್ರದ ಅರ್ಥವಾಗಿದೆ.

ಲೋಕದಲ್ಲಿ ಅತ್ಯಂತ ಪ್ರಶಸ್ತವಾದ ಫಲವೆಂದರೆ ಮೋಕ್ಷವೇ. ಇದಕ್ಕಿಂತಲೂ ಬೇರೆಯಾದ ಸಮಾನ ಅಥವಾ ಹೆಚ್ಚು ಪ್ರಶಸ್ತವಾದದು ಯಾವುದು ಇಲ್ಲ ಆದರೆ ಈ ಮೋಕ್ಷವು ನಿಷ್ಕಾಮ ಕರ್ಮಾಚರಣೆಯಿಂದಲೇ ಉಂಟಾಗುತ್ತದೆ. ನಿಷ್ಕಾಮ ಕರ್ಮಾಚರಣೆಯುಳ್ಳಿರುವವರು ಈ ಪ್ರಕಾರವಾಗಿ ಮೋಕ್ಷವನ್ನು ಹೊಂದುವವರು – ನಿತ್ಯ ಮತ್ತು ನೈಮಿತ್ತಿಕ ಕರ್ಮಗಳ ಆಚರಣೆಯಿಂದ ಪಾಪಗಳು ನಾಶವಾಗುತ್ತವೆ. ಅದರ ಮೂಲಕ ಚಿತ್ತ ಶುದ್ಧಿಯುಂಟಾಗುತ್ತದೆ. ಚಿತ್ತಶುದ್ಧಿಯ ನಂತರ ಚಿತ್ತದ ಏಕಾಗ್ರತೆಯು ಹೆಚ್ಚುತ್ತದೆ. ಇದರಿಂದ ವಿಶೇಷವಾದ ಜ್ಞಾನಉಂಟಾಗಿ ಮುಕ್ತಿಯು ಲಭಿಸುತ್ತದೆ. [illegible] ಕಾರಣದಿಂದಾಗಿ ನಿಷ್ಕಾಮ ಕರ್ಮದ ಆಚರಣೆಯು [illegible] ಶಿಲ್ಪ ಜ್ಞಾನದ ಅಭ್ಯಾಸದಿಂದ ಉಂಟಾಗುವುದಿಲ್ಲ. ನಿಷ್ಕಾಮ ಕರ್ಮಾಚರಣೆಯನ್ನು ಮಾಡುವುದರಿಂದ ಕರ್ಮದಲ್ಲಿ ವೈಗುಣ್ಯವುಂಟಾಗುವುದು. ಆದ್ದರಿಂದ ಶಿಲ್ಪ ಜ್ಞಾನವು [illegible] ಪ್ರಶಸ್ತವಾದುದೆಂದು ಹೇಳುವವರು ಹುಚ್ಚರು ಎಂದು ಕೆಲವರು ಅಭಿಪ್ರಾಯ ಪಡುವುದು ಉಂಟು.

**ಅಭ್ಯರ್ಚನೀಯೋऽಹಂ ಯಜ್ಞೇನೈವ ಲೋಕಸ್ಯ ತಾನ್ಯೇವಂ ವೇದೀ ಕುಂಡ ರಥ ಪಾತ್ರಾದೀನ್ಯಭ್ಯೂಹಯತ ।೫೬**

ಅಭ್ಯರ್ಚನೀಯೋऽಹಂ ಯಜ್ಞೇನೈವ ಲೋಕಸ್ಯ [redacted] । ಲೋಕಸ್ಯ ಫಲದರ್ಶಿನಃ [redacted] ಕಾಮಸ್ಯೇತಿ ಯಾವತ್। ಅಹಮಭ್ಯರ್ಚ-ನೀಯಃ ಏವೇತ್ಯನ್ವಯಃ। ಸ್ಯಾಮಿತಿ ಶೇಷಃ। ಕಮಸ್ಯಮರ್ಥಂ ವ್ಯಾವರ್ತ ಯತ್ಯೇವಕಾರಃ ? ಅರ್ಥನೀಯರೂಪಮರ್ಥಂ। ತತಶ್ಚ ನಿಷ್ಕಾಮ ಕರ್ಮಾನುಷ್ಠಾ[redacted] ರೂಪಸ್ಯ ಉಪಾಯಸ್ಯಾನು ಅನಂತರಂ ಗತಿಃ ಪ್ರಾಪ್ತಿರಿತಿ। ಅಯಮಭಿಸಂಧಿಃ। ಯೇ ಯೇ ಹೀಹಾತಿ ಶ್ರಮೇಣಾದಭ್ರಾಣಿ ಫಲಾನಿ ಸಂಪಾದ್ಯಾನುಭವನ್ತಿ ತೇ ತೇऽಪೀತ ವದಂತಿ – ಸರ್ವ ವ್ಯಾಪಾರ ವಿಮುಕ್ತಾಃ ಕದಾ [redacted] ಸುಖಿನೋ ಭವೇಮೇತಿ। ಏವಮೇವ ತತ್ತನ್ನಶ್ವರ ಫಲ ಭೋಕ್ತೃಭಿರ್ಭವಿತವ್ಯ[redacted] ತತಶ್ಚ ಸಕಾಮಾಃ ಶಿಲ್ಪಿನಃ ತಾದೃ[redacted] ಸುಖಂ ಗವೇಷೇರನ್। ತದನು ತದುಪಾಯಂ ಗವೇಷಮಾಣಾಶ್ಚ ಶಿಲ್ಪಶಾಸ್ತ್ರಂ ವಿಮೃ-ಶೇಯುಃ। ವಿಮೃಶ್ಯತಂತಶ್ಚ ನಿಷ್ಕಾಮ ಶಿಲ್ಪಾನುಷ್ಠಾನಂ ತದುಪಾಯಂ ಜಾನೀರನ್ ವಿಹಿತೋಪಾಯಾಶ್ಚ ಮೋಕ್ಷಮಶ್ನುವೀರನ್ [redacted]। ತದೇವಂ ಮೋಕ್ಷ ಪರ್ಯಂತಫಲ ಸಾಧನತ್ವಾದತಿ ಪ್ರಶಸ್ತಂ ಶಿಲ್ಪ ಮಿತಿ ಸರ್ವಸ್ಯಾಪಿ ರುಚಿರುತ್ಪಾದಿತಾ। ಪ್ರಕೃತಂ ಶಿಲ್ಪಮಾಚರತಾಂ ಯದಾ ನೂತ್ನ ನೂತ್ನಾನಿ ಗೃ[redacted] ದೇವಾಲಯಾದಿ ನಿರ್ಮಾಣಾನಿ ಕರ್ತವ್ಯತಯಾ ಆಪತನ್ತಿ ತೇಷಾಂ ಕರ್ತವ್ಯಾರ್ಥ ಜ್ಞಾನೋಪಾಯ ಮಾಹ। ತಾನ್ಯೇವಂ ಅಭ್ಯೂಹಯತ ಇತಿ। ಯಾನಿ ಕ್ವಚಿದ್ವಿಷಯೇ ವೇದಿಕುಂಡಾದೀನ್ಯುಪದಿಷ್ಟಾ[redacted] ತಾನಿ। ಏವಂ ಉಪದಿಷ್ಟ ಪ್ರಕಾರೇ-ಣೈವ ಅಭ್ಯೂಹಯತ, ಅನುಪದಿಷ್ಟ ವಿಷಯೇऽಪಿ ಊಹೇನ ಜಾನೀ ಧ್ವಮಿತ್ಯರ್ಥಃ। [redacted] ಕೇವಲಂ ಯುಷ್ಮಾಸ್ವೇವೈಷಾ ಶಿಲ್ಪವಿದ್ಯಾ ಲೀಯತಾಂ ಅಪಿ ತು ಸರ್ವತ್ರ ಪ್ರಚಾರ್ಯತಾಂ ಯುಷ್ಮಾಭಿರಿತ್ಯಾಹ।

ಸಕಾಮರಾಗಿ ಫಲಾಪೇಕ್ಷೆಗಳಿಂದ ಕೂಡಿರುವವರಿಂದ ತಾನು ಪೂಜೆ ಗೊಳ್ಳುವವನಾಗಿ ಸಾಂಬಮೂರ್ತಿಯೂ ತಿಳಿಸಿದ್ದಾನೆ. ಅಭ್ಯರ್ಚನೀಯೋऽ-ಹಂ ಯಜ್ಞೇನೈವ ಲೋಕಸ್ಯ ಎಂಬ ವಾಕ್ಯದಲ್ಲಿ ಏವಕಾರವು ಇದೆ. [redacted] ಕಾರದಿಂದ ಕೋರಿದ ಬಯಕೆಯು ಪೂರೈಕೆಗೊಂಡನಂತರ ನಿಷ್ಕಾಮ ಕರ್ಮ

ಚರಣೆಯತ್ತ ವ್ಯಕ್ತಿಯು ಆಕರ್ಷಿತನಾಗುತ್ತಾನೆ. ಹೆಚ್ಚಿನ ಶ್ರಮಸಾಧ್ಯವಾದ ಕರ್ಮಗಳನ್ನು ಆಚರಿಸಿ ಅವುಗಳ ಫಲಗಳನ್ನು ಅನುಭವಿಸುವವನು. ಹೀಗೆ ಸಕಾಮರಾಗಿ ಕರ್ಮಾಚರಣೆ ಮಾಡುವವರೆಲ್ಲರಿಗೂ 'ನಾವು [redacted] ಎಲ್ಲಾ ಕಾರ್ಯಗಳಿಂದ ವಿಶ್ರಾಂತಿಯನ್ನು ಹೊಂದಿ ಯಾವಾಗ ಸುಖವಾಗಿ ಇರುವೆವು' ಎಂಬ ಇಚ್ಛೆ ಉಂಟಾಗುತ್ತದೆ.

ಇದೇ ರೀತಿಯಲ್ಲಿ ಶಿಲ್ಪಿಗಳೂ ಕೂಡ ಸಕಾಮರಾಗಿ ಫಲಾಪೇಕ್ಷೆಯಿಂದಲೇ ಕರ್ಮಗಳನ್ನು ಆಚರಿಸುತ್ತಾರೆ. ನಂತರದಲ್ಲಿ ನಶ್ವರವಾದ ಫಲಾನುಭವದಿಂದ ವೈರಾಗ್ಯ ಉಂಟಾಗಿ ನಿಷ್ಕಾಮ ಕರ್ಮಾಚರಣೆಯಿಂದ ಉಂಟಾಗುವ ಫಲವನ್ನು ಹೊಂದಲು ಪ್ರಯತ್ನ ಪಡುತ್ತಾರೆ. ಆಗ ಇವರಿಗೆ ನಿಷ್ಕಾಮ ಶಿಲ್ಪಾಚರಣೆಯ ಮಹತ್ವವು ಅವಗತವಾಗುತ್ತದೆ. ಈ ನಿಷ್ಕಾಮ ಶಿಲ್ಪಾಚರಣೆಯ ಜ್ಞಾನವು [redacted] ಪ್ರಶಸ್ತ ಫಲವಾದ ಮೋಕ್ಷಕ್ಕೆ ಉಪಾಯವೆಂದು ತಿಳಿದು ಅದನ್ನು ಆಚರಿಸಿ ಮೋಕ್ಷವನ್ನು ಹೊಂದುವರು. ಹೀಗೆ ಮೋಕ್ಷದಂತಹ ಪ್ರಶಸ್ತವಾದ ಫಲವನ್ನು ಸಾಧಿಸುವ ಶಿಲ್ಪಾಚರಣೆಯು ಅತಿ ಪ್ರಶಸ್ತವಾಗಿರುವುದೆಂದು ಎಲ್ಲರಿಗೂ ಈ ಶಾಸ್ತ್ರದಲ್ಲಿ ಹೆಚ್ಚಿನ ಶ್ರದ್ಧೆ ಮತ್ತು ಗೌರವಗಳು ಹಾಗೂ ಆಸಕ್ತಿ ಉಂಟಾಗುವಂತೆ ಈ ಸೂತ್ರವು ಶಿಲ್ಪದಲ್ಲಿ ಅಭಿರುಚಿಗಳನ್ನು ಮೂಡಿಸುತ್ತದೆ.

ಶಿಲ್ಪ ಕಾರ್ಯಗಳನ್ನು ಆಚರಿಸುವವರಿಗೆ ಹೊಸಹೊಸದಾದ ಗೃಹ, ದೇವಾಲಯ ಮೊದಲಾದವುಗಳ ನಿರ್ಮಾಣವು ಅವಶ್ಯಕ ಕರ್ತವ್ಯ ವಾಗಿರುತ್ತದೆ. ಆಯಾಯ ರಚನಾನುಕೂಲವಾಗಿ ಶಿಲ್ಪಗಳನ್ನು ಊಹಿಸಿ ಆಚರಿಸುವುದು, ಕರ್ತವ್ಯಾರ್ಥ ಸಿದ್ಧಿಯನ್ನು ಸಾಧಿಸುವ ಜ್ಞಾನೋಪಾಯ ವಾಗಿರುತ್ತದೆ. [redacted] ವಿಷಯನನ್ನೇ '**ಶಾನ್ಯೇವಂ ಅಭ್ಯೂಹಯೇತ ಇತಿ**' ಎಂದು ಸೂತ್ರವು ಇದೇ ವಿಷಯವನ್ನು ಬೋಧಿಸುತ್ತದೆ. ವೇದಿ, ಕುಂಡ, ಮೊದಲಾದ ವಿಷಯಗಳು ಉಪದಿಷ್ಟವಾಗಿರುವುವು. ಅದರಂತೆಯೇ ಇತರ ವಸ್ತುಗಳ ನಿರ್ಮಾಣ ಕ್ರಮವನ್ನೂ ಸಹ ಶಿಲ್ಪ ಶಾಸ್ತ್ರಗಳಲ್ಲಿ ಉಕ್ತವಾಗಿರುವ ಕ್ರಮ ಗಳನ್ನು ಅನುಸರಿಸಿ ಕಾರ್ಯಗಳಿಗೆ ಅನುಸಾರವಾಗಿ ಕಲ್ಪನಾ ಸಾಮರ್ಥ್ಯದಿಂದ ತಿಳಿದು ಆಯಾಯ ರಚನೆಗಳನ್ನು ಮಾಡಬೇಕು.

**ಕಾರಯತಾಧ್ವರಾನ್ ಸರ್ವೈರಪಿ ಲೋಕೈರನುಶ್ರುತ ಮಿತಿ |೫೬**

**ಕಾರಯ... ಲೋಕೈರೀತಿ । ಅಧ್ವರಾನ್ ಯಜ್ಞಾನ್ ಶಿಲ್ಪ ರೂಪಾನ್ ಸರ್ವೈರಪಿ ಲೋಕೈಃ ಕಾರಯತ ಇತ್ಯನ್ವಯಃ। ಏವಂ ಪ್ರವರ್ತಮಾನಾನಾಂ ಶಿಷ್ಯಾಣಾಂ ಪ್ರಮಾದಿಕಂ ಯಥೇಚ್ಛಾಚರಣಂ ನಿರುಣದ್ಧಿ । ಅನುಶ್ರುತಮಿತಿ। ಶಿಲ್ಪಶ್ರುತಿಮನುಸ್ಮೃತ್ಯೇತ್ಯರ್ಥಃ ಶ್ರುತ್ಯನುಸರಣ ಪ್ರಕಾರಂ ದರ್ಶಯತಿ।**

ಶಿಲ್ಪವಿದ್ಯೆಯನ್ನು ನೀವು ಚೆನ್ನಾಗಿ ಅಧ್ಯಯನ ಮಾಡಿ ಅರಿತುಕೊಂಡು ಯಾರಿಗೂ ಉಪದೇಶ ಮಾಡದೆ ಇರಬೇಕೆಂದು ಈ ಶಾಸ್ತ್ರವು ಹೇಳುವುದಿಲ್ಲ. ಇದನ್ನು ಎಲ್ಲರಿಗೂ ತಿಳಿಯುವ ಹಾಗೆ ಪ್ರಚಾರವನ್ನು ಮಾಡಿ ಎಂದು ಬೋಧಿಸುವುದಕ್ಕಾಗಿಯೇ **ಕಾರಯತಾಮಧ್ವರಾನ್** ಎಂಬ ಸೂತ್ರವನ್ನು ಹೇಳಲಾಗಿದೆ. ಶಿಲ್ಪರೂಪವಾದ ಯಜ್ಞಗಳನ್ನೂ ಎಲ್ಲರೂ ಆಚರಿಸುವಂತೆ ನೀವು ಮಾಡಿರಿ ಎಂಬುದು ಈ ಸೂತ್ರದ ಅಭಿಪ್ರಾಯ. ಆದರೆ ಶಿಷ್ಯರು ಮನಸ್ಸು ಬಂದ ಹಾಗೆ ಶಿಲ್ಪಶಾಸ್ತ್ರವನ್ನು ಪ್ರಚಾರ ಮಾಡುವಾಗ ಯಥೇಚ್ಛಾ ಚರಣೆಯು ಸರಿಯಾದದ್ದಲ್ಲವೆಂದು ಅದನ್ನು ವಿರೋಧಿಸುವುದು ಉತ್ತಮ ವಾಗಿರುತ್ತದೆ. ಶಿಲ್ಪಶಾಸ್ತ್ರವನ್ನು ಅನುಸರಿಸಿ ಕರ್ತವ್ಯ ಕರ್ಮಾನುಸಾರವಾದ ಕಲ್ಪನೆಗಳನ್ನು ಊಹಿಸುವ ಕ್ರಮವನ್ನು ಅನುಸರಿಸಿ ಶಿಲ್ಪವನ್ನು ಪ್ರಚಾರ ಮಾಡುವುದು ಪ್ರಮಾದಕರವಾದುದಲ್ಲ.

**ಏಕೈಕಸ್ಯೈಕೈಕೋಽಧ್ಯಕ್ಷ ಇತಿ ವೇದಸ್ಯ |೫೭**

**ತತ್ರಾಥರ್ವಣಾಶ್ಶಿಲ್ಪ ಭೂಯಿಷ್ಠಾಮತ್ಯಂತಂ |೫೮**

**ಮನ್ತ್ರೇಣೈವ ಸ್ವರೂಪಾಣಿ ಪ್ರಕರ್ತವ್ಯಾನಿ |೫೯**

**ಧ್ಯಾನೇನೈವ ಪಶ್ಯಂತಿ ತದ್ರೂಪಂ |೬೦**

**ರೂಪೇಣೈವಧ್ಯಾಯನ್ತೇತದ್ದೇವತಂ |೬೧**

**ರೂಪಮೇವ ತಚ್ಛಿಲ್ಪಂ |೬೨**

ಏಕೈಕಸ್ಯೇತ್ಯಾದಿನಾ । ಏಕೈಕಸ್ಯ ವೇದಸ್ಯೈಕೈಕೋಽರ್ಥಃ ಇತಿ । ವೇದನೀಯಮಿತಿ ಶೇಷಃ । ತತ್ರ ಶಾದ್ಯತವೇದ ಘಟಕಾರ್ಥ ವೇದಸ್ಯ ಪ್ರತಿಪಾದ್ಯಂ ವಸ್ತು ಶಿಲ್ಪ ಭೂಯಿಷ್ಠಂ ಭವತೀತ್ಯರ್ಥಃ । ನ ಕೇವಲಂ ಕ್ವಚಿದೇವ ಅಪಿ ತು ಅಂತಮಿತೀತ್ಯಾಪಿ ಸಮಾಪ್ತಿ ಪರ್ಯಂತ ಮಿತ್ಯರ್ಥಃ । ಯಾನಿ ಆರಾಧನೀಯಾನಿ ದೈವತಾನಿ ತೇಷಾಂ ಸ್ವರೂಪಾಣಿ ಮನ್ತ್ರೋಪದಿಷ್ಟ ರೂಪಾಣ್ಯೇವಾವಗಂತವ್ಯಾನಿ । ಯೇ ಪುನರ್ಮನನಯಸ್ತೆ ತು ಧ್ಯಾನೇನೈವ ತದ್ರೂಪಂ ಪಶ್ಯಂತಿ । ರೂಪೇಣೈವ ಧ್ಯಾಯಂತೇ ತದ್ರೂಪಮಿತಿ ಪೂರ್ವೋಕ್ತ ಧ್ಯಾನ ಸಾಧನ ದೈವತ ದರ್ಶನೇ ಹೇತುಃ । ಸಾಕಾರ ಧ್ಯಾನಾದಿತಿ ತದರ್ಥಃ । ಉಕ್ತಸ್ಯ ರೂಪವತ್ತ್ವಸ್ಯ ಪ್ರಕೃತೋಪಯೋಗಂ ದರ್ಶಯತಿ । ರೂಪಮೇವ ತಚ್ಛಿಲ್ಪಮಿತಿ । ಯದೇತದ್ದೈವತ ರೂಪಂ ತಚ್ಛಿಲ್ಪ ನಿಷ್ಪಾದ್ಯ ಮಿತ್ಯರ್ಥಃ । ನಿಷ್ಪಾದನೀಯ ದೇವತಾ ಕಾರೋಪಾದಾನಕಾರಣಾ ನ್ಯಾಹ ।

ಒಂದೊಂದು ವೇದದಲ್ಲಿ ತಿಳಿಯಬೇಕಾದ ಜ್ಞಾನವು ಒಂದೊಂದು ವಿಧವಾಗಿ ಇರುವಂತೆ ಶ್ರುತ್ಯನುಸಾರವಾಗಿ ಒಂದೊಂದು ವೇದದಲ್ಲಿ ಒಂದು ಉದ್ದೇಶ ಮತ್ತು ಅರ್ಥ ಒಳಗೊಂಡಿರುವುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಆದ್ದರಿಂದ ಒಂದೊಂದು ವೇದದಿಂದ ಅರಿಯಬೇಕಾಗಿರುವ ಜ್ಞಾನವು ವಿಶೇಷವಾದುದಾಗಿರುವಂತೆಯೇ ಅಥರ್ವಣ ವೇದದಿಂದ ತಿಳಿಯಬೇಕಾಗಿರುವ ಶಿಲ್ಪ ಜ್ಞಾನವು ಬಹುಳವಾಗಿರುವುದು. ಅಥರ್ವಣ ವೇದವು 'ಶಿಲ್ಪಭೂಯಿಷ್ಠ' ವಾಗಿದೆ ಎನ್ನಲಾಗುತ್ತದೆ. ಏಕೆಂದರೆ ಅದರಲ್ಲಿ ಅನೇಕ ಶಿಲ್ಪವಿದ್ಯಾರಹಸ್ಯಗಳನ್ನು ತತ್ತ್ವಗಳನ್ನು ಬೋಧಿಸಲಾಗಿದೆ. ಇಲ್ಲಿ ಹೇಳದೆ ಇರುವ ಹಲವು ತತ್ತ್ವಗಳು ಇತರ ವೇದಗಳಲ್ಲೂ ಹೇಳಲ್ಪಟ್ಟವೆ. ಆದರೆ ಅಥರ್ವಣವೇದವು ಉಪಕ್ರಮದಿಂದ ಸಮಾಪ್ತಿ ಪರ್ಯಂತವಾಗಿ ಶಿಲ್ಪಜ್ಞಾನದ ವಿಷಯವಾದ ವಸ್ತುವು ಹೆಚ್ಚಾಗಿ ಬೋಧಿತವಾಗಿದೆ. ಅಥರ್ವವೇದದ ದ್ರಷ್ಟಾರ ಋಷಿಗಳಾಗಿರುವ ಅಥರ್ವ, ಅಂಗೀರಸ ಋಷಿಗಳೂ ವಿಶ್ವಬ್ರಾಹ್ಮಣ ಸಂಪ್ರದಾಯಿಕ ಶಿಲ್ಪ

ಪರಂಪರೆಯ ಪ್ರವರ್ತಕರು. ಆದ್ದರಿಂದಲೂ ಶಿಲ್ಪ ಸಂಪ್ರದಾಯದ ಅನೇಕ ರಹಸ್ಯಗಳು ಇಲ್ಲಿ ಹುದುಗಿವೆ.

ಪೂಜೆಯನ್ನು ಮಾಡುವ ದೇವತಾ ಸ್ವರೂಪಗಳು ಮಂತ್ರಗಳಲ್ಲಿ ಹೇಳಿರುವ ಕ್ರಮಕ್ಕೆ ಅನುಸಾರವಾಗಿ ಇರುವವುವೆಂದು ತಿಳಿಯಬೇಕಾಗಿರುತ್ತದೆ. ಮುನಿಗಳು ಮಂತ್ರದಲ್ಲಿ ಉಪದಿಷ್ಟವಾಗಿರುವ ಆಕಾರವನ್ನು ಧ್ಯಾನದಿಂದ ಸಾಕ್ಷಾತ್ಕಾರಗೊಳಿಸಿಕೊಳ್ಳುತ್ತಿದ್ದಾರೆ. ಮಂತ್ರೋಕ್ತವಾದ ದೇವತಾ ರೂಪವನ್ನು ಅನುಸರಿಸಿ ರೂಪವನ್ನು ನಿರ್ಮಿಸಿಕೊಂಡು ಅದರ ನೆರವಿನಿಂದಲೂ ಧ್ಯಾನವನ್ನು ಮಾಡಲಾಗುತ್ತದೆ. **ತದ್ರೂಪಂ** ಎಂಬ ಪದಕ್ಕೆ ಈ ಮೊದಲು ವಿವರಿಸಿರುವಂತೆ ಧ್ಯಾನ ಸಾಧನವಾದ ದೇವತಾ ಸ್ವರೂಪವೆಂದು ಅರ್ಥ ಮಾಡಬೇಕು. ಆದ್ದರಿಂದ **ಧ್ಯಾನ** ಎಂದರೆ **ಸಾಕಾರ ಧ್ಯಾನ** ಎಂಬುದೇ ಇಲ್ಲಿಯ ನಿಹಿತಾರ್ಥ. ಸಾಕಾರವಾದ ದೇವತಾರೂಪ ನಿರ್ಮಾಣವೇ ಶಿಲ್ಪ. ಶಿಲ್ಪವೆಂದರೆ ದೇವತೆಯ ರೂಪವು ಶಿಲ್ಪದ ಮುಖಾಂತರ ನಿಷ್ಪನ್ನವಾಗುವಂತಹುದು.

ತಾನ್ಯಯೋದಾರು ಶಿಲಾ ತಾಮ್ರ ಹಿರಣ್ಯ ವಿಕಾರಾಣಿ ।೬೩ ಮೃಣಾದೀನ್ಯಥವಾನಿ ।೬೪
ಯದ್ಯಸ್ಯೋಕ್ತಂ ತದ್ವಿಕಾರಂ ತಸ್ಯ ।೬೫
ಆಯಿತನವಂತಿ ವೈ ಸರ್ವಾಣ್ಯಪಿ ದೈವತಾನೀ ।೬೬
ಏವ ಮೇವಾ ಪರಾಣ್ಯಪಿ ಶಿಲ್ಪವಿಲಸಿತಾನಿ ಕರ್ಮಾಣಿ ।೬೭
ಭವಂತ್ಯೇತಾನಿ ಚ ಮೋಕ್ಷ ಪ್ರದಾನಿ ।೬೮
ಸಂಪದ್ಯೇರನ್ ಸರ್ವಕಲ್ಯಾಣಾನಿ ಲೋಕಾಃ ।೬೯

**ತಾನ್ಯಯೋದಾರು ಶಿಲಾ ತಾಮ್ರ ಹಿರಣ್ಯವಿಕಾರಾಣಿ ಮೃದಾದೀನ್ಯಥವಾನೀತಿ । ಸ್ಪಷ್ಟೋಽರ್ಥಃ । ಯಸ್ಯ ಯತ್ಸಾಧನ ಮುಕ್ತಂ**

**ಕಾದ್ಯತೋಪಾದಾನ ಸಾಧನಸ್ಯ ವಿಕಾರೋऽಪಿ ತತ್ಸಾಧನಂ ಜಾನೀಯಾತಾ ಇತ್ಯರ್ಥಃ । ಏವಂ ದೇವತಾಕಾರಸ್ಯ ಶಿಲ್ಪನಿಷ್ಪಾದ್ಯತಾಮುಕ್ತ್ವಾ ತದಾಲಯಾದೀನಾಮಪಿ ಶಿಲ್ಪನಿಷ್ಪಾದ್ಯತಾಮಾಹ । ಆಯತನವಂತೀತ್ಯಾದಿನಾ । ಸ್ಪಷ್ಟೋऽರ್ಥಃ । ಏತನ್ಯಾಪಿ ಚ ಮೋಕ್ಷಪ್ರದಾನಿ ಮೋಕ್ಷ ಪ್ರದತ್ವಂ ವಿವೃತ ಮಂತ್ರಾವಧೇಯಂ । ಆದರಾರ್ಥಮುಕ್ತಮೇವ ಫಲವತ್ತ್ವಂ ಶಬ್ದಾಂತರೇಣಾಹ । ಸಂಪದ್ಯೇರನ್ನಿತಿ । ಅಕರ್ಮಕೋ ಧಾತುಃ ಅತಃ [illegible] ಲೋಕಾ ಇತಿ ಸಂಬೋಧನಂ । [illegible] ಕಲ್ಯಾಣ ಜನಕ ಶಿಲ್ಪಪ್ರಚಾರೇಣ ಪರೋಪಕಾರಸ್ಯ [illegible] ಕೃತತ್ವಾತ್ ಪ್ರಚಾರಯಿತುರ್ಮಹತ್ಪುಣ್ಯಂ ಸ್ಯಾದಿತ್ಯಾಹ । ಸಂಚಿ[illegible] ಯಾದಿತಿ ...ರಿತಿ । ಶಿಲ್ಪಾನುಷ್ಠಾನಾಧಿಕಾರಿಣಂ ಉಪದಿಶತಿ ಅನಧಿಕಾರಿಣಂ ಚ ವ್ಯುದಸ್ಯತಿ**

ದೇವತಾ ರೂಪವನ್ನು ನಿರ್ಮಿಸಲು ಕಬ್ಬಿಣ, ಮರ, ಕಲ್ಲು, ತಾಮ್ರ, ಚಿನ್ನ ಇವೇ ಮೊದಲಾದವುಗಳು ಮುಖ್ಯ ಕಾರಣವಾಗಿರುತ್ತವೆ. ಮೃತ್ತಿಕೆಯೇ ಮೊದಲಾದವುಗಳು ಅದಮವಾಗಿರುವುವು. ಯಾವ ದೇವತೆಯ ರೂಪವನ್ನು ನಿರ್ಮಿಸಲು ಯಾವುದು ಸಾಧನವಾಗಿರುತ್ತದೆ ಎಂದು ಹೇಳಲಾಗಿರುವುದೋ ಆ ಪ್ರಕಾರವಾದ ಉಪಾದಾನ ಸಾಧನದ ವಿಕಾರವೂ ಕೂಡ ರೂಪ ನಿರ್ಮಾಣದ ವಿಷಯದಲ್ಲಿ ಸಾಧನವಾಗಿರುತ್ತದೆ ಎಂದು ತಿಳಿಯಬೇಕು. ದೇವತಾ ರೂಪವು ಶಿಲ್ಪದ ಮೂಲಕವೇ ರೂಪುಗೊಳ್ಳುವಂತೆ ದೇವತಾಲಯಾದಿಗಳೂ ಕೂಡ ಶಿಲ್ಪದಿಂದಲೇ ನಿರ್ಮಿತಗಳಾಗಿರುತ್ತವೆ ಎಂಬುದಾಗಿ ಆಯತನವಂತಿ ಸೂತ್ರದಿಂದ ಉಪದೇಶಿಸಲ್ಪಟ್ಟದೆ. ಇದರ ಹಾಗೆಯೇ ಇತರ ಕರ್ಮಗಳು ಕೂಡ ಶಿಲ್ಪದಿಂದ ಪ್ರಾಚುರ್ಯಕ್ಕೆ ಬಂದವೇ ಆಗಿರುತ್ತವೆ. ಈ ಶಿಲ್ಪ ಕರ್ಮಗಳೆಲ್ಲವೂ ಮೋಕ್ಷವನ್ನು ಅನುಗ್ರಹಿಸುವವುಗಳಾಗಿರುತ್ತವೆ ಎಂಬುದಾಗಿ ವಿವರಿಸಲ್ಪಟ್ಟಿರುತ್ತದೆ. ಶಿಲ್ಪವು ಮೋಕ್ಷಪ್ರದವಾಗಿರುವುದು ಎಂಬ ಅರ್ಥವನ್ನು ಮತ್ತು ಆದರವನ್ನು ವ್ಯಕ್ತ ಪಡಿಸುವುದಕ್ಕಾಗಿಯೇ ಫಲವತ್ತಾಗಿರುವುದೆಂದು ನಿರ್ದೇಶನ ಮಾಡಲಾಗಿರುತ್ತದೆ.

**ಸಂಚಿನುಯೊತ್ಪುಣ್ಯಾಮೇಭಿಃ ಶಿಲ್ಪೈರಿತಿ । ೭೦**

ಎಲೈ ಪೂಜ್ಯರಾದ ಮನುಷ್ಯರೇ, ನೀವೆಲ್ಲರೂ ಜಗತ್‌ಕಲ್ಯಾಣವನ್ನು ಉಂಟುಮಾಡುವ ಶಿಲ್ಪಜ್ಞಾನದ ಪ್ರಚಾರದಿಂದ ಪಶ್ಚಾದ ಪರೋಪಕಾರವನ್ನು ಮಾಡಿರುವ ಕಾರಣ ಶಿಲ್ಪ ಪ್ರಚಾರ ಮಾಡುವವರಿಗೆ ಉಂಟಾಗುವ ಪುಣ್ಯವು ಬಹಳವಾಗಿರುವುದು ಎಂದು **ಸಂಪದ್ಯೇರನ್ ಸರ್ವ ಕಲ್ಯಾಣಾನಿ** ಎಂಬ ಸೂತ್ರಕ್ಕೆ ಅರ್ಥವಿದೆ. ಈ ಶಿಲ್ಪಗಳಿಂದ ಪುಣ್ಯವನ್ನು ಬಹಳಮಟ್ಟಿಗೆ ಶೇಖರಿಸ ಬೇಕು ಎಂದು ಅರ್ಥ.

**ಬ್ರಾಹ್ಮಣಾನಾಮೇದ್ಭವತಿ ಶಿಲ್ಪಂ । ೭೧**
**ಯದ್ಯಬ್ರಾಹ್ಮಣೋ ಭವೇನ್ನ ಶಿಲ್ಪೀತಿ । ೭೨**

**ಬ್ರಾಹ್ಮಣಾನಮಿತಿ ...ನ ಶಿಲ್ಪೀತಿ । ಸ್ಪಷ್ಟೋಽರ್ಥಃ ।**

ಶಿಲ್ಪವನ್ನು ಅಭ್ಯಾಸಮಾಡುವ ಮತ್ತು ಪ್ರಚಾರ ಮಾಡುವ ಯೋಗ್ಯತೆ ಯುಳ್ಳವರನ್ನು (ಅಧಿಕಾರಿಗಳನ್ನು) ನಿರ್ದೇಶಿಸಲಾಗಿದೆ. ಇದೇ ರೀತಿಯಾಗಿ ಮುಂದಿನ 'ಯದ್ಯಬ್ರಾಹ್ಮಣೋ....' ಎಂಬ ಸೂತ್ರದಿಂದ ಶಿಲ್ಪದ ವಿಷಯದಲ್ಲಿ ಅಧಿಕಾರಿಗಳಲ್ಲದವರನ್ನು ನಿರ್ದೇಶಿಸಲಾಗಿದೆ. ಆದ್ದರಿಂದ ಅಧಿಕಾರಿಗಳಾದವ ರನ್ನು ಸ್ವೀಕರಿಸುವುದು ಅನಧಿಕಾರಿಗಳಲ್ಲದವರನ್ನು ತಿರಸ್ಕರಿಸುವುದೂ ಸಹ ಇಲ್ಲಿ ನಿರ್ದೇಶಿತವಾಗಿದೆ. ಶಿಲ್ಪಿ ಬ್ರಾಹ್ಮಣನೇ ಶಿಲ್ಪವನ್ನು ಮಾಡಲು ಅರ್ಹನು. ಅಬ್ರಾಹ್ಮಣನಾದವನು ಶಿಲ್ಪಕಾರ್ಯಕ್ಕೆ ಅನರ್ಹನಾಗಿರುತ್ತಾನೆ.

**ಅಬ್ರವೀದೇವಂ ಪುನರಾಚಾರ್ಯಃ ಸರ್ವಜ್ಞಃ। ೭೩**
**ಯದಾ ಯದಾವಹೀಯತೇ ಲೋಕಾದ ಸ್ಮಾದ್ಧ-ರ್ಮಾಗ್ಂ ಶಿಲ್ಪರೂಪಂ । ೭೪**
**ತದೈವಾವಿ ರ್ಭೂಯತೇ ಭಗವಾನ್ವಿಶ್ವಕರ್ಮಾತ್ಮ-ನಸ್ತೇಜಸಃ ಪ್ರಕಲ್ಪ್ಯಾಕಾರನ್ । ೭೫**

ತಸ್ಮಾದೇವ ಪ್ರಜಾಪತ್ಯೃಷಯಃ ಪ್ರಜಾಯಂತೇ ಶಿಲ್ಪವಿಭಃ । ೭೬

ತೇಭ್ಯ ಏವ ಪಾರಂಪರ್ಯಾಗ್ಂ ಸಮಾಗತಂ ಭವತಿ ಶೈಲ್ಪಿಕಮಾಚಾರ್ಯತ್ವಂ ಚ । ೭೭

ದೇವಾನಾಮಪ್ಯಾಚಾರ್ಯಾಸ್ತ ಏವ ವಿಭ್ರಾಜಂತೇ ಮಹಾಂತಃ । ೭೮

ನಿರುಕ್ತಾಸ್ತೇ ಭವನ್ತ್ಯಾದಿ ಕರ್ತಾರೋ ಲೋಕ ಪ್ರವರ್ತ್ತಕಾಃ । ೭೯

**ಅಸಕೃದಾಮ್ರೇಡಿತಂ ವೇದ ಶಿಲ್ಪನಿತ್ಯತ್ವಂ ತದುಚ್ಛೇದಶಂಕಾ ವ್ಯುದಸನ ಮುಖೇನ ಪ್ರತಿಷ್ಠಾಪಯತಿ । ಅಬ್ರವೀದೇವ ಮಿತ್ಯಾದಿನಾ ಶೈಲ್ಪಿಕಮಾಚಾರ್ಯತ್ವಂ ಚೇತ್ಯಂತೇನ । ಸ್ಪಷ್ಟೋಽರ್ಥಃ । ಯೇ ಹಿ ಭಗವತೋ ಮುಖಾತ್ತೇಜೋಂಶಾತ್ ಪಂಚ ಪೂರುಷಾಃ ಜಾತಾಸ್ತೇ ಏವ ಮಹಂತಃ ದೇವಾನಾಮಪ್ಯಾಚಾರ್ಯಾ ವಿಭ್ರಾ-ಜಂತೇ ಇತ್ಯನ್ವಯಃ । ಯಥೋಕ್ತಪ್ರಕಾರೇಣ ಪಂಚಾನಾಂ ಲೋಕ ಕರ್ತೃತ್ವಾ ದೇವ ಆದಿಕರ್ತೃತ್ವ ಮಿತ್ಯನಂತರವಾಕ್ಯ ತಾತ್ಪರ್ಯಂ ।**

ವೇದ ಶಿಲ್ಪ ನಿತ್ಯತ್ವವನ್ನು ಅನೇಕ ವಿಧವಾಗಿ ಹೇಳಿರುವುದುಂಟು. **ಅಬ್ರವೀತ' ಏವಂ** ಎಂಬ ಸೂತ್ರದಿಂದ ಪ್ರಾರಂಭಿಸಿ **ಶೈಲ್ಪಿತಮಾಚಾರ್ಯತ್ವಂ ಚ** ಎಂಬ ಸೂತ್ರದ ವರೆವಿಗೂ ವೇದ ಶಿಲ್ಪವನ್ನು ನಿರಾಸ ಮಾಡುವ ಅನು ಮಾನಗಳಿಗೆ ಸಮಾಧಾನಗಳನ್ನು ವಿವರಿಸಿ ದೃಢಪಡಿಸಲಾಗಿದೆ. ಪರಮ ಪರಮೇಶ್ವರನಾದ ವಿಶ್ವಕರ್ಮನ ಮುಖ ತೇಜಸ್ಸಿನ ಅಂಶದಿಂದ ಹುಟ್ಟಿರುವ ಪಂಚಬ್ರಹ್ಮರು ಬಹು ಮಹಿಮೆಯುಳ್ಳವರಾಗಿದ್ದು ದೇವತೆಗಳಿಗೂ ಆಚಾರ್ಯ ರಾಗಿ ಪ್ರಕಾಶಿಸುತ್ತಿರುವರು. ಈ ಮೊದಲೇ ನಿರ್ದೇಶಿಸಿರುವ ಪ್ರಕಾರ ಈ ಪಂಚಬ್ರಹ್ಮರು ಲೋಕ ಕರ್ತೃಗಳಾಗಿರುವುದರಿಂದ ಇತರೇ ಶಿಲ್ಪದ ಆದಿಕರ್ತೃ ಗಳಾಗಿರುವವರು ಎಂದು ಮುಂದಿನ ವಾಕ್ಯದ ತಾತ್ಪರ್ಯವಾಗಿರುತ್ತದೆ.

ಸರ್ವಜ್ಞನಾದ ಆಚಾರ್ಯನು ಶಿಲ್ಪವಿಷಯದಲ್ಲಿ ಅಧಿಕಾರಿಗಳನ್ನು ಪ್ರಕಾರವಾಗಿ ವಿಂಗಡಿಸಿ ಹೇಳಿದ್ದಾನೆ. ಈ ಲೋಕದಲ್ಲಿ ಶಿಲ್ಪ ರೂಪವಾದ ಧರ್ಮವು ಕ್ಷೀಣವಾದಾಗ ಪೂಜ್ಯನಾದ ವಿಶ್ವಕರ್ಮನು ತನ್ನ ತೇಜಸ್ಸಿನಿಂದ ಬೇರೆ ಬೇರೆಯಾದ ಆಕಾರಗಳನ್ನು ಹೊಂದಿ ಅವತಾರ ಮಾಡುವವನು. ಪ್ರಜಾಪತಿಗಳೆಂದು ಹೆಸರನ್ನು ಹೊಂದಿರುವ ಬ್ರಹ್ಮರುಗಳು, ಋಷಿಗಳು ಈ ವಿಶ್ವಕರ್ಮನಿಂದಲೇ ಉತ್ಪನ್ನರಾಗುತ್ತಾರೆ. ಇವರಿಂದಲೇ ಶಿಲ್ಪದ ಮಹಿಮೆಯು ಪ್ರಕಾಶಕ್ಕೆ ಬಂದಿರುತ್ತದೆ. ಇವರಿಂದಲೇ ಶಿಲ್ಪದ ಮಹಿಮೆಯು ಲೋಕದಲ್ಲಿ ಪಾರಂಪರ್ಯ ಕ್ರಮವಾಗಿ ಉಂಟಾಗಿರುತ್ತದೆ. ಶಿಲ್ಪಜ್ಞಾನದ ಸಂಬಂಧವಾದ ಆಚಾರ್ಯತ್ವವೂ ಕೂಡ ವಂಶಪಾರಂಪರ್ಯ ಕ್ರಮವಾಗಿ ಉಂಟಾಗಿರುತ್ತದೆ. ಇವರು ದೇವತೆಗಳಿಗೂ ಗುರುಗಳಾಗಿ ಆಚಾರ್ಯರೆಂದು ಹೆಸರನ್ನು ಹೊಂದಿ ದೊಡ್ಡವರೆಂದು ಪ್ರಸಿದ್ಧರಾಗಿರುತ್ತಾರೆ. ಇವರು ಲೋಕ ಪ್ರವರ್ತಕರೆಂದು, ಆದಿ ಪಂಚಶಿಲ್ಪಿಗಳೆಂದು, ಆದಿ ಪಂಚಬ್ರಹ್ಮರೆಂದು ಪ್ರಖ್ಯಾತರಾಗಿದ್ದು ಆದಿಯಲ್ಲಿ ಶಿಲ್ಪಜ್ಞಾನವನ್ನು ಪ್ರಕಟ ಮಾಡಿದವರಾಗಿರುತ್ತಾರೆ.

**ತದ್ದ್ವಿವಿಧಮೇವಗ್ಂ ಶಿಲ್ಪಂ ದೈವಂ ಮಾನುಷಂ ಚೇತಿ । ೮೦**

**ನಾಭಾನೇದಿಷ್ಠಾದೀನ್ಯತ್ರ ಪ್ರಥಮಾನಿ । ೮೧**

**ಅನ್ಯಾನಿ ಮಾನುಷಾಣೀತ್ಯುಚ್ಯಂತೇ । ೮೨**

**ದೈವ ಮಾನುಷ ಭೇದೇನ ಶಿಲ್ಪಂ ವಿಭಜತೇ । ತದಿತಿ । [redacted] ಉಭೇ ನಾಮತೋ ನಿರ್ದೇಶತಿ । ನಾಭೇತಿ । ತಯೋರ್ಮಧ್ಯೇ ದೈವಮಾಹ ।**

ಶಿಲ್ಪವು ದೈವ ಮತ್ತು ಮಾನುಷ ಎಂಬ ಭೇದದಿಂದ ಎರಡು ವಿಧವಾಗಿರುತ್ತದೆ. ನಾಭಾನೇದಿಷ್ಠಾ ಎಂದು ನಿರ್ದೇಶಿತವಾಗಿರುವ ವಿಭಾಗವು ಮೊದಲ ಗುಂಪಿನದು. ಎಂದರೆ ದೇವ ಶಿಲ್ಪ.

ನಾವು 'ನಾಭಾನೇದಿಷ್ಠ' ಎಂದರೆ ಏನು ಎಂಬುದನ್ನು ಸ್ಪಷ್ಟವಾಗಿ ತಿಳಿಯಬೇಕು. ಐತರೇಯ ಬ್ರಾಹ್ಮಣ ಪಂಚಕದಲ್ಲಿಯ **ಶಿಲ್ಪಾ ನಿಶಂಸಂತಿ** ಶ್ರುತಿಗೆ ಭಾಷ್ಯವನ್ನು ಹೇಳುತ್ತಾ **ನಾಭಾನೇದಿಷ್ಠಾದಿ ಶಿಲ್ಪಮಾಶ್ಚರ್ಯಕರ**

[redacted] **ನಿಶ್ಚೀತವ್ಯವತ್.... ಯಸ್ಮಾನ್ನಾಭಾನೇದಿಷ್ಠಾದೀನಿ ಶಿಲ್ಪಶಬ್ದ ವಾಚ್ಯಾನಿ ತಸ್ಮಾತ್ಸುವರ್ಣಾಭರಣಾದಿವತ್ಪೂಜ್ಯಾ** ಎಂದು ವಿವರಿಸ ಲಾಗಿದೆ. ಎಂದರೆ ಶಿಲ್ಪಶಬ್ದದಿಂದ ವಿವರಿಸಲ್ಪಡುವ ನಾಭನೇದಿಷ್ಠಾದಿಗಳ ಶಿಲ್ಪ ಕೌಶಲವು ಅತ್ಯಾಶ್ಚರ್ಯಕರವೆಂದು ಅವರು ತಯಾರಿಸಿದ ಚಿನ್ನದ ಆಭರಣಾದಿಗಳು ಪೂಜಾರ್ಹವಾಗಿವೆ. ಆದ್ದರಿಂದ ನಾಭಾನೇಷ್ಠಾದಿಗಳ ಶಿಲ್ಪವು ದೈವ ಶಿಲ್ಪ ಎಂದು ಪರಿಗಣಿಸಲ್ಪಡುತ್ತದೆ.

ನಾಭಾನೇದಿಷ್ಠ ಎಂದರೆ ಯಾರು ? ನಮ ಎಂಬ ಪ್ರಶ್ನೆ ಮುಂದೆ ನಿಲ್ಲುತ್ತದೆ. ಮನುವಿನ ಪುತ್ರ ನಾಭಾನೇದಿಷ್ಠ. ಈತನು ವೇದ ಮಂತ್ರಗಳ ದ್ರಷ್ಟಾರನೂ ಹೌದು. ಋಗ್ವೇದದಲ್ಲಿ ನಾಭಾನೇದಿಷ್ಠ ಸೂಕ್ತದೊಂದಿಗೇ ನರಾಶಂಸ ಸೂಕ್ತವೂ ದೊರೆಯುತ್ತದೆ. **ನರಾಃ** ಎಂಬುದು ಅಂಗೀರಸ ಕುಲೋತ್ಪನ್ನರಾದ ಬ್ರಹ್ಮರ್ಷಿಗಳಿಗೆ ಇರುವ ಪರ್ಯಾಯ ನಾಮ. ಇದಕ್ಕೆ ಕಾರಣ ಅಂಗೀರಸರು ಮನುಷ್ಯ ಕುಲೋತ್ಪನ್ನರು ಎಂಬುದೇ. ನಾಭಾನೇದಿಷ್ಠ ಸೂಕ್ತದಲ್ಲಿ ನರಾಶಂಸ ಸೂಕ್ತದ ಅಂತರ್ಭಾವವು ಮೂಡಿರುವುದರಿಂದ ನಾಭಾ-ನೇದಿಷ್ಠನಿಗೇ ನರಾಶಂಸ ಎಂಬ ಹೆಸರಿದೆ. ಈ ಸೂಕ್ತದಲ್ಲಿ ಶಿಲ್ಪಕರ್ಮ ಮಾಡುತ್ತಿದ್ದ ನರನ (ಅಂಗೀರಸನ) ಪ್ರಾರ್ಥನೆ ಇದೆ ಎಂದು ಹೇಳಿ ಬೃಹಸ್ಪತಿ ಯನ್ನು ನರಾಶಂಸನೊಂದಿಗೆ ಸಮೀಕರಿಸಲಾಗಿದೆ. **ನಾರಾಶಂಸಾಃ ಪಿತೃ ಸಂಜ್ಞಕ ಋಷಿಣಾಂ ಗೋತ್ರ ಜಾಃ । ಚಮಸಾದಿ ಪಾತ್ರ ಸಂಪದಕಾಃ** ಎಂದು ಭಾಷ್ಯ ಬರೆದು ನರಾಶಂಸನೆಂದರೆ ಚಮಸಾದಿ ಪಾತ್ರೆಗಳನ್ನು ತಯಾರಿ ಸುವ ಶಿಲ್ಪಿ ಮತ್ತು ಇವರಿಗೆ ಪಿತೃ ಸಂಜ್ಞೆ ಇರುವುದರಿಂದ ಇವರು ದೇವ ಶಿಲ್ಪಿಗಳು. ಯಜ್ಞಾಂಗದ ಶಿಲ್ಪವನ್ನು ನಿರ್ವಹಿಸುವುದರಿಂದಲೂ ಕೂಡ ಇವರ ಶಿಲ್ಪವು ದೇವಶಿಲ್ಪವಾಗಿದೆ.

ನಾಭಾನೇದಿಷ್ಠ, ವಾಲಾಖಿಲ್ಯ, ಸುಕೀರ್ತಿ, ವೃಷಾಕಪಿ, ಏವಯಾ ಮಾರುತ್, ತ್ವಷ್ಟಾ ವಿಶ್ವಕರ್ಮ, ಋಭುಗಳು ಮುಂತಾದವರು ಮಾತ್ರ ಮಾಡಬೇಕಾಗಿರುವ ಶಿಲ್ಪವನ್ನು ನರಾಂಶಸ ಎನ್ನುತ್ತಾರೆ. ಇವನ್ನು ವೇದ ಮಂತ್ರ ವಿಧಿಯಿಂದಲೇ ಮಾಡಬೇಕು. ಯಜ್ಞಪಾತ್ರಾದಿ ಪಂಚ ಶಿಲ್ಪಗಳು ದೇವತೆಗಳ ಪ್ರೀತ್ಯರ್ಥ ನಡೆಸುವುದಾದುರಿಂದ ಇದರ ತಯಾರಿಕೆಯನ್ನು ದೇವ ಶಿಲ್ಪವೆಂದು ಪರಿಗಣಿಸಲಾಗಿದೆ.

ನಾಭಾನೇದಿಷ್ಠ ಋಷಿಯು ವೈಶ್ವಕರ್ಮಣ ವಂಶಕ್ಕೆ ಸೇರಿದವನೆಂದು ಈ ವಿವರಣೆಯಿಂದ ಸ್ಪಷ್ಟವಾಗುತ್ತದೆ. ಕಶ್ಯಪನಿಂದ ಅದಿತಿಯು ಸೂರ್ಯನನ್ನು ಪಡೆದಳು. ಸೂರ್ಯನಿಗೆ ಸಂಜ್ಞಾದೇವಿಯಲ್ಲಿ ಮನು ಜನಿಸಿದನು. ಸಂಜ್ಞಾದೇವಿಯು ತ್ವಷ್ಟೃ ವಿಶ್ವಕರ್ಮನ ಮಗಳು. ಮನುವಿನ ಸುತನೇ ನಾಭಾನೇದಿಷ್ಠ ( **ತದ್ಬಂಧುಃ ಸೂರಿರ್ದಿವಿ ತೇ ಧಿಯಂಧಾ ನಾಭಾನೇದಿಷ್ಠೋರಪತಿ ಪ್ರವೇನನ್** –ಋ ೧೦:೬೧:೧೮ )

ದೇವ ಶಿಲ್ಪಕ್ಕಿಂತಲೂ ಬೇರೆಯಾಗಿರುವುದನ್ನು ಮಾನುಷ ಶಿಲ್ಪವೆಂದು ಕರೆಯುತ್ತಾರೆ.

**ದೇವ ಮೂರ್ತಿ ದೇವಾಯತನೇಷ್ಟ್ಯಾದಿಕಂ ಭವತಿ ಸರ್ವಂ ದೈವಮಿತಿ ವಿಚಿತ್ರಗ್‌ಂ ಶಿಲ್ಪಂ। ೬೩**

**ಮಾನುಷಂ ಚೈವಂ ಭವತಿ ಶಸ್ತ್ರಾಸ್ತ್ರ ಯಂತ್ರ ಹಲಪ್ರಾಸಾದ ವಾಪ್ಯಾಭರಣಾದೀನೀತಿ। ೬೪**

**[redacted] ಯೋರೇವಗ್‌ಂ ಶಿಲ್ಪಯೋರ್ಭವಂತಿ ವಾಗೀಶ್ವರಿ ಮೇವಾರ್ದೀನ್ಯುಪ ಕರಣಾನಿ। ೬೫**

**ದೇವ ಮೂರ್ತೀತಿ । ಮಾನುಷ ಮಾಹ । ಮಾನುಷಂ [redacted] । ಶಿಲ್ಪದ್ರವ್ಯ ಸಾಧನಾನ್ಯಾಹ। ತಯೋರಿತಿ। ಸರ್ವಾರ್ಥ ಬೋಧನೇನ ಸರ್ವಫಲಪ್ರದತ್ವಾದೀಶ್ವರೀ ತಾದೃಶೀ ಯಾ ವಾಕ್ ಶಿಲ್ಪವೇದ ಇತ್ಯರ್ಥಃ ।**

ಶಿಲ್ಪನಿರ್ಮಾಣವು ಬಹು ಬಗೆಯಾಗಿದ್ದು ಆಶ್ಚರ್ಯಜನಕವಾಗಿರುವ ಕೃತಿಗಳ ನಿರ್ಮಾಣಕ್ಕೆ ಕಾರಣವಾಗಿರುವುದರಿಂದ ಶಿಲ್ಪವು ವಿಚಿತ್ರವೆಂದು ಸೂತ್ರದಲ್ಲಿ ವರ್ಣಿತವಾಗಿದೆ.

ದೇವ ಮೂರ್ತಿಗಳು, ದೇವಾಲಯ ಮತ್ತು ಅದಕ್ಕೆ ಸಂಬಂಧಿಸಿದಂತೆ ಅವಶ್ಯಕ ಪೂಜಾರ್ಹ ವಸ್ತುಗಳ ತಯಾರಿಕೆ, ಯಜ್ಞ ಸಂಬಂಧಿ ಚಮಸಾದಿಗಳ

ತಯಾರಿಕೆ, ವೈದಿಕ ಕರ್ಮಾಂಗ ನಿರ್ವಹಣೆಗೆ ಅವಶ್ಯಕವಾಗಿರುವ ವಸ್ತುಗಳ ತಯಾರಿಕೆಯನ್ನು ದೇವಶಿಲ್ಪ ಎಂದು ಪರಿಗಣಿಸಲಾಗುತ್ತದೆ.

ಶಸ್ತ್ರ, ಅಸ್ತ್ರ, ಯಂತ್ರ, ನೇಗಿಲು (ಹಲ), ಮಹಡಿಮನೆಗಳು ಅಥವ ಮನೆಗಳು (ಜನರು ವಾಸಕ್ಕೆ ಯೋಗ್ಯ ನಿವಾಸಗಳು), ಅರಮನೆಗಳು, ಭಾವಿ (ವಾಪಿ), ಒಡವೆಗಳು, ಜನೋಪಯೋಗಿ ವಸ್ತುಗಳ ನಿರ್ಮಾಣವನ್ನು ಮಾನುಷ ಶಿಲ್ಪ ಎಂದು ಪರಿಗಣಿಸಲಾಗುತ್ತದೆ.

[redacted] ರೀತಿಯಾಗಿ ಎರಡು ವಿಧವಾದ ಶಿಲ್ಪಗಳಿಗೂ ಅಯಾಯ ಶಿಲ್ಪಗಳ ನಿರ್ಮಾಣದಲ್ಲಿ ಅತ್ಯವಶ್ಯಕವಾಗಿರುವ ಸಾಧನಗಳನ್ನು ಶಿಲ್ಪವೇದವು ಬೋಧಿಸಿರುತ್ತದೆ.

ಏಭ್ಯೋ ದಶಭ್ಯ ಏವ ಕ್ರಿಯತೇ ಸರ್ವಂ ವೈಚಿತ್ರಗ್ಂ ಶಿಲ್ಪಂ । ೮೬

ಅತಃ ಶಿಲ್ಪಮೂಲಾನಿ ಸರ್ವಾಣಿ । ೮೭

ಪೂಜನೀಯಾನಿ ಸರ್ವೇಷಾಮತೋ ಭವಂತಿ ಶಿಲ್ಪಾನಿ । ೮೮

ಸರ್ವಾರ್ಥಬೋಧನೇನ ಸರ್ವಫಲ ಪ್ರದತ್ವಾದೀಶ್ವರೀ ಕಾಪ್ಯಶೀಯಾ ವಾಕ್ ಶಿಲ್ಪವೇದ ಇತ್ಯರ್ಥಃ । ಮೇರ್ವಾದೀನಿ ಶಂಕು ದಂಡಾದೀನಿ ಡುಮಿಂಞ್ ಪ್ರಕ್ಷೇಪಣೇ ಇತಿ ಧಾತೋ ರುಪ್ರತ್ಯಯೋ ಕರ್ಮಾರ್ಥೇ [redacted] ಗುಣೇನ ಮೇರು ಶಬ್ದ ನಿಷ್ಪತ್ತೇಃ । ಪ್ರಕ್ಷಿಪ್ಯಮಾಣ ಇತ್ಯರ್ಥಃ । ಶಂಕು ದಂಡಂ [redacted] ಪ್ರಕ್ಷಿಪ್ಯಮಾನೇ ಯತ್ರಾನಿಷ್ಕರ್ಷ ಪೂರ್ವ ಕಮಾಲಯ ನಿರ್ಮಾಣಾತ್ ದಂಡಾದೇರುಪಕರಣತ್ವಂ ಕರ್ತವ್ಯಾರ್ಥ ಜ್ಞಾಪಕತ್ವಾಚ್ಚ ವೇದಶಿಲ್ಪಸ್ಯೋಪಕರಣತ್ವಮವಧೇಯಂ । ಭಗವತ್ತೇಜೋಽಂಶ ಸಂಭೂತೈಃ ಪಂಚಭಿಃ ಪುರುಷೈಃ ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನಾನುಗ್ರಹ ರೂಪ ಪಂಚ

**ಕೃತ್ಯೈಃ ಸರ್ವಜಗಚ್ಛಿಲ್ಪಮುಕ್ತಮುಪಸಂಹರತಿ। ಏಭ್ಯ [redacted] । ಅದರಾರ್ಥ ಮುಕ್ತಮೇವ ಶಿಲ್ಪಸ್ಯ ಪೂಜ್ಯತ್ವಂ ಸರ್ವವ್ಯಾಪಕತ್ವ ಹೇತು ನಾದೇನಾಹ। ಅತಃ ಶಿಲ್ಪಮೂಲಾನೀತಿ। ಸ್ಪಷ್ಟೋಽಕ್ಷರಾರ್ಥಃ। ಸರ್ವಫಲ ಜನಕತ್ವಂ ಮೋಕ್ಷಸಾಧನತ್ವಂ ಚಾಹ ।**

ಎಲ್ಲ ವಿಧವಾದ ಅರ್ಥವನ್ನೂ ಬೋಧಿಸುವುದರಿಂದ ಸರ್ವಫಲಪ್ರದ ವಾದ ಮಹಾಮಹಿಮೆಯುಳ್ಳ ಶಿಲ್ಪವೇದವು ಮೇರು, ಶಂಕು, ದಂಡಾದಿಗಳು ಶಿಲ್ಪಸಾಧನಗಳೆಂದು ಬೋಧಿಸುತ್ತದೆ. **ಡುಮಿಂಞ್ ಪ್ರಕ್ಷೇಪಣೇ** ಎಂಬ ಧಾತುವಿಗೆ ಕರ್ಮಾರ್ಥದಲ್ಲಿರುವ ಪ್ರತ್ಯಯವು ಬಂದು, ಗುಣವು (ಏಕಾರವು) ಬಂದಿರುವುದರಿಂದ ಮೇರು ಎಂಬ ಶಬ್ದ ರೂಪವು ಸಿದ್ಧವಾಗಿರುತ್ತದೆ. ಮೇರು ಎಂಬ ಶಬ್ದಕ್ಕೆ ಪ್ರಕ್ಷಿಪ್ಯಮಾಣ ಎಂಬ ಅರ್ಥವಾಗುತ್ತದೆ. ಶಂಕುವನ್ನು ದಂಡ ವನ್ನು ಆಯಾಯ ಪ್ರಮಾಣ ನಿಷ್ಕರ್ಷಗಾಗಿ ಇರಿಸುವುದು ಮತ್ತು ಅನಂತರ ದಲ್ಲಿ ಆಯಾಯ ಗೃಹವೇ ಮೊದಲಾದವುಗಳನ್ನು ನಿರ್ಮಿಸುವುದು. ಇವು ಗಳಿಂದ ಶಂಕು ದಂಡಾದಿಗಳು ಉಪಕರಣ (ಸಾಧನೆ) ಗಳೆಂದು ತಿಳಿದು ಬರು ವುದು. ಕರ್ತವ್ಯಾರ್ಥ ಜ್ಞಾಪಕವಾಗಿರುವ ಕಾರಣ ವೇದಶಿಲ್ಪವೂ ಕೂಡ ಉಪಕರಣವಾಗಿರುತ್ತದೆ ಎಂಬುದನ್ನು ತಿಳಿಯಬೇಕು. ಪೂಜ್ಯನಾದ ವಿಶ್ವಕರ್ಮ ದೇವನ ತೇಜಸ್ಸಿನ ಅಂಶದಿಂದ ಅವತರಿಸಿದ್ದಾರೆ. ಪಂಚಪುರುಷರು (ಪಂಚ ಆದ್ಯಋಷಿಗಳು ಅಥವ ಪಂಚ ಬ್ರಹ್ಮರ್ಷಿಗಳು) ಇವರು ಪಂಚಕೃತ್ಯಗಳಿಂದಲೇ – ಸೃಷ್ಟಿ, ಸ್ಥಿತಿ, ಲಯ, ತಿರೋಧಾನ, ಅನುಗ್ರಹಗಳೆಂಬ ಪಂಚ ಕೃತ್ಯಗಳಿಂದ – ಸಕಲವಾದ ಜಗಚ್ಛಿಲ್ಪವನ್ನೂ ಉಂಟು ಮಾಡಿದ್ದಾರೆ ಎಂದು ಹೇಳಲ್ಪಟ್ಟಿದೆ.

ಈ ಅಂಶವನ್ನು ಈ ಗ್ರಂಥದಲ್ಲಿ ಉಪಸಂಹಾರ ಮಾಡುವುದಕ್ಕಾಗಿ **ಏಭ್ಯಃ ದಶಭ್ಯ ಏವ ಕ್ರಿಯತೇ** ಎಂದು ಸೂತ್ರರೂಪದಲ್ಲಿ ಹೇಳಿದೆ.

ಸರ್ವರಿಗೂ ಆದರದಿಂದ ಉಪಾದೇಯವಾಗಿರುವ ಕಾರಣ ಶಿಲ್ಪವು ಪೂಜ್ಯವಾಗಿರುವುದು. [redacted] ಪ್ರಕಾರವಾಗಿರುವ ಶಿಲ್ಪವು ಪಂಚ ಪುರುಷರು ಆಚರಿಸುವ ಪಂಚಕೃತ್ಯಗಳೆಂಬ ದಶಸಂಖ್ಯಾಕವಾಗಿರುವ ಸಮುದಾಯದಿಂದ ಎಲ್ಲಾ ಕಡೆಯೂ ವ್ಯಾಪಿಸಿರುತ್ತದೆ. ಶಿಲ್ಪವು ಎಲ್ಲವನ್ನು ಆವರಿಸಿಕೊಂಡು

ತನ್ನಲ್ಲಿ ಅಡಗಿಸಿಕೊಂಡಿರುವುದರಿಂದ (ಸರ್ವವ್ಯಾಪಕವಾಗಿರುವ ಕಾರಣದಿಂದ) ಬಗೆಬಗೆಯಾಗಿರುವುದು. ಆದ್ದರಿಂದ ಅದು ಚಿತ್ರವಿಚಿತ್ರವೆಂದು ಪ್ರಖ್ಯಾತವಾಗಿದೆ ಶಿಲ್ಪವೆಂಬುದು ಎಲ್ಲರಿಗೂ ಪೂಜ್ಯವಾದುದಾಗಿ ಸಕಲ ಫಲ ಪ್ರದಾಯಿನಿಯಾದ ಶಿಲ್ಪವು ಮೋಕ್ಷ ಸಾಧಕವೂ ಆಗಿದೆ.

ಏಭಿಃ ಸುಖಂ ಜೀವಿಯುರ್ಲೋಕಾಃ। ೮೯
ಏಭಿರಾಪ್ನುಯಾನ್ನಿಃ ಶ್ರೇಯಸಂ। ೯೦
ಏಭಿರ್ಭವನ್ತಿ ಜಗಂತಿ ಚಕ್ಷುಷ್ಮಂತಿ। ೯೧
ಏಭಿಃ ಪೂಜ್ಯನ್ತೇಽತ್ರ ವೇಧಸಃ ಸ್ಥಪತಯಶ್ಚ। ೯೨
ಏಭಿಃ ಪೂರ್ಣಂ ಭವತ್ಯಾನಂದಂ ಚ। ೯೩
ಏಭಿರ್ನಿರ್ಮುಕ್ತವಃ ಪ್ರಾಪ್ನುವನ್ತಿ ಮೋಕ್ಷಂ। ೯೪

ಏಭಿ ಸುಖಮಿತಿ.। ಜ್ಞಾನಸಾಧನತಾಮಾಹ। ಏಭಿಶ್ಚಕ್ಷುಷ್ಮಂತೀತಿ। ಈದೃಶಜ್ಞಾನಾದಿ ಸರ್ವಫಲ ಪ್ರದಾತೃತ್ವ ಹೇತುಕಂ ಭಗವತ್ತೇಜೋಂಶ.ಸಂಭೂತ ಪಂಚಪುರುಷಾಣಾಂ ತಾನನು ಸರತಾಂ ಸ್ಥಪತೀನಾಂ ಚ ಪೂಜ್ಯತಾಮಾಹ। ಏಭಿರಿತಿ। ಕಃ ಪುನಃ ಸ್ಥಪತಿರಿತಿ। ಬಹುಗುಣಃ। ಕೇ ತೇ ಗುಣಾಃ ? ತಾನನುಶಿಂಷ್ಯಃ। ಸರ್ವ ಶಾಸ್ತ್ರ ಸಂವಿತ್, ನ್ಯೂನಾತಿರಿಕ್ತಾಂಗಹಾನಿಃ, ಧರ್ಮರತಿಃ ದಯಾ ಮಾತ್ಸರ್ಯಾಸೂಯಾಭಾವಃ ತಂತ್ರವಿತ್ತಿಃ ಸತ್ಕುಲ ಪ್ರಸೂತಿಃ ಗಣಿತ ಪುರಾಣ ಚಿತ್ರ ಸರ್ವದೇಶ ಜ್ಞಾನಂ ಸತ್ಯಮಿಂದ್ರಿಯ ಜಯಃ ಕೋಪ ಪ್ರಮಾದಾಭಾವಃ ಸೌಮನಸ್ಯಂ ವಾಸ್ತುವಿದ್ಯಸಂವಿಚ್ಚೇತಿ। ಆನಂದ ಮಿತಿ ಛಾಂದಸೀ ಕ್ಲೀಬತಾ।

ಎಲ್ಲಾ ಶಾಸ್ತ್ರಗಳಲ್ಲೂ ಸಿದ್ಧಾಂತವನ್ನು ವಿವರವಾಗಿ ಪ್ರತಿಪಾದಿಸಿದ ನಂತರ ಫಲವನ್ನು ಹೇಳುವುದು ಸಂಪ್ರದಾಯ. ಇದನ್ನು ಅನುಸರಿಸಿ ಶಿಲ್ಪ ಶಾಸ್ತ್ರದ ಸ್ವರೂಪವನ್ನು ವಿವರಿಸಿದ ನಂತರ ಆ ಶಾಸ್ತ್ರದ ಅಭ್ಯಾಸದಿಂದ ಉಂಟಾಗುವ ಫಲವನ್ನು ವಿವರಿಸಲಾಗಿದೆ.

ಏಭಿಃ ಸುಖಂ ಜೀವೇಯುರ್ಲೋಕಾಃ ಎಂಬ ಸೂತ್ರದಿಂದ ಮೊದಲಾಗಿ ಏಭಿಃ ಮುಮುಕ್ಷವಃ ಪ್ರಾಪ್ನುವಂತಿ ಮೋಕ್ಷಂ ಎಂಬ ಸೂತ್ರದ ಕೊನೆಯವರ ವಿಗೂ ಫಲವನ್ನು ಬೋಧಿಸುವ ಶ್ರುತಿಗಳು ಪಠಿತವಾಗುತ್ತವೆ.

ಶಿಲ್ಪವು ಸರ್ವವಿಧವಾದ ಫಲವನ್ನು ಉಂಟುಮಾಡುವುದೇ ಅಲ್ಲದೆ ಮೋಕ್ಷಸಾಧನವೂ ಆಗಿರುತ್ತದೆ. ಶಿಲ್ಪವೇದ ಪ್ರತಿಪಾದ್ಯವಾದ ದೇವಾಲಯ ನಿರ್ಮಾಣಾದಿಗಳಿಂದ ಎಲ್ಲ ಜನರೂ ಸುಖವನ್ನು ಹೊಂದುವರು. ಆಯಾಯ ದೇವತಾ ಉಪಾಸಕರು ಆಯಾಯ ಮಂತ್ರ ಪ್ರತಿಪಾದ್ಯವಾದ ಲಕ್ಷಣಾದಿಗಳಿಗೆ ಅನುಗುಣವಾದ ಶಿಲ್ಪಕ್ರಮದಿಂದ ನಿರ್ಮಿತವಾದ ದೇವತಾರೂಪಧ್ಯಾನಾದಿ ಗಳಿಂದ ಚಿತ್ತಶುದ್ಧಿಯನ್ನೂ ಜ್ಞಾನವನ್ನು ಹೊಂದುವುದರಿಂದ ಶಿಲ್ಪವು ಮೋಕ್ಷ ಸಾಧನವೂ ಆಗಿರುತ್ತದೆ. ಈ ಅಭಿಪ್ರಾಯದಿಂದಲೇ **ಏಭಿರಾಪ್ನುಯಾನ್ನಿಶ್ಶ್ರೇಯಸಂ** ಎಂದು ಸೂತ್ರವು ಪ್ರವೃತ್ತವಾಗಿರುತ್ತದೆ. ಏಭಿರ್ಭವಂತಿ ಜಗಂತಿ ಚಕ್ಷುಷ್ಮಂತಿ ಎಂಬ ಸೂತ್ರದಿಂದ ದೇವತಾರಾಧನೆಯ ಮೂಲಕವಾಗಿ ಜ್ಞಾನಪ್ರಾಪ್ತಿಯು ಆಗುತ್ತದೆ ಎಂದು ಬೋಧಿಸುವ ಕಾರಣದಿಂದ ಶಿಲ್ಪವು ಜ್ಞಾನ ಸಾಧನವಾಗಿರುತ್ತದೆ.

ಸರ್ವಫಲಗಳನ್ನುಂಟು ಮಾಡಲು ಕಾರಣವಾದ ಶಿಲ್ಪಜ್ಞಾನವನ್ನು ಬೋಧಿಸುವ ಪಂಚ ಪುರುಷರು ವಿಶ್ವಕರ್ಮ ಪರಮೇಶ್ವರನ ಅಂಶಾವತಾರ ಗಳು. ಇವರು ಆದಿ ಪಂಚರ್ಷಿಗಳಾಗಿ ಗುರುಗಳೂ, ಲೋಕಪೂಜ್ಯರೂ, ಸಂಪ್ರದಾಯ ಪ್ರವರ್ತಕರೂ ಆಗಿರುವುದರಿಂದ ಇವರನ್ನು ಅನುಸರಿಸುವ ಸ್ಥಪತಿಗಳೂ ಕೂಡ ಪೂಜಾದಿಗೌರವಗಳಿಗೆ ಅರ್ಹರಾಗಿದ್ದು ಪೂಜಿಸಲ್ಪಡುತ್ತಾರೆ ಎಂಬುದನ್ನು **ಏಭಿಃ ಪೂಜ್ಯಂತೇ ಅತ್ರ ಸ್ಥಪತಯಃ** ಎಂಬ ಸೂತ್ರವು ಬೋಧಿಸುತ್ತದೆ. ಸ್ಥಪತಿಯಾಗಲು ಅರ್ಹತೆ ಏನು ? ಆತನ ಗುಣಗಳೇನು ?

ಸಕಲ ಶಾಸ್ತ್ರಗಳ ಜ್ಞಾನವಿರುವಾತನು ಸಾಮುದ್ರಿಕಾ ಶಾಸ್ತ್ರದಲ್ಲಿ ಹೇಳಿರು ವಂತೆ ಶರೀರದಲ್ಲಿ ಎಲ್ಲಾ ಅಂಗಾಂಗಗಳು ಸರಿಯಾದ ಪ್ರಮಾಣದಲ್ಲಿ ನ್ಯೂನಾತಿ ರಿಕ್ತವಿಲ್ಲದೆ ಇರುವಂತೆ ಇರಬೇಕು. ಧರ್ಮಾಚರಣೆಯಲ್ಲಿ ಆಸಕ್ತಿ ಇರಬೇಕು. ದಯಾವಂತನಾಗಿರಬೇಕು. ಯಾರ ವಿರುದ್ಧವಾದರೂ ಸರಿಯೇ ಬಹುದಿನಗಳ

ಕಾಲ ಸ್ಥಿರವಾದ ದ್ವೇಷವನ್ನು, ಅಸೂಯೆಯನ್ನು ಪಡೆದವನಾಗಿರಕೂಡದು. ಆಯಾಯ ಶಿಲ್ಪ ಜ್ಞಾನಕ್ಕನುಕೂಲವಾಗಿ ತಂತ್ರಗಳ ತಿಳಿವೂ ಅವಶ್ಯಕವಾಗಿರಬೇಕು. ಸದ್ವಂಶಜನಾಗಿ ಪರಂಪರಾನುಗತ ಶಿಲ್ಪಿಯ ಕುಟುಂಬದಲ್ಲಿ ಜನಿಸಿರಬೇಕು. ಗಣಿತ, ಶಿಲ್ಪ, ಪುರಾಣ ಮುಂತಾದುವಲ್ಲಿ ಹೇಳಿರುವ ಲೋಕಶಾಸ್ತ್ರಗಳ ರಹಸ್ಯ ಜ್ಞಾನ, ವೇದ ವೇದಾಂಗಗಳಲ್ಲಿ ವಿವರಿಸಿರುವ ಆಚಾರ ಮತ್ತು ಶಾಸ್ತ್ರಗಳ ಸಂಕೇತ ಜ್ಞಾನ, ಆಧ್ಯಾತ್ಮದ ತಿಳಿವು, ಲೋಹ, ಶಿಲಾ, ದಾರು ಶಾಸ್ತ್ರಗಳೊಂದಿಗೆ ವ್ಯಾಪಕವಾದ ಅನುಭವ, ತಂತ್ರಶಾಸ್ತ್ರದಲ್ಲಿ ಪ್ರಾವೀಣ್ಯತೆ, ಆಗಮಶಾಸ್ತ್ರಗಳ ರಹಸ್ಯಗಳ ತಿಳಿವನ್ನು ರೂಢಿಸಿಕೊಂಡಿರಬೇಕು. ಇಂದ್ರಿಯ ನಿಗ್ರಹವುಳ್ಳವನೂ, ದೋಷ ಸ್ವಭಾವಿಯಲ್ಲದವನೂ, ಕಾರ್ಯಗಳನ್ನು ಮಾಡುವಾಗ ತಪ್ಪು ಮಾಡದವನೂ, ಇತರರಿಗೆ ಹಿತವನ್ನು ಮಾಡುವವನೂ, ಮೃದು ಮಾತುಗಳನ್ನಾಡುವವನು ಶುದ್ಧ ಮನಸ್ಸುಳ್ಳವನೂ, ಶಿಲ್ಪಾಗಮದಲ್ಲಿ ಸಮಗ್ರವಾದ ಪರಿಣತಿಯನ್ನು ಹೊಂದಿರುವವನೂ ಆಗಿರಬೇಕು. ಈ ಎಲ್ಲವೂ 'ಗುಣ' ಗಳೆಂದು ಕರೆಯಲ್ಪಡುತ್ತವೆ. ಸ್ಥಪತಿಯಾದವನಿಗೆ ಈ ಎಲ್ಲಾ ಗುಣಗಳೂ ಇರಬೇಕಾದುದು ಅತ್ಯಾವಶ್ಯಕ.

ಸ್ಥಪತಿ ಎಂಬ ಹೆಸರು ಬರಬೇಕಾದರೆ ಬೃಹಸ್ಪತಿ ಸವನವನ್ನು ಮಾಡಬೇಕೆಂದು ಅಮರಕೋಶದಲ್ಲಿ (ಬ್ರಹ್ಮವರ್ಗ) **ಸಗೀಷ್ಪತೀಷ್ಟ್ಯಾ ಸ್ಥಪತಿಃ** ಎಂದು ಹೇಳಿ ಸ್ಪಷ್ಟಗೊಳಿಸಿದೆ. ಈ ಬಗ್ಗೆ ಭಾಗವತದ ಈ ಶ್ಲೋಕಗಳನ್ನು (ಸ್ಕಂದ ೩-ಅ ೧೨) ಪರಿಶೀಲಿಸಬಹುದು–

**ಋಗ್ಯಜುಸ್ಸಾಮಾಥರ್ವಾಖ್ಯಾನ್**
**ಕ್ರಮಾತ್ಪೂರ್ವಾದಿ ಭಿರ್ಮುಖೈಃ ।**
**ಶಸ್ತ್ರಮಿಜ್ಯಾಸ್ತುತಿಸ್ತೋಮಂ**
**ಪ್ರಾಯಶ್ಚಿತ್ತಂ ವ್ಯಧಾತ್ ಕ್ರಮಾತ್ ॥ ೩೭**

**ಆಯುರ್ವೇದಂ ಧನುರ್ವೇದಂ**
**ಗಾಂಧರ್ವಂ ವೇದಮಾತ್ಮಭೂಃ ।**
**ಸ್ಥಾಪತ್ಯಂಚ ಸೃಜದ್ವೇದಂ**
**ಕ್ರಮಾತ್ಪೂರ್ವಾದಿಭಿರ್ಮುಖೈಃ ॥ ೩೮**

ಷೋಡಶುಕ್ಥ್ಯಃ ಪೂರ್ವವಕ್ತ್ರಾ-
ತ್ಸ್ವರಿಷ್ಕ ಗಿಷ್ಟುತಾವಥ ।
ಅಪ್ತೋರ್ಯಾಮಾತಿರಾತ್ರೌ
ವಾಜಪೇಯಂಚ ಗೋಸವಮ್ । ೪೦

ಬ್ರಹ್ಮನ ಪೂರ್ವಾದಿ ಮುಖಗಳಿಂದ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳು ಕ್ರಮವಾಗಿ ಹೇಗೆ ಮೂಡಿ ಬಂದವೋ ಅದೇ ರೀತಿಯಾಗಿ ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಸ್ಥಾಪತ್ಯವೇದ (ಶಿಲ್ಪಾಗಮ) ಗಳೂ ಕೂಡ ಕ್ರಮವಾಗಿ ಆವಿರ್ಭವಿಸಿದವು. ಪೂರ್ವ ಮುಖದಿಂದ ಷೋಡಶ್ಯುಕ್ಥ ಯಜ್ಞಗಳು, ದಕ್ಷಿಣ ಮುಖದಿಂದ ಜಯಾದಿ ಅಗ್ನಿಷ್ಟೋಮಗಳೂ, ಪಶ್ಚಿಮ ಮುಖದಿಂದ ನಪ್ತೋರ್ಯಾಮಾತಿ ರಾತ್ರಿಗಳು, ಉತ್ತರ ಮುಖದಿಂದ ವಾಜಪೇಯಾಶ್ವಮೇಧಗಳು ಸೃಷ್ಟಿ ಗೊಂಡವು.

ಇದರಿಂದ ಬ್ರಹ್ಮನ ಉತ್ತರಮುಖದಿಂದ ಅಥರ್ವವೇದ, ಬ್ರಹ್ಮಮಂತ್ರ, ಸ್ಥಾಪತ್ಯವೇದ, ವಾಜಪೇಯಾಶ್ವಮೇಧಗಳು ಸೃಷ್ಟಿಗೊಂಡವೆಂಬುದು ಸ್ಪಷ್ಟ ವಾಗಿದೆ. ಸ್ಥಾಪತ್ಯ ವೇದೋತ್ಪತ್ತಿ ಸ್ಥಾನದಲ್ಲಿಯೇ ವಾಜಪೇಯ ಯಜ್ಞವು ಹುಟ್ಟಿರುವುದರಿಂದ ವಾಜಪೇಯ ಯಜ್ಞದಲ್ಲಿ ಬೃಹಸ್ಪತಿಗೆ ಪ್ರಾಧಾನ್ಯತೆ ಬಂದಿದೆ. ವಾಜಪೇಯ ಯಜ್ಞವು ಬೃಹಸ್ಪತಿ ಸವನವೆಂದು ಹೆಸರು ಪಡೆದಿದ್ದ್ಮ ಇದೇ ಕಾರಣದಿಂದಲೇ ಬೃಹಸ್ಪತಿ ಸವನವನ್ನು ಮಾಡುವವರಿಗೆ ಸ್ಥಪತಿ ಪಟ್ಟವು ಸಿದ್ಧಿಸುತ್ತದೆ.

ಶಿಲ್ಪವೇದದ ಜ್ಞಾನವುಳ್ಳವರಾಗಿದ್ದು ಈ ಪ್ರಕಾರದ ಗುಣಗಳುಳ್ಳ ಸ್ಥಪತಿಗಳಿಂದ ಎಲ್ಲರಿಗೂ ಸಂಪೂರ್ಣವಾದ ಸಂತೋಷವುಂಟಾಗುವುದು. ಅನಂದಂ ಎಂಬ ಶಬ್ದವನ್ನು ನಪುಂಸಕ ಲಿಂಗವಾಗಿ ಉಪಯೋಗಿಸಲ್ಪಟ್ಟಿರು ತ್ತದೆ. ಈ ಪ್ರಯೋಗವು ವೈದಿಕವಾಗಿರುವುದಾಗಿದ್ದು ವೇದದಲ್ಲಿ ಮಾತ್ರವೇ ಕಂಡುಬರುವುದಾಗಿರುತ್ತದೆ. ಮೋಕ್ಷವನ್ನು ಹೊಂದಲು ಇಚ್ಛೆಯುಳ್ಳವರು ಈ ಸ್ಥಪತಿಯಿಂದ ಮೋಕ್ಷವನ್ನು ಹೊಂದುವರು.

ಇತ್ಯೇವಂ ಭವತಿ ಶಿಲ್ಪಂ | ೯೫

**ಇತ್ಯೇವಂ ಭಗವತಿ ಶಿಲ್ಪಮಿತಿ | ಸರ್ವೋಪಸಂಹಾರಃ |**

ಶಾಸ್ತ್ರ ಪ್ರತಿಪಾದ್ಯವಾಗಿರುವುದೆಲ್ಲವನ್ನೂ ಬೋಧಿಸುವುದಕ್ಕಾಗಿ **ಇತ್ಯೇವಂ ಭವತಿ ಶಿಲ್ಪಂ** ಎಂಬ ಸೂತ್ರದಿಂದ ಉಪಸಂಹಾರವನ್ನು ನಿರ್ದೇಶಿಸಲಾಗಿದೆ.

ಶಿಲ್ಪಗ್ಂ ಹಾಸ್ಮಿನ್ನಧಿಗಮ್ಯತೇ | ೯೬

ತಸ್ಮಾಜ್ಜಗತ್ಸರ್ಜನಂ ಭವತಿ ಶಿಲ್ಪಂ | ೯೭

**ನ ಕೇವಲ ಮುಕ್ತ ಪೂರ್ವ ದೇವಾಲಯ ನಿರ್ಮಾಣಾದೀನ್ಯೇವ ಶಿಲ್ಪಾನಿ ಕಿಂತು ಚೇಷ್ಟಾಮಾತ್ರಮಪಿ ಶಿಲ್ಪಮೇವೇತ್ಯಾಹ | ಶಿಲ್ಪಂ ಹಾಸ್ಮಿನ್ನಧಿಗಮ್ಯತ ಇತಿ | ಅಯಮಭಿ ಸಂಧಿಃ | ಅಸ್ಮಿನ್ನಿತಿ ಸರ್ವ ನಾಮ ಶಬ್ದ ಉಪಸ್ಥಿತಾರ್ಥವಾಚೀ | ಪ್ರತ್ಯಕ್ಷಾದ್ಯುಪಸ್ಥಿತೇ ಸಂಕೋಚ [redacted] ಭಾವಾತ್ಸರ್ವತ್ರೇತಿ ಅರ್ಥಃ ಸಿಧ್ಯತಿ | [redacted] ಸರ್ವತ್ರ ಶಿಲ್ಪಮಿತಿ | ನ ಚ ವಾಚ್ಯಂ ನ ಪಶ್ಯಾಮಃ ತಾನ್ ಯೇ ಚೇಷ್ಟಾ ಸಾಮಾನ್ಯೇ ಶಿಲ್ಪಶಬ್ದಂ ಪ್ರಯುಂಜತ ಇತಿ | ತತಶ್ಚ ವೃದ್ಧ ಪ್ರಯೋಗ ರೂಪ ಗುಣವಿಗಮಾತ್ಸರ್ವಸ್ಯ ಶಿಲ್ಪಶಬ್ದ ವಾಚ್ಯತ್ವಾ ಸಿದ್ಧಿರಿತಿ | ವಿಗುಣಾದ ಸಿದ್ಧಿರಿತಿ ಚೇನ್ನ | ಕಿಂ ಕಾರಣಂ ? ಯೋಗಾನುಗತೇಃ| ಕವಿ ಪ್ರಯೋಗ ರೂಪೋಪಾಯಾನಗತೇಃ| ಮೃಗಾಕ್ಷ್ಯಾಸ್ತಾರುಣ್ಯೇ ಕುಸುಮ ಶರ ಶಿಲ್ಪಂ ವಿಜಯತೇ ಇತ್ಯೇವಂ ಪ್ರಯುಂಜತೇ ಕವಯಃ | ನೈನ್ಯೈಷಾ ಮೃಗಾಕ್ಷೀ ತರುಣೇ ಮಾನದಂಡ ವಾಸ್ತ್ಯಾದಿಕ ಮಾದದಾನಾ ದೇವಾಲಯಾದಿ ನಿರ್ಮಿತ್ಸನೇ, ಯತ್ಕಾರಣಂ ಚ ಕುಸುಮಶರ ಸಂಬಂಧಃ ಶಿಲ್ಪಮುಪಬಧ್ನಾತಿ | ನಾತ ವಿಷಾಲಯಂ ನಿರ್ಮಿತ್ಸಾ ಗಂಧೇನಾಪ್ಯಾಘ್ರಾತು ಮರ್ಹತಿ | [redacted] ತು ಪಿಶಾಚಾವಿಷ್ಟಾ ಚೇಷ್ಟಂ ಚೇಷ್ಟೇತ್ಯೈವ ಚಿತ್ರಂ [redacted] ಚೇಷ್ಟಾಮಾತ್ರವಾಚಿ**

[illegible]೦ ಸಾಧ್ನುಮು ಇತಿ। ವಿಗುಣಾದ ಸಿದ್ಧಿರಿತಿಚೇನ್ನ ಯೋಗಾನು ಗತೇಃ। ನನು ತರುಣೀಚೇಷ್ಟಾಸು ಕಿಂ ರೂಢಮಿದಂ ಪದಂ ? ಓಮಿತ್ಯುರರೀಕುರ್ವತೋಽನ್ಯತ್ರಾ ಪ್ರಯೋಗ ರೂಪ ರೂಪನ್ವೈ ಗುಣ್ಯಾಪತ್ತಿರಿತಿ ಚೇನ್ನ ಯೋಗಾನುಗತೇಃ। ಸಾಧನಾರ್ಥಃ ಪಪ್ರತ್ಯಯಃ ಶಿಲ್ಪಶಬ್ದೇ ಇತ್ಯುಕ್ತಂ ತನ್ನ ಪ್ರಸ್ಮರ್ತವ್ಯಂ। ಗಮುಕತ್ವ ಮಭಿಪ್ರೇತ್ಯ ಸಾಧನಶಬ್ದಂ ಪ್ರಯುಂಜನಾಂಶ್ಚ ಪಶ್ಯಾಮಃ। ಧೂಮೋ ವಹ್ನಿ ಸಾಧನಮಿತಿ। ನ ಖಲು ಧೂಮೋ ವಹ್ನಿಂ ಜನಯತಿ ವೈಪರೀತ್ಯಾವಗತೇಃ ವಹ್ನೇರ್ಧೂಮೋ ಜಾಯತ [illegible]। ತದಿಹ ಧೂಮೋ ವಹ್ನಿ ಗಮುಕ ಇತಿ ಸಿದ್ಧ್ಯತಿ। ತತಶ್ಚಯೈಷಾ ಕಟಾಕ್ಷಾದಿ ಚೇಷ್ಟಾ [illegible] ಸಾ ಮನ್ಮಥಾವೇಶ ಗಮನೀ ಸಾಧ ನಾರ್ಥ ಯೋಗಾನುಗಮಾತ್ ನ ಪ್ರಯೋಗಾನು ಪಪತ್ತಿರಿತಿ ವಿಗುಣಾದ ಸಿದ್ಧಿರಿತಿ ಚೇನ್ನ ಯೋಗಾನುಗತೇಃ, ನನು ತರುಣೀ ಚೇಷ್ಟಾಸು ಪ್ರಯೋಗಃ ತಚ್ಚೇಷ್ಟಾ ವಾಚಕತ್ವಂ ಗಮಯೇತ್ [illegible] ಸರ್ವಕ್ರಿಯಾ ವಾಚಕತ್ವಮಿತಿ। ಸರ್ವಕ್ರಿಯಾ ವಾಚಕತ್ತ್ವ ಸಾಧಕೆ ಗುಣಭಾವತ್ ನ ಸರ್ವಕ್ರಿಯಾ ವಾಚಕತ್ವ ಸಿದ್ಧಿರಿತಿ ಚೇನ್ನ ಯೋಗಾನುಗತೇಃ "ಜಪೋ ಜಲ್ಪಃ, ಶಿಲ್ಪಂ ಸಕಲಮಪಿ ಮುದ್ರಾ ವಿರಚನಂ" [illegible] ಕ್ರಿಯಾ ಸಾಮಾನ್ಯೇಽಪಿ ಶಿಲ್ಪಶಬ್ದ ಪ್ರಯೋಗ ರೂಪೋಪಾಯಾವಗಮಾತ್ ಇತ್ಯಪಿ ಸೂತ್ರಾರ್ಥಃ। ಏವಂ ಯೋಗ ಮಾತ್ರಾತ್ಕಥಂ ಚಿದನ್ಯತ್ರ ಪ್ರಯೋಗೇ ಸಿದ್ಧೇ ಯೋಗ ರೂಢಂ ಜಗತ್ಸರ್ಜನೇ ಶಿಲ್ಪಮಿತಿ ನ ಕೋಽಪಿ ವಿರೋಧ ಇತ್ಯಾಹ। ತಸ್ಮಾದಿತಿ।

ಶಿಲ್ಪಗ್‍ಂ ಹಾಸ್ಮಿನ್ನಧಿಗಮ್ಯತೇ ಎಂಬ ಸೂತ್ರವು ಈ ಮೊದಲು ಹೇಳಲಾಗಿರುವ ದೇವಾಲಯ ನಿರ್ಮಾಣ ಮುಂತಾದುವು ಶಿಲ್ಪವೆನಿಸು ವಂತೆಯೇ ಚೇಷ್ಟಾ ಮಾತ್ರವೂ ಕೂಡ ಶಿಲ್ಪವಾಗಿರುವುದು ಎಂದು ಬೋಧಿಸು ತ್ತದೆ. ಅಸ್ಮಿನ್ ಎಂಬ ಸರ್ವನಾಮವು ಉಪಸ್ಥಿತಾರ್ಥ ವಾಚಕವಾಗಿದೆ. ಪ್ರತ್ಯಕ್ಷವಾಗಿರುವುದರಲ್ಲಿ [illegible] ಅನುಮಾನವೂ ಇಲ್ಲದ ಕಾರಣದಿಂದ

'ಸರ್ವತ್ರ' ಎಂಬ ಅರ್ಥವು ಸ್ಫುರಿಸುತ್ತದೆ. ಆದ್ದರಿಂದ **ಸರ್ವತ್ರ ಶಿಲ್ಪಂ** ಎಂದು ಅರ್ಥವಾಗುತ್ತದೆ. ಅನೇಕಾರ್ಥ ಶಬ್ದಗಳು ಸಂಯೋಗದಿಂದ ಉದ್ದೇಶಿತ ಅರ್ಥವನ್ನು ಬೋಧಿಸುವುದರಲ್ಲಿ ಶಬ್ದಶಕ್ತಿಯು ಸಂಕುಚಿತಗೊಳ್ಳುತ್ತದೆ ಎಂಬುದು ಶಾಸ್ತ್ರದ ನಿಯಮ. ಆದರೆ ಪ್ರಕೃತದಲ್ಲಿ ಅಸ್ಮಿನ್ ಎಂಬ ಶಬ್ದವು ಸರ್ವನಾಮವಾಗಿರುವ ಕಾರಣದಿಂದ ಶಬ್ದದ ವಾಚ್ಯಾರ್ಥವು ಸಂಕುಚಿತ ಗೊಳ್ಳದೆ ಶಬ್ದಶಕ್ತಿಯಿಂದ ಗಮ್ಯವಾಗುವ ಎಲ್ಲಾ ಅರ್ಥಗಳೂ ಈ ಶಬ್ದ ದಿಂದಲೇ ಸ್ಪಷ್ಟವಾಗುವ ಕಾರಣದಿಂದ **ಅಸ್ಮಿನ್** ಎಂಬ ಶಬ್ದಕ್ಕೆ ಸರ್ವತ್ರ ಎಂದು ಅರ್ಥವಾಗುತ್ತದೆ. ಇದರಿಂದ ಎಲ್ಲಾ ಕಡೆಯಲ್ಲಿಯೂ, ಎಲ್ಲಾ ವಿಧ ದಲ್ಲಿಯೂ ಶಿಲ್ಪವೇ ಇರುವುದು ಎಂದು ಅರ್ಥವಾಗುತ್ತದೆ. ಆದ್ದರಿಂದ ಸಾಮಾನ್ಯವಾದ ಚೇಷ್ಟೆಯೂ ಕೂಡ ಶಿಲ್ಪ ಎಂದೇ ಗ್ರಹಿಸಬೇಕಾಗುತ್ತದೆ.

ಎಲ್ಲ ಶಬ್ದಗಳಿಗೂ ಇರುವಂತ ಆಯಾಯ ಅರ್ಥೋಪಸ್ಥಿತಿಗೆ ಕಾರಣ ವಾದ ಶಕ್ತಿ ಗ್ರಹವು ಪೂರ್ವ ಪ್ರಯೋಗಾದಿಗಳ ಮೂಲಕ ಇರಬೇಕಾಗಿರುವುದ ರಿಂದ ಶಿಲ್ಪಶಬ್ದವು ಚೇಷ್ಟಾ ಸಾಮಾನ್ಯ ವಾಚಿಯಾಗಲು ಅವಕಾಶವಿಲ್ಲ. ಆದ್ದರಿಂದ ಚೇಷ್ಟಾ ಸಾಮಾನ್ಯಕ್ಕೆ ಶಿಲ್ಪಶಬ್ದವಾಚ್ಯತ್ವವು ಸಿದ್ಧವಾಗುವುದಿಲ್ಲ ಎಂಬ ಆಕ್ಷೇಪ ಉಂಟಾಗುತ್ತದೆ.

ಯೋಗಾನುಗತಿ ರೂಪದಿಂದ ಈ ರೀತಿಯ ಆಕ್ಷೇಪವು ಉಂಟಾಗಲು ಸಾಧ್ಯವಿಲ್ಲ. **ಯೋಗಾನುಗತಿ** ಎಂದರೆ ಕವಿ ಪ್ರಯೋಗ ರೂಪವಾಗಿರುತ್ತದೆ. ಶಿಲ್ಪಶಬ್ದವನ್ನು ಚೇಷ್ಟಾ ಸಾಮಾನ್ಯ ವಾಚಕವಾಗಿ ಕವಿಗಳು ಪ್ರಯೋಗಿಸಿದ್ದಾರೆ. **ಮೃಗಾಕ್ಷ್ಯಾಃ ತಾರುಣ್ಯೇ ಕುಸುಮಶರ ಶಿಲ್ಪಂ ವಿಜಯತೇ** ಎಂಬುದು ಕವಿ ಪ್ರಯೋಗ. ಯೌವನದಲ್ಲಿರುವ ಸುಂದರಿಯಾದ ಹರಿಣಾಕ್ಷಿ ಕಾಮಿನಿಯು ಹೂಡುವ ಮನ್ಮಥನ [illegible] ಚಮತ್ಕಾರವು ಜಯಪ್ರದವಾಗುತ್ತದೆ ಮತ್ತು ಎಲ್ಲವನ್ನು ಮೀರಿ ಅತಿಶಯವಾಗಿರುತ್ತದೆ ಎಂಬುದು ಈ ವಾಕ್ಯದ ಅಭಿಪ್ರಾಯ. ಕಾಮಿನಿಯು ತನ್ನ ಯೌವನದಲ್ಲಿ ಮನ್ಮಥಾವಿಷ್ಟಳಾಗಿ ಕಾಮ ಸಂಬಂಧವಾದ ಚೇಷ್ಟೆಗಳನ್ನು ಆಚರಿಸುತ್ತಾಳೆ. ಈ ಚೇಷ್ಟಾಚರಣೆಯು ಮನ್ಮಥವಿಕಾರದ ಫಲವಾಗಿ ಉಂಟಾಗಿರುತ್ತದೆ. ಇದೇ ಕಾರಣದಿಂದಲೇ ಕವಿಯು ಶಿಲ್ಪ ಶಬ್ದವನ್ನು ಚೇಷ್ಟಾ ವಾಚಿಯನ್ನಾಗಿ ಪ್ರಯೋಗಿಸಿದ್ದಾನೆ. ತರುಣಿಯ ಮಾನ

ದಂಡಾದಿಗಳನ್ನು ತೆಗೆದುಕೊಂಡು ದೇವಾಲಯಾದಿಗಳನ್ನು ನಿರ್ಮಾಣ ಮಾಡಲು ಅವಳಿಗೆ ಉಂಟಾಗಿರುವ ಕುಸುಮಶರ ಸಂಬಂಧವು ಶಿಲ್ಪ ಸಾಧನೆವಾಗುವುದಿಲ್ಲ. ಇದರಿಂದ ಆಲಯಾದಿಗಳ ನಿರ್ಮಾಣವು ತರುಣಿಗೆ ಸಂಬಂಧಪಟ್ಟ ವಿಷಯವಾಗಿರುವುದಿಲ್ಲ. ಆದರೆ ಕಾಮ ಚೇಷ್ಟಗಳನ್ನು ಆಚರಿಸುವುದು ಮಾತ್ರವೇ ಅವಳ ವೃತ್ತಿಯಾಗಿರುತ್ತದೆ. ಇಲ್ಲಿ ಶಿಲ್ಪಶಬ್ದಕ್ಕೆ ಕಾಮಚೇಷ್ಟೆಯೆಂದೇ ನಿಖರವಾಗಿ ಅರ್ಥವಾಗುವುದರಿಂದ ಶಿಲ್ಪಶಬ್ದವು ಚೇಷ್ಟಾ ಸಾಮಾನ್ಯವಾಚಿ ಎಂದೇ ಹೇಳಬೇಕು.

ಪ್ರಸ್ತುತ ಉದಾಹರಣೆಯಲ್ಲಿ ಶಿಲ್ಪಶಬ್ದವು ಚೇಷ್ಟಾ ಸಾಮಾನ್ಯವಾಚಿಯಾಗಿರುವಂತೆ ಬೇರೆಯ ಕಡೆಗಳಲ್ಲಿ ಪ್ರಯೋಗವಾಗಿಲ್ಲ ಆದ್ದರಿಂದ ತರುಣಿಯ ಮದನ ಚೇಷ್ಟೆಗಳನ್ನು ಬಿಂಬಿಸುವ ಅರ್ಥವು ಶಿಲ್ಪಶಬ್ದಕ್ಕೆ ರೂಢವಲ್ಲ ಎಂದು ಆಕ್ಷೇಪಿಸಬಹುದು.

ಶೀಲ ಧಾತುವಿನ ಮೇಲೆ ಸಾಧನ ಎಂಬ ಅರ್ಥದಲ್ಲಿ ಪ್ರತ್ಯಯವು ಬಂದು ಶಿಲ್ಪಶಬ್ದದ ರೂಪವು ಸಿದ್ಧವಾಗಿರುತ್ತದೆ. ಆದ್ದರಿಂದಲೇ ಶಿಲ್ಪಶಬ್ದವು ಜ್ಞಾನ ಸಾಧನವೆಂದು ಅರ್ಥವನ್ನು ಹೇಳಲಾಗುತ್ತದೆ. ಸಾಧನ ಎಂಬ ಶಬ್ದವನ್ನು ಗಮಕ ಎಂಬ ಅರ್ಥದಲ್ಲಿ ಪ್ರಯೋಗಿಸಲಾಗಿದೆ. ತರುಣಿಯ ಚೇಷ್ಟಾದಿಗಳು ಕಾಮನ ಚಾತುರ್ಯ ಗಮಕವೆಂದು ಅರ್ಥವಾಗುತ್ತದೆ. ಗಮಕವೇ ಸಾಧನವಾಗಿರುತ್ತದೆ. ಧೂಮವು ವಹ್ನಿ (ಅಗ್ನಿ) ಸಾಧನ ಎಂದು ಹೇಳುವ ವಾಕ್ಯದಲ್ಲಿ [ಧೂಮ (ಹೊಗೆ) ಇರುವ ಕಡೆ ವಹ್ನಿ (ಅಗ್ನಿ) ಯು ಇರುವುದು] ಅಗ್ನಿಯ ಜ್ಞಾನ ಉಂಟಾಗಲು ಹೊಗೆಯ ಜ್ಞಾನವು ಗಮಕವಾಗಿರುತ್ತದೆ. ಹೊಗೆಯು ಅಗ್ನಿಯನ್ನುಂಟು ಮಾಡುವುದಿಲ್ಲ. ಅಗ್ನಿಯಿಂದಲೇ ಹೊಗೆಯು ಉಂಟಾಗುತ್ತದೆ. ಹೊಗೆಯ ಜ್ಞಾನವು ಅಗ್ನಿಯ ಜ್ಞಾನಕ್ಕೆ ಗಮಕವಾಗಿರುವಂತೆಯೇ ತರುಣಿಯ ಕಟಾಕ್ಷಾದಿಗಳು ಮನ್ಮಥ ವೇಗ ಗಮಕಗಳಾಗಿರುತ್ತವೆ. ಸಾಧನಾರ್ಥವಾಚಿಯನ್ನು ಗಮಕವೆಂದು ತಿಳಿಯಬೇಕು. ಕವಿ ಪ್ರಯೋಗದಲ್ಲಿ ಶಿಲ್ಪಶಬ್ದವು ಸಾಧನಾರ್ಥ ವಾಚಕವಾಗಿರುವುದರಿಂದ ಪ್ರಯೋಗವು ಸಾಧನವಾಗಿದೆ.

[redacted] ಪ್ರಯೋಗದಿಂದ ಚೇಷ್ಟಾಮಾತ್ರ ವಾಚಕತ್ವವು ಸಿದ್ಧವಾಗುತ್ತದೆ,

ಸರ್ವಕ್ರಿಯಾ ವಾಚಕತ್ವವು ಸಿದ್ಧವಾಗುವುದಿಲ್ಲ ಎಂದು ಹೇಳಬಾರದು. ಸರ್ವಕ್ರಿಯಾ ವಾಚಕತ್ವವೂ ಕೂಡ ಸಿದ್ಧವಾಗುವ **ಜಪ್ರೋ ಜಲ್ಪಃ ಶಿಲ್ಪಂ ಸಕಲಮಪಿ ಮುದ್ರಾವಿರಚನಂ** ಎಂದು ಪ್ರಯೋಗವಿವೆ. ಶಿಲ್ಪಶಬ್ದವು ಈ ಪ್ರಯೋಗದಿಂದ ಕ್ರಿಯಾ ಸಾಮಾನ್ಯವಾಚಿಯಾಗಿರುವ ಕಾರಣ ಚೇಷ್ಟಾ ಸಾಮಾನ್ಯವೂ ಕೂಡ ಶಿಲ್ಪವಾಗಿರುವುದೆಂದು ತಿಳಿಯತಕ್ಕದ್ದು. **ಶಿಲ್ಪಗ್ಂ ಹಾಸ್ಮಿನ್ನಧಿಗಮ್ಯತೇ** ಎಂಬ ಸೂತ್ರಾರ್ಥವು ಹಿಂದೆ ಹೇಳಿದಂತೆಯೇ ಯುಕ್ತವಾಗಿರುವುದು.

ಶಿಲ್ಪ ಶಬ್ದಾರ್ಥವು ನಿಷ್ಪೃಷ್ಟವಾಗಿರುವ ಕ್ರಮವನ್ನು ಹಿಂದೆ ಹೇಳಿರುವುದು ಯೋಗಮಾತ್ರದಿಂದಲೇ. ಚೇಷ್ಟಾಮಾತ್ರವು ಶಿಲ್ಪವೆಂದು ಕವಿ ಪ್ರಯೋಗಕ್ಕೆ ಅರ್ಥವನ್ನು ಹೇಳಿರುವಾಗ ಯೋಗರೂಢವಾದ ಅರ್ಥದಿಂದ ಜಗತ್ಸರ್ಜನ ರೂಪಾರ್ಥದಲ್ಲಿ ಶಿಲ್ಪಶಬ್ದ ಪ್ರಯೋಗವು ಯುಕ್ತವಾಗಿಯೇ ಇರುತ್ತದೆ. ಈ ಪ್ರಕಾರವಾಗಿ ಅರ್ಥವನ್ನು ಹೇಳುವುದರಿಂದ ಯಾವ ವಿಧವಾದ ಶಾಸ್ತ್ರ ವಿರೋಧವೂ ಇರುವುದಿಲ್ಲ. ಈ ಕಾರಣದಿಂದಲೇ **ತಸ್ಮಾತ್ ಜಗತ್ಸರ್ಜನಂ ಶಿಲ್ಪಂ ಭವತಿ** ಎಂದು ಜಗತ್‌ಸೃಷ್ಟಿಯನ್ನು ಶಿಲ್ಪವೆಂದು ಈ ಸೂತ್ರದಲ್ಲಿ ಬೋಧಿಸಿರುವುದು.

**ಯಜ್ಞೋ ಭವತು ವಿಜ್ಞಾನಂ ಚ ಶಿಲ್ಪಂ। ೯೮**
**ಲೌಕಿಕಂ ಭವತು ವೈದಿಕಂ ಚಾಪಿ ಶಿಲ್ಪಂ। ೯೯**

**ಯಜ್ಞೋ ಭವತ್ವಿತ್ಯಾದಿ....ವೈದಕಂ ಚಾಪಿ ಶಿಲ್ಪಮಿತ್ಯಂತಃ ವ್ಯಾಖ್ಯಾತ ಪೂರ್ವಃ । ಅಧಿಕಾರಣ ಮಾಹ । ಬ್ರಾಹ್ಮಣೇತಿ । ಇತ್ಯುಪನಿಷತ್ ಇತ್ಯಂತಃ ಸ್ಪಷ್ಟಾರ್ಥಃ ।**

ಯಜ್ಞವೆಂಬುದು ಶಿಲ್ಪದಿಂದಲೇ ಉಂಟಾಗಿರುತ್ತದೆ. ಶಿಲ್ಪವೂ ಕೂಡ ಯಜ್ಞ ಸಾಧನವಾಗಿರುತ್ತದೆ. ಶಿಲ್ಪವು ಪುಣ್ಯಸಾಧನವಾಗಿರುತ್ತದೆ. ಶಿಲ್ಪದಿಂದಲೇ ಮೋಕ್ಷ ಜ್ಞಾನವೂ, ಶಾಸ್ತ್ರ ಜ್ಞಾನವೂ ಕೂಡ ಉಂಟಾಗುತ್ತದೆ,

ಲೌಕಿಕವಾದ ವ್ಯವಹಾರವೂ ಕರ್ಮಗಳು ಮತ್ತು ವೈದಿಕ ಕರ್ಮಗಳೂ ಕೂಡ ಶಿಲ್ಪದಿಂದಲೇ ಆಚರಿಸಲ್ಪಡುತ್ತವೆ. ಜೀವನವೆಲ್ಲಾ ಶಿಲ್ಪಮಯವಾಗಿರುತ್ತದೆ. ಅದೇ ರೀತಿಯಾಗಿ ವೈದಿಕಾಚಾರ, ಜೀವನವೂ ಶಿಲ್ಪಮಯವಾಗಿರುತ್ತದೆ.

**ಬ್ರಾಹ್ಮಣಾ ಮೇವೇದಗ್ಂ ಶಿಲ್ಪಂ ಭವತು। ೧೦೦**

**ತತ್ತ್ವಂ ಭವತಿ ಶಿಲ್ಪಂ। ೧೦೧**

**ರಹಸ್ಯಂ ಭವತಿ ಶಿಲ್ಪಂ। ೧೦೨**

**ಜಗತ್ಸರ್ವಗ್ಂ ಶಿಲ್ಪಮೇವ ಭವತಿ। ೧೦೩**

**ತದೇವ ವಿಶ್ವವರ್ಧಕಂ ಭವತಿ। ೧೦೪**

**–ಇತ್ಯುಪನಿಷತ್ ॥**

**ಬ್ರಾಹ್ಮಣೇತಿ ... ಇತ್ಯುಪನಿಶತ್ ಇತ್ಯಂತಃ ಸ್ಪಷ್ಟಾರ್ಥಃ।**

ಬ್ರಾಹ್ಮಣನಾದವನು ಶಿಲ್ಪಶಾಸ್ತ್ರದ ಅಧ್ಯಯನದಲ್ಲಿ ಅಧಿಕಾರಿ ಎಂಬುದನ್ನು ಈ ಮೊದಲೇ ಹೇಳಲಾಗಿದೆ. ಆದ್ದರಿಂದ ಆ ಸಂಪ್ರದಾಯಸ್ಥ ಬ್ರಾಹ್ಮಣರಿಗೆಲ್ಲಾ ಈ ವಿಧವಾದ ಶಿಲ್ಪಜ್ಞಾನವು ಉಂಟಾಗಲಿ. ತತ್ತ್ವಗಳೂ ಕೂಡ ಶಿಲ್ಪವೇ ಆಗಿರುತ್ತವೆ. ಜಗತ್ತೆಲ್ಲವೂ ಶಿಲ್ಪದಿಂದಲೇ ಆವೃತ್ತವಾಗಿದೆ. ಈ ಶಿಲ್ಪವು ಜಗತ್ತೆಲ್ಲವನ್ನೂ ಅಭಿವೃದ್ಧಿ ಗೊಳಿಸುತ್ತಿರಲಿ. ಹೀಗೆ ಹೇಳಿ ಈ ಉಪನಿಷತ್ತು ಶಿಲ್ಪದ ಸರ್ವಾತ್ಮಕತ್ವ, ಸರ್ವ ವಿಷಯ ಬೋಧಕತ್ವಗಳನ್ನು ವಿವರವಾಗಿ ವಿವರಿಸಿ ಪ್ರತಿಪಾದಿಸಿದೆ.

**ಓಂ ಸಹನಾವವತು। ಸಹನೌ ಭುನಕ್ತು।**
**ಸಹ ವೀರ್ಯಂ ಕರವಾವಹೈ।**

**ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವ ಹೈ।**
**ಓಂ ಶಾನ್ತಿಃ ಶಾನ್ತಿಃ ಶಾನ್ತಿಃ॥**

**॥ ಇತಿ ಯಜುಷಾಥರ್ವಣ ಶಿಲ್ಪವಿದ್ಯಾರಹಸ್ಯೋಪನಿಷತ್ಸಮಾಪ್ತಾ ॥**
**ನಿರುಕ್ತಾರ್ಥಾ ಶಾನ್ತಿಃ**

ಸಹನಾವವತು ಎಂಬ ಶಾಂತಿ ಮಂತ್ರದ ಅರ್ಥವನ್ನು ಈ ಭಾಷ್ಯದ ಪ್ರಾರಂಭದಲ್ಲಿಯೇ ವಿವರಿಸಲಾಗಿದೆ. ಗುರುವು 'ಸಹನಾವವತು – ಮಾವಿದ್ವಿಷಾವಹೈ' ಎಂದು ತನಗೂ ತನ್ನ ಶಿಷ್ಯ ಸಮುದಾಯಕ್ಕೂ ಉಪ ಶಾಂತಿಯನ್ನೂ, ರಕ್ಷಣೆಯನ್ನೂ ತನ್ನ ಅಧ್ಯಯನ ಅಧ್ಯಾಪನಾಗಳ ವಿಷಯದಲ್ಲಿ ತಮ ತಮಗೆ ದ್ವೇಷಾದಿಗಳು ಉಂಟಾಗದೆ ಇರಲು ವೀರ್ಯವತ್ತಾಗಿ ತೇಜ ಶ್ಶಾಲಿಗಳಾಗಿರುವಂತೆ ವೇದ ಪುರುಷನು ಅನುಗ್ರಹಿಸಲೆಂದು ಈ ಮಂತ್ರಗಳಿಂದ ಪ್ರಾರ್ಥಿಸುತ್ತಾನೆ.

ಶಾನ್ತಿ ಎಂದು ಮೂರು ಆವರ್ತಿ ಹೇಳಿರುವುದು ಶಾನ್ತಿಯು ಅವಶ್ಯಕ ವಾಗಿ ಉಂಟಾಗಬೇಕು ಎಂದು ಅರ್ಥವನ್ನು ಬೋಧಿಸುವುದು.

**ಅರ್ಥಃ—**

**ಯೋ ಜೀವಾನ್ ಕರ್ಮವಶ್ಯಾನ್ ದೃಢತರತಮಸಾ ಮೋಹಿ ತಾನ್ ಪಾತು ಕಾಮೋ ವಿಜ್ಞಾನಂ ದಿಕ್ಸುರೇಭ್ಯೋ ಭವತಿ ಜನಿ ತಾನೇಕ ಕರ್ಮಾನುರೂಪಂ। ಸಜ್ಞ್ಞಾನಾನಂದ ರೂಪೋಽಪ್ಯಗಣಿತ ಮಹಿಮಸ್ವಾತ್ಮ ಮಾಯಾಂ ಸ್ವಶಕ್ತಿಂ ಸಂಗೃಹ್ಣನ್ ವೇದಶಿಲ್ಪಂ ಪ್ರಕಟಯತಿ ತರಾಂ ಸಾಂಬಮೂರ್ತಿಃ। ನೋಽವ್ಯಾತ್ ॥**

ಇತಿ ಸಂಗ್ರಹ ಸೂಕ್ತಿಃ ಸರ್ವಾತ್ಮನಾ [redacted] ಸುಂದರೀತಿ ಸಿದ್ಧಂ ॥
ಇತಿ ಕೌಮಾರ ಭಾಷ್ಯಂ ಸಮಾಪ್ತಂ।

ಶಿಲ್ಪಶಬ್ದದ ವ್ಯುತ್ಪತ್ತಿ ವಿವರಿಸಿ, ಶಿಲ್ಪ ಶಬ್ದಾರ್ಥವನ್ನು ತಿಳಿಹೇಳಿ ಈ ಬಗ್ಗೆ ಉಂಟಾಗಬಹುದಾದ ಅನೇಕ ಅನುಮಾನಗಳಿಗೆ ಉತ್ತರಗಳನ್ನು ಹೇಳಿ,

ಶಿಲ್ಪವೇ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವೆಂದು ಶಿಲ್ಪದ ಸರ್ವಾರ್ಥ ಸಾಧಕತ್ವ, ಸರ್ವಜ್ಞಾನೋಪಯೋಗಿತ್ವವನ್ನು ಬೋಧಿಸಿರುವುದರಿಂದ ಈ ಸಂಗ್ರಹ ಸೂಕ್ತಿಯು ಈ ಪ್ರಕಾರವಾದ ಮಹಿಮೆಯುಳ್ಳ ಶಿಲ್ಪವೇದವನ್ನು ಪ್ರಕಟಿಸಿರುವ ಸಾಂಬಮೂರ್ತಿ ಸ್ವರೂಪನಾದ ವಿಶ್ವಕರ್ಮ ಪರಮೇಶ್ವರನು ನಮ್ಮೆಲ್ಲರನ್ನೂ ಚೆನ್ನಾಗಿ ರಕ್ಷಿಸಲಿ ಪ್ರಾರ್ಥಿಸುತ್ತದೆ.

**ಇಲ್ಲಿಗೆ ಕೌಮಾರಭಾಷ್ಯವು ಸಮಾಪ್ತಗೊಂಡಿದೆ**

**॥ ಓಂ ತತ್ಸತ್ ॥**

# ನೀರಾಜನವಮ್

-ಶ್ರೀಮತೇ ಸಚ್ಚಿದಾನಂದಮೂರ್ತಯೇ ಪರಮಾತ್ಮನೇ
ಸತ್ಯಾಯ ಶಿವರೂಪಾಯ ಸುಂದರಾಯ ಚ ಮಂಗಳವಮ್ ॥ ೧ ॥

ವಿಶ್ವಾಂತರ್ವರ್ತಿ ಗೋಳಾನಾಂ ವಿಭ್ರಮ ಭ್ರಮ ಹೇತವೇ
ಆರ್ತ್ಯಾರ್ತಿಹರಣೋದ್ಯೋಗ ಸಂಗರಾಯ ಚ ಮಂಗಳಮ್ ॥ ೨ ॥

ಗಾಯತ್ರೀ ಮಾತೃಹೃತ್ಪದ್ಮಕೋಶ ಪೀಠಾಧಿ ವಾಸಿನೇ
ಅನೀಶ್ವರಾಯ ನಾಥಾಯ ಸತ್ಯಕಾಮಾಯ ಮಂಗಳಮ್ ॥ ೩ ॥

ಋಕ್ಸಾಮ ಯಾಜುಷಾಥರ್ವ ಪ್ರಣವ ಪ್ರಭವಾಯವೇ
ಪಂಚಭೂತಾತ್ಮನೇ ಪಂಚಶಿಲ್ಪಕರ್ತ್ರೇ ಚ ಮಂಗಳಮ್ ॥ ೪ ॥

ಮನ್ವಾದೀನಾಂ ಮಹರಿ/ರ್ಷೀಣಾಂ ಪಂಚಾನಾಂ ಜನಕಯತೇ
ಅನಂತಕೋಟಿ ವಿಶ್ವಾನಾಂ ಸವಿತ್ರೇ ಶುಭಮಂಗಳವಮ್ ॥ ೫ ॥

ಸಹಸ್ರಾಕ್ಷಾಯ ದೇವಾಯ ಸಹಸ್ರ ಶಿರಸೇ ಸತೇ
ಸಹಸ್ರ ಪಾದಪದ್ಮಾಯ ಶಾಶ್ವತಾಯ ಚ ಮಂಗಳವಮ್ ॥ ೬ ॥

ದಿಕ್ಪಾಲ ಲೋಕಪಾಲಾನಾಂ ಶಾಸ್ತ್ರೇ ಭರ್ತ್ರೇ ಮಹರ್ಷಯೇ
ಕವಯೇ ಬ್ರಹ್ಮಣೇ ವಿಶ್ವಕರ್ಮಣೇ ಶುಭಮಂಗಳಮ್ ॥ ೭ ॥

ಕಿರಿಟನೇ ಕುಂಡಲಿನೇ ಮುಕ್ತಾಗ್ರೈವೇಯ ಕಾಯ ಚ
ಹೈಮ ಯಜ್ಞೋಪವೀತಾಯ ಪ್ರಭವೇ ಶುಭಮಂಗಳಮ್ ॥ ೮ ॥

ಸುರಾಸುರ ಕಿರೀಟಾಗ್ರ ಪದ್ಮರಾಗಾರುಣಾಂಘ್ರಯೇ
ಶ್ರುತಿಮಾತೃಧ್ವಸ್ತ ಪಾಪೌಘ ನಾಮ್ನೇ ಚ ಶುಭಮಂಗಳವಮ್ ॥ ೯ ॥

ಅಣವೇ ಮಹತ ಸರ್ವೇ ಗುರವೇ ಲಘವೇ ಚ ತೇ
ಈಶಾಯ ವಶಿನೇ ಪ್ರಾಪ್ತಕಾಮಾಯ ಜಯಮಂಗಳವಮ್ ॥ ೧೦ ॥

ಸರ್ವ ದೈವತ ರೂಪಾಯ ಸರ್ವಾಗಮ ಫಲಾಯ ಚ
ಸರ್ವ ಯಜ್ಞಾತ್ಮನೇ ಸರ್ವಸಾಕ್ಷಿಣೇ ಶುಭಮಂಗಳವಮ್ ॥ ೧೧ ॥

ಸಂಕರ್ಮಣೇ ಸಂಕೃತಯೇ ಸ್ಥಾಪತ್ಯಾಮೃತ ವರ್ಷಿಣೇ
ಶ್ರೀಮದ್ವಿರಾಡ್ವಿಶ್ವಕರ್ಮ ಬ್ರಹ್ಮಣೇ ಶುಭಮಂಗಳವಮ್ ॥ ೧೨ ॥



# ಶಿಲ್ಪ ವಿದ್ಯಾ ರಹಸ್ಯೋಪನಿಷತ್ತು

ಶಿಲ್ಪ ವಿದ್ಯಾ ರಹಸ್ಯೋಪನಿಷತ್ತು ಕೌಮಾರ ಭಾಷ್ಯದೊಂದಿಗೆ ವಿಪುಲವಾದ ವಿವರಣೆಯೊಂದಿಗೆ ಈಗ ಕನ್ನಡದಲ್ಲಿ ಪ್ರಕಟವಾಗುತ್ತಿದೆ. ಶಿಲ್ಪಾಧ್ಯಾಯಿಗಳೆಲ್ಲರೂ ಬಹು ಶ್ರದ್ಧೆಯಿಂದ ಅಧ್ಯಯನ ಮಾಡುವ ಈ ಉಪನಿಷತ್ತು ಯಜುರ್ವೇದದ ಕ್ರಿಯೆಗಳನ್ನು, ಅಥರ್ವಣ ವೇದದ ರಹಸ್ಯ ತಂತ್ರಗಳನ್ನೂ ಮೈಗೂಡಿಸಿಕೊಂಡಿರುವುದರಿಂದ ಇದು ಎರಡೂ ಶಾಖೆಗಳಿಗೆ ಸೇರಿರುವ ವಿಶಿಷ್ಟವಾದ ಉಪನಿಷತ್ತು.

ಶಿಲ್ಪದ ಬಗ್ಗೆ ಅದರ ತತ್ತ್ವಾರ್ಥ, ಮಹತ್ವ, ವಿಭಾಗಗಳು, ಅದರ ಮಾರ್ಗಗುರಿ ಇತ್ಯಾದಿಗಳ ಬಗ್ಗೆ ಅನೇಕ ಶಾಸ್ತ್ರೀಯ ಸತ್ಯಗಳನ್ನು ಈ ಶಿಲ್ಪವಿದ್ಯಾ ರಹಸ್ಯೋಪನಿಷತ್ತಿನಲ್ಲಿ ಉದ್ಘಾಟನೆ ಮಾಡಲಾಗಿದೆ. ಪರಂಪರಾಗತ ಶಿಲ್ಪಿಗಳ ಜೀವನದ ದೃಷ್ಟಿಕೋಣ, ಅವರು ತಮ್ಮ ಶಿಲ್ಪದ ಬಗ್ಗೆ ಇರಿಸಿಕೊಂಡಿರುವ ಭಕ್ತಿಗಳನ್ನು ಈ ಉಪನಿಷತ್ತು ಪರಿಚಯ ಮಾಡಿಕೊಡುತ್ತದೆ. ಸಾಧಾರಣವಾಗಿ ಜ್ಞಾನಮಾರ್ಗದಲ್ಲಿ ಜಿಜ್ಞಾಸೆ, ತರ್ಕ, ಚರ್ಚೆ, ಉಪದೇಶಗಳಿಂದ ಆತ್ಮದ ತಿಳಿವನ್ನು ಗಳಿಸುವುದಷ್ಟೇ ಉಪನಿಷತ್ತುಗಳು ಹೇಳುತ್ತವೆ. ಆದರೆ ಈ ಉಪನಿಷತ್ತು ಶಿಲ್ಪಕರ್ಮ ನಿರ್ವಹಣೆಯಿಂದಲೇ ಆತ್ಮದ ತಿಳಿವನ್ನು, ಮುಕ್ತಿಯನ್ನು ಪಡೆಯಬಹುದೆಂದು ಹೇಳಿರುವುದು ಮಾತ್ರವಲ್ಲ ಈ ಶಿಲ್ಪಕರ್ಮ ನಿರ್ವಹಣೆಯಿಂದಲೇ ಜನಸೇವೆಯೂ ನಡೆಯುವುದರಿಂದ ಇದೇ ಜ್ಞಾನಯೋಗ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಈ ದೃಷ್ಟಿಯಿಂದಲೂ ಇದು ಬಹು ಪ್ರಧಾನವಾದ ಅಂಶ  ಪ್ರಾಚೀನ ಸಂಪ್ರದಾಯದಲ್ಲೂ ಜ್ಞಾನಯೋಗವೆಂದು ಕರ್ಮಯೋಗವನ್ನು ದೂರೀಕರಿಸಿರಲಿಲ್ಲ. ಅಥವಾ ಬೆವರು ಸುರಿಸುವ ಕೆಲಸವು ಕೀಳು ಎಂದು ಭಾವಿಸಿರಲಿಲ್ಲ. ಅದನ್ನು ಮಹಾಯಜ್ಞವೆಂದು ಗೌರವಿಸಲಾಗಿತ್ತು. ಈ ಉಪನಿಷತ್ತು ದುಡಿಮೆಗೆ ಸಲ್ಲಿಸಿರುವ ಗೌರವವೆಂದರೂ ತಪ್ಪಲ್ಲ.

ಕನ್ನಡದ ವೈದಿಕ,ಆಗಮ ಸಾಹಿತ್ಯಕ್ಕೆ ಇದೊಂದು ಅಪೂರ್ವ ಕೊಡುಗೆ

—ಪ್ರಕಾಶಕರು.